ಸಂಚಿಕೆ 7 / ನವೆಂಬರ್ 2020
ಚಾತುರ್ಮಾಸಿಕ / ಕನ್ನಡ ಆವೃತ್ತಿ / ಬೆಂಗಳೂರು

Azim Premji University

ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿ

# ಲರ್ನಿಂಗ್ ಕರ್ವ್

ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿಯ ಒಂದು ಪ್ರಕಟಣೆ



## ವಿಕಲತೆಯುಳ್ಳ ಮಕ್ಕಳಿಗಾಗಿ ಬೋಧನೆಯ ದೃಷ್ಟಿಕೋನಗಳು

---

**ಪ್ರಕಾಶನ ಸಂಯೋಜಕರು**
ಶಾಂತ ಕೆ
ಬಿ.ಎಸ್.ಗಾಯತ್ರಿ

**ಕನ್ನಡ ಉಪಕ್ರಮಗಳು**
ಎಸ್.ವಿ.ಮಂಜುನಾಥ್
ದಿನೇಶ್ ಮಡಗಾಂವ್‌ಕರ್

**ಅನುವಾದ ಪರಿಷ್ಕರಣೆ ಮತ್ತು ಸಂಪಾದನೆ**
ಚಂದ್ರಶೇಖರ್ ಮಂಡೆಕೋಲು

**ಸಂಪಾದಕೀಯ ಕಾರ್ಯಾಲಯ**
ಸಂಪಾದಕರು, ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯ,
ಪಿಇಎಸ್ ಕಾಲೇಜ್ ಆಫ್ ಎಂಜಿನಿಯರಿಂಗ್ ಕ್ಯಾಂಪಸ್,
ಎಲೆಕ್ಟ್ರಾನಿಕ್ ಸಿಟಿ, ಬೆಂಗಳೂರು 560100
ಇಮೇಲ್:publications@apu.edu.in
ವೆಬ್‌ಸೈಟ್: www.azimpremjiuniversity.edu.in

**ಮುಖಪುಟ ವಿನ್ಯಾಸ**
ಬ್ಯಾನಿಯನ್ ಟ್ರೀ
98458 64765

**ಒಳಪುಟ ವಿನ್ಯಾಸ**
ಪೆಂಟಗಾನ್ ಕಮ್ಯುನಿಕೇಷನ್ ಪ್ರೈ ಲಿಮಿಟೆಡ್.
+91 080 22212942/946

**ಕನ್ನಡ ಆವೃತ್ತಿ ವಿನ್ಯಾಸ**
ಫ್ಲವರ್‌ಗ್ರಾಫಿಕ್ ಡಿಸೈನ್ ಸ್ಟುಡಿಯೋ
080 26643097 / 9880288378
info@flowergrafic.com

**ಮುದ್ರಣ**
ಎಸ್. ಸಿ. ಪಿ. ಎಲ್. ಬೆಂಗಳೂರು 560 062
+91 80 2686 0585, +91 98450 42233
www.scpl.net

ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ "ಲರ್ನಿಂಗ್ ಕರ್ವ್" ಶಿಕ್ಷಣವನ್ನು ಕುರಿತ ಪ್ರಕಟಣೆಯಾಗಿದ್ದು ಸಾರ್ವಕಾಲಿಕ ಮಹತ್ವವುಳ್ಳ ಮತ್ತು ಮೌಲ್ಯವುಳ್ಳ ಸಾಂದರ್ಭಿಕ ಹಾಗು ನಿರ್ದಿಷ್ಟ ವಿಷಯಾಧಾರಿತ ಚರ್ಚಾ ವಿಷಯಗಳನ್ನು ಶಿಕ್ಷಕರು, ಶಿಕ್ಷಕ ಶಿಕ್ಷಕರು, ಶಾಲಾ ಮುಖ್ಯಸ್ಥರು, ಶಿಕ್ಷಣಾಧಿಕಾರಿಗಳು, ಶಿಕ್ಷಣ ಕಾರ್ಯಕರ್ತರು, ಪೋಷಕರು ಹಾಗು ಸರ್ಕಾರೇತರ ಸಂಸ್ಥೆಗಳಿಗೆ ತಲುಪಿಸುವ ಮಹತ್ತರ ಆಶಯವನ್ನು ಹೊಂದಿದೆ. ಇದು ವಿಭಿನ್ನ ಅಭಿಪ್ರಾಯಗಳನ್ನು ಮತ್ತು ದೃಷ್ಟಿಕೋನಗಳನ್ನು ವ್ಯಕ್ತಪಡಿಸಲು ವೇದಿಕೆಯನ್ನು ಒದಗಿಸುವುದೇ ಅಲ್ಲದೆ ಹೊಸ ಹೊಸ ಮತ್ತು ತಜ್ಞ ವಿಚಾರಧಾರೆಗಳನ್ನು, ಆಲೋಚನೆಯನ್ನು ಪ್ರಚೋದಿಸುವ ದೃಷ್ಟಿಕೋನಗಳನ್ನು ಹಾಗು ನವೀನ ಬೋಧನಾ ವಿಧಾನಗಳ ಕಥನಗಳನ್ನು ಹಂಚಿಕೊಳ್ಳಲು ಉತ್ತೇಜಿಸುತ್ತದೆ. ಶೈಕ್ಷಣಿಕ ರಂಗದ ಈ ವಿಚಾರ ಮಂಥನದಲ್ಲಿ ಶೈಕ್ಷಣಿಕ ಜ್ಞಾನ ಮತ್ತು ಪ್ರಾಯೋಗಿಕ ಅನುಭವಗಳ ನಡುವೆ ಸಮತೋಲನವನ್ನು ಕಾಯ್ದುಕೊಳ್ಳುವ ಪ್ರಯತ್ನ ನಮ್ಮದಾಗಿದೆ."

# ಸಂಪಾದಕರ ಮಾತು



ಇಂದು ಶಿಕ್ಷಣದ ಹಕ್ಕು ಒಂದು ಸಾರ್ವತ್ರಿಕ ಹಕ್ಕಾಗಿ ಸ್ಥಾಪಿತವಾಗಿದ್ದು, ವಿಶ್ವದ ಪ್ರತಿಯೊಂದು ದೇಶದ ಶಿಕ್ಷಣ ನೀತಿಗಳಲ್ಲಿ ಪ್ರತಿಪಾದಿಸಲಾಗಿದೆ. ಭಾರತದಲ್ಲಿ ವಿಶೇಷ ಅಗತ್ಯವುಳ್ಳ ವ್ಯಕ್ತಿಯ ಹಕ್ಕುಗಳ (The Rights of Person With Disabilities Act-RPWD,2016)) ಕಾಯ್ದೆಯು ಸರ್ಕಾರಿ ಶಾಲೆಗಳು ನಿರ್ದಿಷ್ಟವಾಗಿ ವೈಕಲ್ಯ ಹೊಂದಿರುವ ಮಕ್ಕಳ ಕಲಿಕೆಗೆ ಸಂಬಂಧಿಸಿದಂತೆ ಅನುಸರಿಸಬೇಕಾದ ಒಂದು ಸಮಗ್ರ ಪಟ್ಟಿಯನ್ನು* ರೂಪಿಸಿದೆ.

ಆದರೆ ಇದು ಒಂದು ಮಗುವು ನಮಗೆ ಮೊದಲಿನ ಆದ್ಯತೆ ಎಂಬುದನ್ನು ಗುರುತಿಸಿ, ಮಗುವಿನ ವೈಕಲ್ಯಗಳು ಅದರ ವ್ಯಕ್ತಿತ್ವಕ್ಕೆ ಆಕಸ್ಮಿಕವಷ್ಟೇ ಎಂಬ ಭಾವನೆಯಿಂದ, ವೈಕಲ್ಯವನ್ನು ಹೊಂದಿರುವ ಪ್ರತಿ ಮಗುವಿಗೆ ಸಂಬಂಧಿಸಿದಂತೆ ಅದರ ಸಾಮರ್ಥ್ಯದತ್ತ ಗಮನಹರಿಸಿ ನೀಡುವ ಒಂದು ಗುಣಮಟ್ಟದ ಶಿಕ್ಷಣವಾಗಿರಬೇಕು. ವೈಕಲ್ಯವುಳ್ಳ ಮಕ್ಕಳಿಗೆ ವಿಶೇಷ ಶಾಲೆಗಳನ್ನು ಒದಗಿಸುವ ಅಗತ್ಯದ ಬಗ್ಗೆ ಬಹಳ ಕಾಲದಿಂದ ಪರ ಮತ್ತು ವಿರೋಧಿ ವಾದಗಳಿದ್ದು, ಇಂದು ಎಲ್ಲರನ್ನೂ ಒಳಗೊಳ್ಳುವ ಸಮನ್ವಯ ಶಿಕ್ಷಣ ಎಂಬುವುದರತ್ತ ಅಭಿಪ್ರಾಯವು ಬದಲಾಗಿದೆ. ಆರ್‌ಪಿಡಬ್ಲ್ಯುಡಿ (2016) ಕಾಯ್ದೆಯೂ ಕೂಡ ಈ ಅಭಿಪ್ರಾಯವನ್ನು ಅನುಮೋದಿಸುತ್ತಾ, ಈ ಶಿಕ್ಷಣವು ವೈಕಲ್ಯ ಹೊಂದಿರುವ ಮತ್ತು ವೈಕಲ್ಯಗಳಿರದ ವಿದ್ಯಾರ್ಥಿಗಳೆಲ್ಲರೂ ಒಟ್ಟಿಗೆ ಕಲಿಯುವಂತಹ, ವೈಕಲ್ಯವುಳ್ಳ ಬೇರೆ ಬೇರೆ ರೀತಿಯ ವಿದ್ಯಾರ್ಥಿಗಳ ಅಗತ್ಯಗಳನ್ನು ಪೂರೈಸಲು ಬೋಧನೆ ಮತ್ತು ಕಲಿಕೆಯ ವ್ಯವಸ್ಥೆಯು ಸೂಕ್ತವಾಗಿ ಹೊಂದಿಕೊಂಡಿರುವ ಒಂದು ಶಿಕ್ಷಣ ವ್ಯವಸ್ಥೆ ಎಂದು ವ್ಯಾಖ್ಯಾನಿಸುತ್ತದೆ.* ಪ್ರತಿಯೊಂದರ ವೈವಿಧ್ಯತೆಯನ್ನು ಸ್ವೀಕರಿಸುವುದು ರೂಢಿಯಾಗಿರುವ ಈ ಕಾಲದಲ್ಲಿ ನಾವಿರುವಾಗ ವಿಶೇಷ ಅಗತ್ಯವುಳ್ಳ ಮಕ್ಕಳಿಗೂ ಕೂಡ ನಮ್ಮ ಎಲ್ಲಾ ತರಗತಿ ಕೊಠಡಿಗಳಲ್ಲಿ ಕೊನೆಗೂ ಪ್ರವೇಶ ಸಿಗುತ್ತದೆಂಬ ಆಶಾಭಾವನೆಯಿದೆ.

ವೈಕಲ್ಯ ಇದೆಯೋ ಇಲ್ಲವೋ, ಪ್ರತಿಯೊಂದು ಮಗುವು ಸಾಮರ್ಥ್ಯದಲ್ಲಿ, ತಿಳುವಳಿಕೆ ಹೊಂದುವಲ್ಲಿ, ಅರ್ಥ ಮಾಡಿಕೊಳ್ಳುವಲ್ಲಿ ಮತ್ತು ಅದನ್ನು ಪರಿಷ್ಕರಿಸುವ ರೀತಿಯಲ್ಲಿ ಬೇರೆ ಬೇರೆಯಾಗಿದ್ದು, ಅನನ್ಯ ಹಾಗೂ ಭಿನ್ನವಾಗಿರುತ್ತದೆ. ಕಳೆದ ಎರಡು ದಶಕಗಳಲ್ಲಿ ಹೋವರ್ಡ್ ಗಾರ್ಡ್ನರ್‌ರವರ ಬಹುಸ್ವರೂಪಿ ಬುದ್ಧಿಮತ್ತೆ ಸಿದ್ಧಾಂತವು (Theory of Multiple Intelligences) ಇದರ ಕುರಿತು ಅರಿವು ಮೂಡಿಸಿ ಸಾಕಷ್ಟು ದೃಢವಾಗಿ ನೆಲೆಗೊಂಡಿದೆ. ನಾವು ಈ ಬಗ್ಗೆ ತಿಳಿದಿದ್ದರೂ, ಈಗಿನವರೆಗೆ ನಮ್ಮ ಪಠ್ಯಕ್ರಮ ಮತ್ತು ಪಠ್ಯವಿಷಯಗಳು ಕಟ್ಟುನಿಟ್ಟಾಗಿ ಏಕರೂಪದ ವಿಧಾನವನ್ನು ಆಶ್ರಯಿಸಿದ್ದು, ಅದನ್ನೇ ಅನುಸರಿಸಲು ಒತ್ತಾಯಿಸುತ್ತವೆ. ಪ್ರತಿಯೊಂದು ಮಗುವಿನ ಖಾಸಗಿತನವನ್ನು ಅಂಗೀಕರಿಸಿ ಗೌರವಿಸುವಲ್ಲಿ ಹಲವು ಅಂಶಗಳು ಈ ದಾರಿಯಲ್ಲಿ ಅಡ್ಡವಾಗಿ ನಿಂತಿವೆ ಮತ್ತು ಅನೇಕ ಸ್ಥಳಗಳಲ್ಲಿ ಅವು ಮುಂದುವರೆದಿವೆ. ಇವುಗಳಲ್ಲಿ ಕೆಲವು ಅಂಶಗಳು ಹೀಗಿವೆ: ಕಿಕ್ಕಿರಿದು ತುಂಬಿರುವ ತರಗತಿ ಕೊಠಡಿಗಳು, ಶಿಕ್ಷಕರಿಗೆ ಸೂಕ್ತ ತರಬೇತಿಯ ಕೊರತೆ, ಪೋಷಕರು ಮತ್ತು ಒಡಹುಟ್ಟಿದವರಿಂದ ಬೆಂಬಲದ ಕೊರತೆ ಮತ್ತು ಕೆಲವು ರೂಢಿಗತ ಸಾಂಸ್ಕೃತಿಕ ಮತ್ತು ಸಾಮಾಜಿಕ ಅಂಶಗಳು. ಈಗಾಗಲೇ ಹೆಚ್ಚು ಹೊರೆಯಿಂದ ಬಿರುಕು ಬಿಟ್ಟಿರುವ ಈ ವ್ಯವಸ್ಥೆಯಲ್ಲಿ ಅಗತ್ಯವಾದ ಸಮಗ್ರ ಬೆಂಬಲವಿಲ್ಲದೆ, ಬಹಳಷ್ಟು ಬೆಂಬಲ ಅಗತ್ಯವಿರುವ ಮಕ್ಕಳು ಇದರಿಂದಾಗಿ ಹಿಂದುಳಿಯುವುದು ನಿಜವೇ ಸರಿ. ಏಕೆಂದರೆ ಇದನ್ನು ಕಾರ್ಯಗತಗೊಳಿಸಲು ಶಾಲೆಗಳಲ್ಲಿ ಅಗತ್ಯ ಸೌಕರ್ಯಗಳು ಮತ್ತು ಸಲಕರಣೆಗಳು ಬೇಕಾಗಿವೆ. ಅಂದರೆ ಒಂದು ಶಾಲೆಯಲ್ಲಿ ತರಗತಿ ಕೊಠಡಿಗಳಿಗೆ ಸುಲಭತ ಪ್ರವೇಶ ಸೌಕರ್ಯ, ಪ್ರಯೋಗಾಲಯಗಳು, ಶಾಲಾ ಕಟ್ಟಡದ ಮೇಲ್ಮಹಡಿಗಳು, ಸಹಾಯಕ ಪರಿಕರಗಳಾದ ಬ್ರೈಲ್ ಪುಸ್ತಕಗಳು, ಛಾಯಾ ಶಿಕ್ಷಕರು (Shadow teachers), ಮಾತು ಕಲಿಸುವ ವಿಶೇಷ ಶಿಕ್ಷಕರು ಮತ್ತು ದೈಹಿಕ ಚಿಕಿತ್ಸಕರ ಅಭಾವವಿದೆ ಅಥವಾ ಅವು ಸಾಕಷ್ಟು ಸಂಖ್ಯೆಯಲ್ಲಿ ಇಲ್ಲ. ಒಂದು ಆದರ್ಶ ಸಮಾಜದಲ್ಲಿ ಇವೆಲ್ಲವೂ ಶಾಲೆಯಲ್ಲೇ ದೊರಕುತ್ತದೆ. ಶಿಕ್ಷಕರು ತಮಗೆ ಬೇಕಾದ ತರಬೇತಿ ಪಡೆಯುತ್ತಾರೆ, ಪೋಷಕರು ತಮ್ಮ ಮಕ್ಕಳೊಂದಿಗೆ ಸಾಕಷ್ಟು ಹೊತ್ತು ಇರಲು ಸಮಯ ಹೊಂದಿಸುತ್ತಾರೆ ಮತ್ತು ಸಮುದಾಯವು ಹೆಚ್ಚು ಕರುಣೆ ಹಾಗೂ ಸಹಾನುಭೂತಿಯನ್ನು ಹೊಂದಿರುತ್ತದೆ. ಈಗಿನ ಸಂದರ್ಭದಲ್ಲಿ, ಸಮರ್ಥ ಮಕ್ಕಳಿಗೆ ಹೋಲಿಸಿದರೆ ವೈಕಲ್ಯವುಳ್ಳ ಮಕ್ಕಳಿಗೆ ಬೇಕಾದ ಅಗತ್ಯತೆಗಳನ್ನು ಹೊಂದಿಸಲು ಸಾಧ್ಯವಾಗುವುದಿಲ್ಲ ಎಂಬುದು ಶಾಲೆಗಳ ಕಳಕಳಿಯಾಗಿದೆ. ಇಲ್ಲಿ ಒಳಗೊಳ್ಳುವ ಮತ್ತು ಸ್ವೀಕರಿಸುವ ವಿಚಾರವು ಪ್ರಮುಖ ಪಾತ್ರವನ್ನು ವಹಿಸುತ್ತವೆ. ಶಾಲೆಗಳು ನೆರೆಹೊರೆಯ ಎಲ್ಲ ಮಕ್ಕಳಿಗೆ ಪ್ರವೇಶ ನೀಡಿದರೆ ಸಮನ್ವಯ ಎಂಬುವುದು ಸ್ವಯಂ ಸಾಧ್ಯವಾಗುತ್ತದೆ. ವೈಕಲ್ಯವುಳ್ಳ ಮಕ್ಕಳು ತರಗತಿಯಲ್ಲಿರುವುದು ರೂಢಿಯಾದರೆ, ಸೂಕ್ಷ್ಮ ಸಂವೇದನಾಶೀಲತೆ ಮತ್ತು ಸ್ವೀಕಾರ ಮನೋಭಾವವು ಬೆಳೆಯುತ್ತದೆ. ಪೋಷಕರು ಕೂಡ ತಮ್ಮ ಮಕ್ಕಳನ್ನು ಮಕ್ಕಳಂತೆ ಕಾಣಲು, ವೈಕಲ್ಯದ ಮೇಲೆ ಗಮನಹರಿಸುವ ಬದಲು ಅವರ ಸಾಮರ್ಥ್ಯದತ್ತ ಲಕ್ಷ್ಯವಹಿಸಿ ಮೌಲ್ಯೀಕರಿಸಲು ಸಾಧ್ಯವಾಗುತ್ತದೆ. ಇವೆಲ್ಲವೂ ಇನ್ನಷ್ಟೇ ಸಾಧಿಸಬೇಕಾಗಿದ್ದು, ವೈಕಲ್ಯವನ್ನು ಒಪ್ಪುವ

ನಮ್ಮ ಹಾದಿಯಲ್ಲಿ ನಾವು ಇನ್ನೂ ಬಹಳ ದೂರ ಸಾಗಬೇಕಾಗಿದೆ. ಈ ನಿಟ್ಟಿನಲ್ಲಿ ಬಹಳ ಕೆಲಸ ನಡೆದಿದೆ ಮತ್ತು ನಿರಂತರ ಇದನ್ನು ನಿರ್ವಹಿಸುತ್ತಿರಬೇಕಾಗಿದೆ. ಪೋಷಕರು, ಶಿಕ್ಷಕರು ಮತ್ತು ಸಹಪಾಠಿಗಳು ಹೆಚ್ಚು ಅರಿವುಳ್ಳವರು ಮತ್ತು ಸಂವೇದನಾಶೀಲರು. ಪ್ರಾರಂಭದಲ್ಲಿ ಮಧ್ಯಪ್ರವೇಶ ಕಾರ್ಯಕ್ರಮಗಳು, ತಾರತಮ್ಯ ತೋರದ ಶಿಕ್ಷಕರು ಮತ್ತು ಶಾಲಾ ಮುಖ್ಯಸ್ಥರು, ವಿವಿಧ ಸಾಮರ್ಥ್ಯಗಳನ್ನು ಹೊಂದಿರುವವರಿಗೆ ಸೂಕ್ತವಾಗಿ ರೂಪುಗೊಂಡ ಪಠ್ಯಕ್ರಮಗಳು, ಹೊಂದಿಕೊಳ್ಳಬಲ್ಲ ಮೌಲ್ಯಮಾಪನ ವ್ಯವಸ್ಥೆಗಳು, ಇವೆಲ್ಲವೂ ಸಾಕಷ್ಟು ಬದಲಾವಣೆಯನ್ನು ಕಂಡಿವೆ.

ಈ ಸಂಚಿಕೆಯಲ್ಲಿ, ವೈಕಲ್ಯ ಹೊಂದಿರುವ ಮಕ್ಕಳನ್ನು ವಿವಿಧ ರೀತಿಯಲ್ಲಿ, ಆದರೆ ಸಮನ್ವಯದ ಏಕದೃಷ್ಟಿಯಿಂದ ಕಂಡಿರುವ ಲೇಖಕರ ವ್ಯಾಪಕ ಶ್ರೇಣಿಯ ಲೇಖನಗಳನ್ನು ಪ್ರಕಟಿಸಿದ್ದೇವೆ. ಇಲ್ಲಿ ವೈಕಲ್ಯವನ್ನು ಹೊಂದಿರುವ ಮಕ್ಕಳ ಶಿಕ್ಷಣಕ್ಕಾಗಿ ಅವಕಾಶಗಳನ್ನು ಒದಗಿಸಲು ಹಲವಾರು ವರ್ಷಗಳಿಂದ ಕ್ರಿಯಾಶೀಲವಾಗಿರುವ ಬೇರೆ ಬೇರೆ ಸಂಸ್ಥೆಗಳು ಬೆಳೆದುಬಂದ ಇತಿಹಾಸದ ಕುರಿತ ಲೇಖನಗಳಿವೆ. ಇನ್ನೂ ಕೆಲವು ಲೇಖನಗಳು ಇತಿಹಾಸವನ್ನು ಪ್ರಸ್ತುತಪಡಿಸುತ್ತಾ, ಭೂಗೋಳವನ್ನು ಇನ್ನೂ ಕೈಗೆಟಕುವ ರೀತಿಯಲ್ಲಿ, ಪ್ರಯಾಣದ ಮೂಲಕ ನೈಜ ಪ್ರಪಂಚದಲ್ಲಿ ಬದುಕಿನ ಅನುಭವವನ್ನು ಗಳಿಸಲು / ಜೀವನವನ್ನು ಅನುಭವಿಸಲು ಅವರಿಗೆ ಅವಕಾಶಗಳ ರೂಪ ರೇಖೆಯನ್ನು ತೋರಿಸಿವೆ. ಇನ್ನೂ ಕೆಲವು ಲೇಖಕರು ಭಾಷಾ ಸಾಮರ್ಥ್ಯ ಗಳಿಕೆಯ ಬಗ್ಗೆ, ಗೌರವಯುತ ಒಳಗೊಳ್ಳುವಿಕೆಯ ಬಗ್ಗೆ ಹಾಗೂ 'ಕಣ್ಣಿಗೆ ಕಾಣದ ವೈಕಲ್ಯ'ಗಳಾದ ಡಿಸ್ಲೆಕ್ಸಿಯಾ (Dyslexia), ಡಿಸ್ಕಾಲ್ಕುಲಿಯಾ (Dyscalculia) ಮತ್ತು ಆಟಿಸಂ (Autism)ಗಳಂತಹ ವಿಷಯಗಳ ಬಗ್ಗೆ ಬರೆದಿದ್ದಾರೆ. ಈವರೆಗೆ ಮರೆಮಾಚಲಾದ ವಿಷಯವಾದ, ವಿಶೇಷ ಅಗತ್ಯ ಬೇಕಾದ ಮಕ್ಕಳ ಲೈಂಗಿಕತೆ ಬಗ್ಗೆ ಕೂಡ ಒಂದು ಲೇಖನವು ಚರ್ಚಿಸಿದೆ. ಇಲ್ಲಿ ವಿಶೇಷ ಶಿಕ್ಷಕರಾಗಿರುವ ತಾಯಂದಿರು ಕಲಿಕೆಯ ಕಾರ್ಯವನ್ನು ನಿಭಾಯಿಸಲು, ವೈಕಲ್ಯವನ್ನು ತೊಡೆದು ಹಾಕಲು ಕ್ರೀಡಾ ಸ್ವರೂಪದಲ್ಲಿ ವಿಶ್ವಾಸಗಳಿಸಬಲ್ಲ ಪ್ರಾಯೋಗಿಕ ಸಲಹೆಗಳನ್ನು ನೀಡಿದ್ದಾರೆ. ಭವಿಷ್ಯದ ಅಗತ್ಯಗಳಿಗಾಗಿ ಶಿಕ್ಷಕರ ತರಬೇತಿಯ ಸಿದ್ಧತೆ ಕುರಿತು ಮಾಹಿತಿ ಪೂರ್ಣ ಲೇಖನವೂ ಇಲ್ಲಿದೆ. ಹಾಗೆಯೇ, ವಿಶೇಷ ಅಗತ್ಯ ಬೇಕಾದ ಮಗುವಿನೊಂದಿಗೆ ಬದುಕುವುದು ಹೇಗೆಂಬುದನ್ನು ವಿವರಿಸಿ, ವಾಸ್ತವ ಪರಿಸ್ಥಿತಿಯನ್ನು ತೋರಿಸಿರುವ ಪೋಷಕರ ಮತ್ತು ಒಡಹುಟ್ಟಿದವರ ಭಾವನೆಗಳನ್ನೂ ಸೇರಿಸಲಾಗಿದೆ. ನಮಗೆಲ್ಲರಿಗಾಗಿ ಹಂಚಿಕೊಂಡು, ಓದಿ ಆಲೋಚಿಸಲು ವಿಷಯಗಳನ್ನು ಪ್ರಸ್ತುತ ಪಡಿಸಿರುವ ಇನ್ನೂ ಹಲವು ಲೇಖನಗಳನ್ನು ಈ ಸಂಚಿಕೆ ಒಳಗೊಂಡಿದೆ. ಇವೆಲ್ಲದರಲ್ಲೂ ಖಂಡಿತವಾಗಿಯೂ ಕಂಡು ಬರುವ ಸಾಮಾನ್ಯ ಅಂಶವೆಂದರೆ ಎಲ್ಲವನ್ನೂ ಮಕ್ಕಳ ಹಿತದೃಷ್ಟಿಯಿಂದಲೇ ಪರಿಭಾವಿಸಿರುವುದು. ಮಕ್ಕಳ ವೈಕಲ್ಯತೆಯು ಅವರನ್ನು ವ್ಯಾಖ್ಯಾನಿಸುವುದಿಲ್ಲ. ಒಳಗೊಳ್ಳುವಿಕೆಯ ಮೂಲಕವೇ ನಾವು ಅವರ ಒಳಿತನ್ನು ಸ್ಥಾಪಿಸಬಹುದು. ಖಂಡಿತವಾಗಿ ಇಲ್ಲಿ ಉಲ್ಲೇಖಿಸಬೇಕಾದ ಅಂಶವೆಂದರೆ, ಈ ಕ್ಷೇತ್ರದಲ್ಲಿ ನಾವೆಲ್ಲಾ ಬಯಸುವ ಬದಲಾವಣೆಯನ್ನು ತರಲು ಶಿಕ್ಷಕರಾಗಿ ಅಥವಾ ಪೋಷಕರಾಗಿ, ತಮ್ಮನ್ನು ತಾವೇ ಸಕ್ರಿಯವಾಗಿ ತೊಡಗಿಸಿಕೊಂಡಿರುವ ಮಹಿಳೆಯರ ಅಗಾಧ ಪಾತ್ರ. ಎಂದಿನಂತೆ ಯೂನಿವರ್ಸಿಟಿಯ ಅನುವಾದ ಉಪಕ್ರಮ ಹಾಗೂ ಅವರ ಅನುವಾದಕರ ತಂಡಕ್ಕೆ ನಮ್ಮ ಧನ್ಯವಾದಗಳು. ಪತ್ರಿಕೆಯನ್ನು ಇನ್ನೂ ಉತ್ತಮವಾಗಿ ಹೊರತರಲು ಓದುಗರ ಪ್ರತಿಕ್ರಿಯೆಯನ್ನು ನಾವು ನಿರೀಕ್ಷಿಸುತ್ತೇವೆ.

**ಪ್ರೇಮಾ ರಘುನಾಥ್**
ಮುಖ್ಯ ಸಂಪಾದಕರು

**Chapter III, Section II, RPWD 2016*

# ಪರಿವಿಡಿ


ಶಿಕ್ಷಕ ತರಬೇತಿಯೇ ಕೀಲಿಕೈ — 03
ಇಂದು ಪ್ರಸಾದ್

ಸಮನ್ವಯ ಶಿಕ್ಷಣ — 09
ಡಾ. ಅಂಕುರ್ ಮದನ್

ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಕಲಿಕೆಯ ಅವಕಾಶಗಳನ್ನು ಸೃಷ್ಟಿಸುವುದು — 14
ಅನುಪಮಾ ರೈ

ಸಮನ್ವಯತೆ, ವಿಶೇಷ ಅಗತ್ಯಗಳು ಮತ್ತು ಚಿಂತನಶೀಲ ಶಿಕ್ಷಕರು — 18
ಅನುರಾಧ ನಾಯ್ಡು

ಕುಟುಂಬದ ಅತ್ಯವಶ್ಯ ಭಾಗೀದಾರಿಕೆ — 23
ಫಲ್ಗುಣಿ ದೋಶಿ

ಅಗೋಚರ ವೈಕಲ್ಯಗಳು — 25
ಅರ್ಪಿತಾ ಯಾದವ್

ಪರಿಣಾಮಕಾರಿ ಕಾರ್ಯತಂತ್ರಗಳ ಮೂಲಕ ಆರಂಭಿಕ ಬಾಲ್ಯ ಶಿಕ್ಷಣದಲ್ಲಿ ಸಮನ್ವಯದ ಉತ್ತೇಜನ — 32
ಅರುಣಾ ಜ್ಯೋತಿ

ವೈಕಲ್ಯವುಳ್ಳ ಮಕ್ಕಳಲ್ಲಿ ಲೈಂಗಿಕತೆ ಮತ್ತು ಲೈಂಗಿಕ ಆರೋಗ್ಯ ಶಿಕ್ಷಣ — 39
ಡಾ. ಗಿಫ್ಟಿ ಜೋಯೆಲ್

ಸಂಪೂರ್ಣ ಸ್ವೀಕಾರ — 45
ಕಮಲಾ ಮುಕುಂದ

ಅವರಿಗೆ ಯಾವುದೇ ದುರುದ್ದೇಶಗಳಿಲ್ಲ... — 48
ಗೋದಾವರಿ ವರ್ಮಾ

ತಡವಾದ ಬೆಳವಣಿಗೆಯನ್ನು ಆರಂಭಿಕ ಹಂತದಲ್ಲಿಯೇ ಗುರುತಿಸುವಲ್ಲಿ ಶಿಕ್ಷಕರ ಪಾತ್ರ — 50
ಕಿನ್ನರಿ ಪಾಂಡ್ಯ

ಎಲ್ಲರಿಗೂ ಒಂದು ಘನತೆಯ ಜೀವನ — 54
ಮಮತಾ ಘೋಷ್ ಮತ್ತು ನೇಹಾ ದಾಸ್

# ಪರಿವಿಡಿ


| | |
|---|---|
| ಡಿಸ್ಲೆಕ್ಸಿಯಾ ಮತ್ತು ಬಹುವಿಧ ಬುದ್ಧಿಮತ್ತೆಯನ್ನು ಅರಿಯುವುದು<br>ಮೃದುಲ ಗೋವಿಂದರಾಜು | 59 |
| ವಿಕಲತೆಯನ್ನು ಒಂದು ವೈವಿಧ್ಯತೆಯಾಗಿ ಕಾಣುವುದು<br>ಪ್ರಣಾಲೀ ಶರ್ಮಾ | 66 |
| ಪೋಷಕರು ವಿಳಂಬಿಸದೆ ನೆರವು ಪಡೆಯಬೇಕು<br>ನೀತಾ ಮತ್ತು ನಿತಿನ್ ನಾಯಕ್ | 70 |
| ವಿಕಲತೆಗಳ ಬದಲು ಸಾಮರ್ಥ್ಯಗಳ ಜೊತೆ ಕಾರ್ಯನಿರ್ವಹಣೆ<br>ಪುಷ್ಪಲತಾ ಪಾಂಡೆ | 72 |
| ಅಗತ್ಯವಿರುವುದು ಅವಕಾಶ, ಅನುಕಂಪವಲ್ಲ<br>ಶಂಕರ್ ಬಡಗರವರ ಜೊತೆಯಲ್ಲಿ ಅನ್ವರ್ ಮತ್ತು ವೆಂಕಟೇಶ್ | 75 |
| ಸ್ವೀಕರಿಸುವಿಕೆಯ ಸುದೀರ್ಘ ಹಾದಿ<br>ಸೀತಾ ಕೃಷ್ಣಮೂರ್ತಿ | 79 |
| ವಿಕಲತೆಯುಳ್ಳ ಮಕ್ಕಳ ಶಿಕ್ಷಣ<br>ಡಾ. ಸುದೇಶ್ ಮುಖೋಪಾಧ್ಯಾಯ | 84 |
| ಸವಾಲುಗಳ ನಡುವೆಯೂ ಘನತೆ<br>ಪ್ರೇಮಾ ರಘುನಾಥ್ | 90 |
| ಪ್ರವಾಸದಿಂದ ಕಲಿಯುವುದು<br>ಸುಮತಿ ರಾಮ್‌ಜಿ | 93 |
| ಭಾರತದಲ್ಲಿ ಸಮನ್ವಯ ಶಿಕ್ಷಣ<br>ಡಾ. ಉಮಾ ತುಲಿ | 98 |
| ವಿಶೇಷ ಶಿಕ್ಷಣದಲ್ಲಿ ಕುಟುಂಬ, ಶಾಲೆ ಮತ್ತು ಸಮುದಾಯದ ಪಾತ್ರ<br>ಉಷಾ ಮದನ್ | 106 |
| ಒಂದು ಮಹಾನ್ ಉದ್ದೇಶಕ್ಕಾಗಿ ಕಾರ್ಯವೆಸಗುವುದು<br>ವಿಜಯಶ್ರೀ ಪಿ.ಎಸ್ | 111 |

# ಶಿಕ್ಷಕ ತರಬೇತಿಯೇ ಕೀಲಿಕೈ

ಇಂದು ಪ್ರಸಾದ್

ಇಂದು ಪ್ರಸಾದ್ ಅವರು 'ಲರ್ನಿಂಗ್ ಕರ್ವ್'ನೊಂದಿಗಿನ ಲೋಕಾಭಿರಾಮವಾದ ಮಾತುಕತೆಯಲ್ಲಿ, ಭವಿಷ್ಯದಲ್ಲಿ ವೈಕಲ್ಯವುಳ್ಳ ಮಕ್ಕಳಿಗೆ ಉತ್ತಮವಾದ, ಸಮನ್ವಯ ಶಿಕ್ಷಣದಲ್ಲಿ ಹೆಚ್ಚು ಬದಲಾವಣೆಗಳನ್ನು ತರುವಂತಹ ಪ್ರಮುಖ ಹೆಜ್ಜೆಗಳಾವುವು ಮತ್ತು ನಾವು ಆ ನಿಟ್ಟಿನಲ್ಲಿ ಎಷ್ಟು ಮುಂದುವರಿದಿದ್ದೇವೆ ಎಂಬುದರ ಕುರಿತು ಮಾತನಾಡಿದ್ದಾರೆ.

ಮಕ್ಕಳು ಅಥವಾ ವೈಕಲ್ಯವುಳ್ಳ ಯುವ ಜನರ ಕಲಿಕೆಯ ಸಂಪೂರ್ಣ ಇತಿಹಾಸವನ್ನು ನೀವು ನೋಡಿದರೆ, ಕನಿಷ್ಠ ಈ ಮಕ್ಕಳನ್ನು, ಮಕ್ಕಳು ಎಂದು ಗುರುತಿಸಲ್ಪಡುವ ಮುನ್ನವೇ ನಾವು ಈ ಇಡೀ ವಿಚಾರದ ಮಂಥನದಲ್ಲಿ ತೊಡಗಿದಂತೆ ನಿಮಗೆ ಕಾಣಿಸೀತು. ಪಾರಿಭಾಷಿಕ-ವಾಗಿಯೂ, ನಾವು ಜನರನ್ನು 'ದಪ್ಪಗಿರುವ ವ್ಯಕ್ತಿ' ಅಥವಾ 'ಆ ಬುದ್ಧಿಮಾಂದ್ಯ ಹುಡುಗಿ' ಅಥವಾ 'ಆ ಸ್ವಲೀನತೆಯ ಹುಡುಗ' ಎಂದು ವಿವರಿಸುವುದನ್ನು ನೀವು ಗಮನಿಸಿರುವಿರಿ. ತರಬೇತಿಯಿಂದ ನಾನು ಕಲಿತ ಒಂದು ಪ್ರಮುಖ ವಿಷಯವೆಂದರೆ ಅವಳು ಮೊದಲು ಮಗು; ನಂತರ ಉದ್ದನೆಯ ಮೂಗಿರುವ ಹುಡುಗಿ, ಸ್ವಲೀನತೆ ಅಥವಾ ಸೆರೆಬ್ರಲ್ ಪಾಲ್ಸಿ ಹೊಂದಿರುವ ಓರ್ವ ಹುಡುಗಿ. ಹೀಗೆ ಅವಳಿಗೆ ಏನಿದೆಯೋ ಅದು. ಅವರನ್ನು ಮಕ್ಕಳಂತೆ ಮೊದಲು ಗುರುತಿಸಲು ನಮಗೆ ಬಹಳಷ್ಟು ಸಮಯವೇ ಬೇಕಾಯಿತು. ಇದಕ್ಕೆ ಕಾರಣ ವೈಕಲ್ಯವನ್ನು ಗುರುತಿಸಿದರೂ, ಅದರ ಕುರಿತ ವೈದ್ಯಕೀಯ ನೋಟದ ಕೊರತೆಯಿರುವುದು ಮತ್ತು ನೀವು ವೈಕಲ್ಯ ಹೊಂದಿರುವ ಮಗುವನ್ನು ಮರೆಮಾಚಿದ ಭಾಗವನ್ನು ನಾನು ನಿರ್ಲಕ್ಷಿಸುತ್ತಿದ್ದೇನೆ, ಇದು ಹೆಚ್ಚು ಸಾಮಾನ್ಯವಾದ ವಿಷಯವಲ್ಲದಿದ್ದರೂ ಇನ್ನೂ ಸಂಭವಿಸುತ್ತಿರುತ್ತದೆ. ತೀವ್ರ ವೈಕಲ್ಯತೆ ಹೊಂದಿರುವ ಚಿಕ್ಕ ಮಕ್ಕಳಿರುವ ಕುಟುಂಬಗಳು ಅದರ ಬಗ್ಗೆ ಮಾತನಾಡಲು ಇಷ್ಟಪಡುವುದಿಲ್ಲ, ಅವರು ಆ ಮಗುವಿಗೆ ಏನನ್ನೂ ಮಾಡಲು ಬಿಡುವುದಿಲ್ಲ. ನನ್ನ ತಿಳುವಳಿಕೆಯ ಪ್ರಕಾರ ಇದು ನಾವು ಗಮನ ವಹಿಸಬೇಕಾದ ಗುಂಪಿನ ಒಂದು ಭಾಗವಾಗಿದೆ, ಆದರೆ ಅದು ದೊಡ್ಡ ಭಾಗವೇನಲ್ಲ. ನಾನು ಹದಿನೈದು ವರ್ಷಗಳ ಹಿಂದೆ, ವೈಕಲ್ಯವುಳ್ಳ ಮಕ್ಕಳ ಶಿಕ್ಷಕಿಯಾಗಿದ್ದಾಗ, ಅವರಲ್ಲಿ ಹತ್ತು ವರ್ಷದ ಮಕ್ಕಳೂ ಮೊದಲ ಬಾರಿಗೆ ನನ್ನ ಬಳಿಗೆ ಬಂದದ್ದಿದೆ. ಅವರು ಹತ್ತು ವರ್ಷಗಳಿಂದ ಬೇರೆ ಏನೋ ಮಾಡುತ್ತಿದ್ದು ನಂತರ ನನ್ನ ಬಳಿಗೆ ಬಂದರು ಎಂದು ಅರ್ಥವಲ್ಲ. ಕಟ್ಟಕಡೆಗೆ ಪರಿಸ್ಥಿತಿ ಬದಲಾಗಿದೆ ಎಂದು ಅರಿತಾಗ ಪೋಷಕರು ಮನೆಯಿಂದ ಹೊರಬಂದಿದ್ದರು. ಹಾಗಾಗಿ, ನಮ್ಮ ಬಳಿ ಸಂಕಷ್ಟದಲ್ಲಿರುವ ಕುಟುಂಬಗಳು ಇವೆ ಎಂಬುದು ಕಲ್ಪನಾತೀತ ಅಥವಾ ಅದು ಸುಳ್ಳು ಎಂದಲ್ಲ ಮತ್ತು ಮಗುವಿಗೆ ಕೆಡುಕುಂಟು ಮಾಡಬೇಕೆಂಬ ಯಾವ ಭಾವನೆಯೂ ಅವರಲ್ಲಿಲ್ಲ. ಹೊರ ಪ್ರಪಂಚದಿಂದ ಮಗುವನ್ನು ರಕ್ಷಿಸಲು, ಮಗುವನ್ನು ಸುರಕ್ಷಿತವಾಗಿರಿಸಲು, ಸಂಪನ್ಮೂಲಗಳ ಕೊರತೆಯಿಂದ ಅಥವಾ, ಪಕ್ಕಾ ಪ್ರಾಯೋಗಿಕವಾಗಿ ಹೇಳುವುದಾದರೆ, ಅವರಿಗೆ ಸಾಕಷ್ಟು ಆಹಾರದ ಕೊರತೆ, ಇತರೆ ಮಕ್ಕಳಿಗೂ ಸಾಕಾಗುವಷ್ಟಿಲ್ಲದ ಸ್ಥಿತಿ. ಅನೇಕ ಬಾರಿ, ಜನ ಏನು ಹೇಳುತ್ತಾರೋ, ಏನು ಯೋಚಿಸುತ್ತಾರೋ, ಈ ಮಗುವನ್ನು ಹೇಗೆ ಹೊರಗೆ ಕರೆದೊಯ್ಯಲಿ ಎಂಬ ಭಯವೂ ಸೇರಿದ ಸಾಮಾಜಿಕ ಮತ್ತು ಕೌಟುಂಬಿಕ ಒತ್ತಡಗಳು ಸೇರಿರುತ್ತದೆ. ಆದರೆ, ನಾನು ಹೇಳಿದಂತೆ, ಸದ್ಯ ಈ ರೀತಿಯ ಗುಂಪು ದೊಡ್ಡದ್ದೇನಲ್ಲ. ನಾವು ವೈಕಲ್ಯದ 'ವೈದ್ಯಕೀಯಾತ್ಮಕ' ('Medicalizing') ಹಂತ ದಾಟಿ ಬಂದಿದ್ದೇವೆ. ಪ್ರಪಂಚದಾದ್ಯಂತ, ವೈಕಲ್ಯವನ್ನು ವೈದ್ಯಕೀಯ ಸಮಸ್ಯೆಯಾಗಿ ನೋಡಲಾಗುತ್ತದೆ. ಇದಕ್ಕೆ ವೈದ್ಯಕೀಯ ಪರಿಹಾರಗಳಿದ್ದರೂ, ಕೆಲವು ವಿಷಯಗಳು ವೈದ್ಯಕೀಯವಾಗಿ ಪರಿಹರಿಸಲಾಗದವು. ಆದ್ದರಿಂದ, ಅವರನ್ನು ಹೇಗೆ ನಿಭಾಯಿಸ-ಬೇಕೆಂಬುದನ್ನು ಕಂಡುಹಿಡಿಯಬೇಕು. ಇದು ಒಬ್ಬ ರೋಗಿಗೆ ಚಿಕಿತ್ಸೆ ನೀಡಿದಂತೆ. 'ತಾಂತ್ರಿಕ' ರೀತಿಯ ಭಯದಿಂದಾಗಿ, ಸಾಮಾನ್ಯ ಬೆಳವಣಿಗೆಯಿರುವ ಮಕ್ಕಳನ್ನು ಕಂಡಂತೆ ಈ ಮಕ್ಕಳನ್ನು ಜನ ನೋಡುವುದಿಲ್ಲ, ಅವರಿಗೊಂದು ಸಾಮಾಜಿಕ ಜೀವನ ಬೇಕು, ಭಾವನಾತ್ಮಕ ಬೆಂಬಲ ಬೇಕು, ಅವರು ತುಂಟತನದ ಕೆಲಸಗಳನ್ನು ಮಾಡುತ್ತಾರೆ, ಒಳ್ಳೆಯ ಕೆಲಸಗಳು, ಕೆಟ್ಟ ಕೆಲಸಗಳು, ಸವಿಯಾದ ಕೆಲಸಗಳು, ಕಿರಿಕಿರಿಯುಂಟುಮಾಡುವ ಕೆಲಸಗಳು ಇಂತಹವುಗಳನ್ನು ಯಾವುದೇ ಮಗುವಿನಂತೆ ಇವರೂ ಸಹ ಮಾಡುತ್ತಾರೆ ಎಂಬಂತೆ ಜನ ನೋಡುವುದಿಲ್ಲ. ಅವರಿಗೆ ಕೆಲವು ವಿಷಯಗಳು ಹೆಚ್ಚುವರಿಯಾಗಿ, ವಿಭಿನ್ನವಾಗಿ ಬೇಕಾಗುತ್ತವೆ, ಬೇರೆ ಯಾವುದೇ ಮಗುವಿನಂತೆ ಶಿಕ್ಷಣವನ್ನು ಮತ್ತು ಶಿಕ್ಷಣದ ಅವಕಾಶಗಳನ್ನು ಅವರಿಗೆ ಒದಗಿಸಬೇಕಾಗುತ್ತದೆ. ನಾವು ಇಂಥ ಮಗುವನ್ನು ನೋಡಲು ಮತ್ತು ಈ ಸಮಸ್ಯೆಗಳನ್ನು ತಿಳಿಯುವ ಹಂತಕ್ಕೆ ಬರಲು ಸಾಕಷ್ಟು ಸಮಯವನ್ನು ತೆಗೆದುಕೊಂಡಿದ್ದೇವೆ. ಕೆಲವು ಸಾಮರ್ಥ್ಯಗಳು ಮತ್ತು ಕೆಲವು ತೊಂದರೆಗಳನ್ನು ಹೊಂದಿರುವ ಈ ಮಗುವಿಗೆ ಯಾವುದು ಉತ್ತಮವಾಗಿ ಕಾರ್ಯನಿರ್ವಹಿಸುತ್ತದೆ ಎಂಬುದನ್ನು ಇನ್ನಾದರೂ ಕಂಡುಹಿಡಿಯೋಣ. ಕಲಿಕಾ ಪರಿಸರವು ಪದೇಪದೇ ತೊಂದರೆಗಳನ್ನು ಉಲ್ಬಣಗೊಳಿಸುತ್ತದೆ, ಉದಾಹರಣೆಗೆ, ನಿಮಗೆ ನಿಮ್ಮ ಕಣ್ಣುಗಳಲ್ಲಿ ಸಮಸ್ಯೆ ಇದ್ದು, ನೀವು ತರಗತಿಯ ಹಿಂಭಾಗದಲ್ಲಿ ಕುಳಿತಿದ್ದರೆ ಮತ್ತು ಪುಸ್ತಕದಲ್ಲಿನ ಅಕ್ಷರದ ಗಾತ್ರವು ತುಂಬಾ ಚಿಕ್ಕದಾಗಿ ಕಾಣಿಸಿದರೆ, ನಿಮಗೆ ಒಂದು ಕನ್ನಡಕವನ್ನು ನೀಡುವ ಬಗ್ಗೆ ಯಾರೂ ಏನನ್ನೂ ಮಾಡುವುದಿಲ್ಲ, ಆಗ ಸಣ್ಣ ವೈಕಲ್ಯವೂ ಬೃಹತ್ ವೈಕಲ್ಯದತ್ತ ತಿರುಗುತ್ತದೆ. ಕನ್ನಡಕಗಳು ಬಂದ ಕ್ಷಣದಲ್ಲಿ ಎಲ್ಲವೂ ಬದಲಾಗುತ್ತದೆ. ಈ ರೀತಿ ಕೆಲವು ಸನ್ನಿವೇಶಗಳು, ಕೆಲವು ಪರಿಸರಗಳನ್ನು, ನೀವು ಸೃಷ್ಟಿಸಬಹುದಾಗಿದೆ. ಇದು ವೈಕಲ್ಯವನ್ನು ದೂರ ಮಾಡುವುದಿಲ್ಲವಾದರೂ ಅದನ್ನು ಉತ್ತಮವಾಗಿ ನಿರ್ವಹಿಸಲು ಸಹಕಾರಿಯಾದೀತು.

ಈ ಮಕ್ಕಳಿಗೆ ಹೇಗೆ ಸಹಾಯ ಮಾಡಬಹುದು ಎಂಬುದನ್ನು ಅರ್ಥಮಾಡಿಕೊಳ್ಳಲು ಅಪಾರ ಪ್ರಮಾಣದ ಪರಿಣತಿಯ ಅಗತ್ಯವಿದೆ. ಒಂದು ತರಗತಿಯಲ್ಲಿ 30 ಸಾಮಾನ್ಯ ಮಕ್ಕಳನ್ನು ನಿರ್ವಹಿಸುವಲ್ಲಿ ಅಪಾರ ಪೂರಕ ವ್ಯವಸ್ಥೆಯ ಅಗತ್ಯವಿರುತ್ತದೆ. ಮತ್ತು ಎಲ್ಲಾ ಬಗೆಯ ವೈಕಲ್ಯಗಳಿರುವ ಮಕ್ಕಳನ್ನು ನಿರ್ವಹಿಸಲು ಒಂದು ತರಗತಿಯ ಗಾತ್ರವು ಐದರಿಂದ ಏಳು ಮಕ್ಕಳಿಗಿಂತ ಹೆಚ್ಚಿರಬಾರದು. ಹಾಗಾಗಿ ಇದು, ಹೆಚ್ಚು ಪರಿಣತಿ, ಸಂಪೂರ್ಣವಾಗಿ ವಿಭಿನ್ನವಾದ ಬೋಧನೆ ಮತ್ತು ಕಲಿಕೆಯ ವಿಧಾನದ ಅಗತ್ಯವಿರುವುದರಿಂದ, ಅವರಿಗಾಗಿ

ವಿಭಿನ್ನ ಸಂಸ್ಥೆಗಳನ್ನು ಸ್ಥಾಪಿಸೋಣ ಎಂದು ನಮಗೆ ಯೋಚಿಸಲು ಕಾರಣವಾಯಿತು. ಆರಂಭದಲ್ಲಿ, ಈ ಸಂಸ್ಥೆಯಲ್ಲಿ ನೀವು ನಿಮ್ಮ ಮಗುವನ್ನು ಬಿಟ್ಟು ಹೋಗಬಹುದಿತ್ತು ಮತ್ತು ಅವರನ್ನು ಸಂಸ್ಥೆಯು ನೋಡಿಕೊಳ್ಳುತ್ತಿತ್ತು. ಆದ್ದರಿಂದ, ತುಂಬಾ ಕಾಳಜಿ ವಹಿಸುವ, ತಮ್ಮ ಕುಟುಂಬದಲ್ಲಿ ವೈಕಲ್ಯವುಳ್ಳವರನ್ನು ಹೊಂದಿದ್ದ ಮತ್ತು ಏನಾದರೂ ಮಾಡಬೇಕೆಂಬ ತುಡಿತವಿದ್ದವರು ಸೇರಿ ಈ ಸಂಸ್ಥೆಯನ್ನು ಆರಂಭಿಸಿದರು. ಆರಂಭದಲ್ಲಿ ಇವರಲ್ಲಿ ಬಹಳಷ್ಟು ಜನ ದೇಶದ ಹೊರಗೆ ತಮ್ಮ ತರಬೇತಿಯನ್ನು ಪಡೆದರು, ಏಕೆಂದರೆ ಆ ರೀತಿಯ ತರಬೇತಿ ನಮ್ಮ ದೇಶದಲ್ಲಿ ಅಸ್ತಿತ್ವದಲ್ಲಿರಲಿಲ್ಲ. ಇದು ವೈಕಲ್ಯಗಳುಳ್ಳ ಮಕ್ಕಳಿಗಷ್ಟೇ ಇರುವ ಒಂದು ಕೇಂದ್ರ 'ವಿಶೇಷ ಸ್ಥಳ'ದ ಹಂತವಾಗಿತ್ತು –ಇದು ಸದಾ ಬದ್ಧತೆ, ಕಾಳಜಿಯುಳ್ಳ ಜನರನ್ನು ಒಳಗೊಂಡ ಅತ್ಯುತ್ತಮವಾದ ಸ್ಥಳವಾಗಿದ್ದರಿಂದ ಇಲ್ಲಿ ಮಕ್ಕಳು ಅರಳಿದರು. ಅನೇಕ ಮಕ್ಕಳು ಈ ರೀತಿಯ ಗಮನ ಮತ್ತು ಕಾಳಜಿಗಳ ಅಪಾರ ಪ್ರಯೋಜನವನ್ನು ಪಡೆದಿದ್ದಾರೆ ಎಲ್ಲಿಗೂ ಸೇರಲಾಗದ ಮಕ್ಕಳಿಗೆ ಇಲ್ಲಿ ಅವಕಾಶ ದೊರೆಯಿತು, ಇಲ್ಲಿ ಅವರು ಎಲ್ಲಾ ರೀತಿಯ ಆಸಕ್ತಿದಾಯಕ ಕೆಲಸಗಳನ್ನು ಮಾಡಿದ್ದಾರೆ. ಎಲ್ಲದರ ಬಗ್ಗೆಯೂ ಸಂಪೂರ್ಣ ಕಾಳಜಿವಹಿಸುವ, ಉತ್ತಮವಾದ, ಸಂರಕ್ಷಿತ ಕಲಿಕಾ ವಾತಾವರಣವಾಗಿ ಇದು ರೂಪುಗೊಂಡಿತು. ನಾನು ಉತ್ತಮವಾಗಿ ಕಾರ್ಯನಿರ್ವಹಿಸುವವರ ಬಗ್ಗೆ ಮಾತನಾಡುತ್ತಿದ್ದೇನೆ ಮತ್ತು ನಮ್ಮ ದೇಶದಲ್ಲಿ ಇಂಥ ಸಾಕಷ್ಟು ಉದಾಹರಣೆಗಳಿವೆ.

ಇದು ಸುಗಮವಾದ ಹಾದಿಯಲ್ಲದಿದ್ದರೂ, ಈ ರೀತಿಯ ಸಂಪನ್ಮೂಲಗಳು, ಈ ರೀತಿಯ ಜನರು ಮತ್ತು ಪರಿಸರವು ದೊಡ್ಡ ನಗರಗಳಲ್ಲಿ ಮಾತ್ರ ಲಭ್ಯವಿದೆ. ಆದ್ದರಿಂದ, ದೇಶದ ಹೆಚ್ಚಿನ ಭಾಗಗಳು ಈ ಸೌಲಭ್ಯಗಳಿಂದ ವಂಚಿತವಾಗಿವೆ. ಅನೇಕ ಸಂಸ್ಥೆಗಳು ವಿವಿಧ ಭಾಗಗಳಲ್ಲಿ ನೆರವಿಗಾಗಿ, ತಮ್ಮ ಆಶಯ ಸಾರಲು ವಿಸ್ತರಣಾ ಕೇಂದ್ರಗಳನ್ನು ಹೊಂದಿವೆ. ಆದರೆ ಈ ಸಂಸ್ಥೆಗಳ ಪ್ರಧಾನ ಕಾರ್ಯ 'ವಿಶೇಷ ಶಿಕ್ಷಣ'ವಾಗಿದ್ದು, ವೈಕಲ್ಯವುಳ್ಳ ಮಕ್ಕಳಿಗೆ ಸುರಕ್ಷಿತ, ಜೋಪಾನ, ಕಾಳಜಿಯುಳ್ಳ, ಬದ್ಧತೆ ಇರುವ ಎಲ್ಲಾ ರೀತಿಯ ಸೇವೆಗಳು ಸಿಗುವ ಒಂದು ವೃತ್ತಿಪರ ಸ್ಥಳವಾಗಿದೆ. ಇದು ಇತ್ತೀಚೆಗೆ ಬಂದಿರುವ ಒಂದು ಮಾದರಿಯಾಗಿದೆ. ನಾನು ಈ ರೀತಿಯ ಸ್ಥಳಗಳಲ್ಲಿ ಕೆಲಸ ಮಾಡಿದ್ದೇನೆ ಮತ್ತು ಧನಾತ್ಮಕ ಅಂಶಗಳನ್ನು ತಿಳಿದಿದ್ದೇನೆ. ಈ ಮಕ್ಕಳನ್ನು ಸ್ವಾಗತಿಸದ ಜಗತ್ತಿಗೆ ಪರಿಹಾರವಾಗಿ ನಾವು ಈ ವ್ಯವಸ್ಥೆಯನ್ನು ಮಾಡಿದಂತೆಯೇ ಸರಿ. ಇದು ಉತ್ತಮವಾದ ಪುಟ್ಟ ಪರ್ಯಾಯ ವಿಶ್ವವನ್ನು ಅವರಿಗಾಗಿ ರಚಿಸಿದಂತೆ. ಆದರೆ ಇದು ಅವರು ನಿಭಾಯಿಸಬೇಕಾಗಿರದ ಅವಾಸ್ತವ ಜಗತ್ತಾಗಿದೆ. ಅವರು ಬೆಳೆದು ದೊಡ್ಡವರಾಗಿ, ಸಮಾಜ ಮತ್ತು ಸಮುದಾಯದ ಸದಸ್ಯರಾಗಿ, ಈ ದೇಶದ ಪ್ರಜೆಗಳಾಗಿ, ಅವರು ಎಲ್ಲದರಲ್ಲೂ ಭಾಗವಹಿಸಬೇಕು. ಆದರೆ ಅವರ ಭಾಗವಹಿಸುವಿಕೆಯನ್ನು ಕುಂಟಿತಗೊಳಿಸಲಾಗಿದೆ. ಎರಡನೆಯದಾಗಿ, ಅವರು ಅಸ್ತಿತ್ವದಲ್ಲಿರುವುದು ಪ್ರಪಂಚಕ್ಕೆ, ಅವರ ಸಹವರ್ತಿಗರಿಗೆ ಸಹ ತಿಳಿದಿಲ್ಲ. ಪ್ರಪಂಚದಲ್ಲಿ ಪ್ರತಿಯೊಬ್ಬರೂ ಅವರಂತೆಯೇ ಇದ್ದಾರೆ ಎಂದು ಯೋಚಿಸುತ್ತಾ ಹೆಚ್ಚಿನ ಜನರು ಬೆಳೆಯುತ್ತಾರೆ. ಆದ್ದರಿಂದ, ಎಲ್ಲೆಡೆ ನಷ್ಟಗಳಾಗುತ್ತವೆ.

ಈ ಸಮಯದಲ್ಲಿ, ಸಮನ್ವಯತೆಯನ್ನು ಕುರಿತು ಸಾಕಷ್ಟು ಮಾತುಕತೆಗಳು ಪ್ರಾರಂಭವಾಗಿದ್ದವು. ಅದು ಈ ಮೊದಲು 'ಸಂಯೋಜನೆಯಾಗಿತ್ತು' (Integration), ಪ್ರಸ್ತುತ ಇದು 'ಸಮನ್ವಯವಾಗಿದೆ'(Inclusion). ಇಲ್ಲಿರುವವರು ಮೊದಲು ಮಕ್ಕಳು ಇವರ ವೈಕಲ್ಯಗಳು ಅನಂತರದ್ದು ಮತ್ತು ಇತರ ಮಕ್ಕಳಂತೆ ವಿಶೇಷ ಅಗತ್ಯವುಳ್ಳ ಮಕ್ಕಳಿಗೂ ಅವಕಾಶ ಕಲ್ಪಿಸುತ್ತೇವೆ ಎನ್ನುವುದು ಇಲ್ಲಿಯ ಸಮಗ್ರ ಕಲ್ಪನೆಯಾಗಿದೆ. ನಾವು ಅವರಿಗೆ ಹೆಚ್ಚುವರಿಯಾಗಿ ಏನಾದರೂ ಮಾಡುತ್ತೇವೆ ಎಂದರೆ ಅದು ನಮ್ಮ ಔದಾರ್ಯವಲ್ಲ ಅಥವಾ ನಾವು ಅವರಿಗೆ ಮಾಡುವ ಉಪಕಾರವಲ್ಲ. ಯಾಕೆಂದರೆ ತಮಗೆ ಬೇಕಾದುದನ್ನು ಪಡೆಯುವ ಹಕ್ಕು ಅವರಿಗಿದೆ. ಆದ್ದರಿಂದ, ಇಡೀ ಕಲ್ಪನೆಯು ನಿಧಾನವಾಗಿ ಹೆಚ್ಚು ಹಕ್ಕುಗಳ ಆಧಾರಿತ ವಿಧಾನಕ್ಕೆ; ಹೆಚ್ಚು ಸಮನ್ವಯ ವಿಧಾನಕ್ಕೆ; ಈ ಮಕ್ಕಳು ಸಮಾಜದಲ್ಲಿ ಸ್ಥಾನ ಪಡೆಯುತ್ತಾರೆಂಬ ಮತ್ತು ನೀವು ಅವರಿಂದ ಅದನ್ನು ಕಸಿದುಕೊಳ್ಳಲು ಸಾಧ್ಯವಿಲ್ಲವೆಂಬ ಕಲ್ಪನೆಗೆ ಬದಲಾಗಿದೆ. ತಾವು ಯಾವ ರೀತಿಯ ಶಾಲಾ ಶಿಕ್ಷಣವನ್ನು ಹೊಂದಬೇಕು ಎಂಬ ಆಯ್ಕೆ ಇತರ ಮಕ್ಕಳಂತೆಯೇ ಸ್ವತಃ ಈ ಮಕ್ಕಳು ಅಥವಾ ಅವರ ಕುಟುಂಬಗಳದ್ದಾಗಿರಬೇಕು. ಒಂದು ಕುಟುಂಬ, ತಮ್ಮ ಮಗುವು ಇತರ ಮಕ್ಕಳೊಂದಿಗೆ ಕಲಿಯಲು ಸಾಮಾನ್ಯ ಶಾಲೆಗೆ ಹೋಗಬೇಕೆಂದು ಬಯಸಿದರೆ, ಮಕ್ಕಳ ಅಗತ್ಯತೆಗಳು ಲಭ್ಯವಿದೆಯೇ ಎಂದು ಖಚಿತಪಡಿಸಿಕೊಳ್ಳುವುದು ಶಾಲೆಯ ಮತ್ತು ಸರ್ಕಾರದ ಜವಾಬ್ದಾರಿಯಾಗಿದೆ. ಉದಾಹರಣೆಗೆ, ಬಹು ವೈಕಲ್ಯಗಳನ್ನು ಹೊಂದಿರುವ ಮಕ್ಕಳ ಪೋಷಕರು ವಿಶೇಷ ಶಾಲಾ ಶಿಕ್ಷಣವು ಅವರ ಮಕ್ಕಳಿಗಾಗಿ ಕೆಲಸ ಮಾಡುತ್ತದೆ ಎಂದುಕೊಂಡರೆ ಅದನ್ನು ಅವರಿಗೆ ಲಭ್ಯವಾಗುವಂತೆ ಮಾಡಬೇಕು. ಮೂರನೇ ವರ್ಗವು ತಮ್ಮ ಮಗುವಿಗೆ ದೈಹಿಕವಾಗಿ ಶಾಲಾ ಶಿಕ್ಷಣ ಪಡೆಯಲು ಸಾಧ್ಯವಿಲ್ಲ. ಅವನು/ಅವಳು ಮನೆಯಲ್ಲಿಯೇ ಇರಬೇಕಾಗುತ್ತದೆ ಎಂದುಕೊಂಡರೆ ಆ ಸೇವೆಯನ್ನು ಮನೆಯಲ್ಲಿಯೇ ಲಭ್ಯವಾಗುವಂತೆ ಮಾಡಬೇಕು. ಆದ್ದರಿಂದ, ಇಡೀ ದೃಷ್ಟಿಕೋನವು ಮಗುವಿನ ಅಗತ್ಯವನ್ನು ಪರಿಗಣಿಸಲು ಮತ್ತು ಅದನ್ನು ಲಭ್ಯವಾಗುವಂತೆ ಮಾಡುವತ್ತ ಬದಲಾಗಿದೆ.

ಸಾಧ್ಯವಾದಷ್ಟು, ಮಕ್ಕಳು ಒಂದು ಬೃಹತ್ ಸಮನ್ವಯ ವೇದಿಕೆಯ ಭಾಗವಾಗಿರಬೇಕು. ಅಂದರೆ ನಮ್ಮ ಮನಸ್ಸುಗಳು ತೆರೆದು–ಕೊಳ್ಳಬೇಕು ಮೊದಲನೆಯದಾಗಿ, ಮಕ್ಕಳನ್ನು ಮಕ್ಕಳಂತೆ ನೋಡುವುದು; ಎರಡನೆಯದಾಗಿ, ದೈಹಿಕ ಲಭ್ಯತೆಗಾಗಿ ಅವಕಾಶವನ್ನು ಒದಗಿಸುವುದು ಮತ್ತು ಮಗುವಿನ ಎಲ್ಲಾ ದೈಹಿಕ ಅಗತ್ಯಗಳಿಗೆ ಸಹಾಯ ಮಾಡುವುದು ಮತ್ತು ಮೂರನೆಯದಾಗಿ 'ಪಠ್ಯಕ್ರಮದ ಲಭ್ಯತೆ' ಎಂದು ಸ್ಥೂಲವಾಗಿ ಕರೆಯುವುದನ್ನು ಒದಗಿಸುವುದು. ಪಠ್ಯಕ್ರಮದ ಲಭ್ಯತೆ ಎಂದರೆ ಈಗಿರುವ ಮಾನದಂಡಗಳನ್ನು ಕಡಿಮೆ ಮಾಡುವುದು ಎಂದರ್ಥವಲ್ಲ. ಬದಲಿಗೆ ಮಗುವಿಗೆ ಪೂರ್ಣ ಪ್ರಮಾಣದಲ್ಲಿ ಶಿಕ್ಷಣವನ್ನು ಪಡೆಯಲು ನೆರವಾಗುವಂತೆ ಮಾಡಬೇಕಾದ ಹೊಂದಾಣಿಕೆಗಳ ವ್ಯವಸ್ಥೆ. ಇದಕ್ಕಾಗಿ ಆಟದ ಮೈದಾನದಲ್ಲಿ, ಪ್ರಯೋಗಾಲಯದಲ್ಲಿ ಅಥವಾ ಪರೀಕ್ಷಾ ವ್ಯವಸ್ಥೆಯಲ್ಲಿ ಬದಲಾವಣೆಗಳನ್ನು ಮಾಡಬೇಕೆಂದರೆ, ಅದನ್ನು ಮಾಡಿ. ಕಡ್ಡಾಯ ಶಿಕ್ಷಣ ಹಕ್ಕು ಕಾಯ್ದೆಯ (Right to Education Act) ಪ್ರಕಾರ ಯಾವುದೇ ಶಾಲೆಯೂ ಸಹ ಯಾವುದೇ ಮಗುವನ್ನು ನಿರಾಕರಿಸಲು ಸಾಧ್ಯವಿಲ್ಲ.

ಆದರೆ ವಾಸ್ತವದಲ್ಲಿ, ಪೋಷಕರಿಗೆ, ಶಾಲೆಗೆ ಮತ್ತು ವ್ಯವಸ್ಥೆಗೆ ಇದು ತುಂಬಾ ಕಠಿಣವಾದದ್ದು. ಒಂದು, ನಾವು ವೈಕಲ್ಯವುಳ್ಳ ಮಕ್ಕಳೊಂದಿಗೆ ಕಾರ್ಯನಿರ್ವಹಿಸಲು ಅಗತ್ಯವಿರುವ ಪರಿಣತಿಯನ್ನು ಬೆಳೆಸಬೇಕು. 'ವಿಕಲತೆಯು' ಬಹಳ ವಿಶಾಲವಾದ ಪದ, ಮಗುವಿನ ಜೀವನದ ಪ್ರತಿಯೊಂದು ಬೆಳವಣಿಗೆಯ ಹಂತದಲ್ಲೂ ವಿವಿಧ ಶ್ರೇಣಿಯ ಸಮಸ್ಯೆಗಳು ಎದುರಾಗುತ್ತವೆ ಹಾಗೂ ವಿಕಲತೆಯ ಪರಿಣಾಮವೂ ಬದಲಾಗುತ್ತದೆ. ಉದಾಹರಣೆಗೆ, ಸ್ವಲೀನತೆಯು, ಹದಿಹರೆಯದವರು ಹಾಗೂ ಚಿಕ್ಕ ಮಗುವಿನಲ್ಲಿ ವಿವಿಧ ರೀತಿಯ ಪರಿಣಾಮ ಬೀರುತ್ತದೆ. ವೈಕಲ್ಯತೆ ವಿಭಿನ್ನವಾಗಿ ಕಾರ್ಯನಿರ್ವಹಿಸುತ್ತವೆ, ಮತ್ತು ಅನೇಕ ಬಗೆಯ ವೈಕಲ್ಯಗಳು ವಿಭಿನ್ನ ಮಕ್ಕಳೊಂದಿಗೆ ವಿಭಿನ್ನವಾಗಿ ಕೆಲಸ

ಮಾಡುತ್ತವೆ. ನರ ವೈಜ್ಞಾನಿಕ ತೊಂದರೆಗಳಲ್ಲಿ ಪೂರ್ಣ ಪ್ರಮಾಣದ ಶ್ರೇಣಿಗಳವೆ ಹಾಗೂ ಇವುಗಳಲ್ಲಿ ವಿಶಾಲವಾದ ಮಾದರಿಗಳಿದ್ದರೂ, ಆಗಾಗ್ಗೆ, ಮಗುವಿಗೆ ಏನಾಗುತ್ತಿದೆ ಎಂಬುದನ್ನು ನಿಖರವಾಗಿ ನೀವು ಗಮನಿಸುತ್ತಿರಬೇಕು, ಆಗ ಮಾತ್ರ ನಿಮಗೆ ಪ್ರತಿಕ್ರಿಯಿಸಲು ಸಾಧ್ಯವಾಗುತ್ತದೆ. ಇದು ನಾವಿರುವಲ್ಲಿಯ ಸಾಮಾನ್ಯ ಶಾಲೆ ಅಥವಾ ವ್ಯವಸ್ಥೆಗೆ ಕಠಿಣವಾದದ್ದು. ಇದು ಅಸಾಧ್ಯವೇ? ಖಂಡಿತಾ ಅಲ್ಲ. ನಾವು ಈ ನಿಟ್ಟಿನಲ್ಲಿ ಕೆಲಸ ಮಾಡಬೇಕು ಮತ್ತು ನಮ್ಮ ವ್ಯವಸ್ಥೆಯು ತರ್ಕಮಟ್ಟಿಗೆ ನ್ಯಾಯ ಸಮ್ಮತವೆನಿಸುವ ಹಂತಕ್ಕೆ ತಲುಪುವವರೆಗೆ, ನಾವು ಬಹಳಷ್ಟು ಹೊಂದಾಣಿಕೆಗಳನ್ನು ಮಾಡಬೇಕಾಗಿದೆ. ಇವುಗಳು ಸಮನ್ವಯವೆಂಬ ಆದರ್ಶಕ್ಕೆ ಪೂರ್ಣ ಪ್ರಮಾಣದಲ್ಲಿ ಹೊಂದದಿರಬಹುದು. ಏಕೆಂದರೆ ಮಗುವಿನ ದೃಷ್ಟಿಕೋನದಲ್ಲಿ ನಾವು ನೋಡುವುದಾದರೆ ಆ ಶಾಲೆಗೆ ಮಗುವನ್ನು ನಿಭಾಯಿಸುವ ಸೂಕ್ತ ಸಾಮರ್ಥ್ಯವಿರದಿದ್ದರೆ ಹಾಗೂ ಮುಂದಿನ ಕೆಲವು ವರ್ಷಗಳವರೆಗೂ ಈ ಸಾಮರ್ಥ್ಯಗಳನ್ನು ಹೊಂದುವುದಿಲ್ಲ ಎಂದಾದರೆ ಮಗು ಆ ಶಾಲೆಯಲ್ಲಿ ಇರುವುದರಿಂದ ಆಗುವ ಪ್ರಯೋಜನವೇನು? ನಾವು ಕಾಣಬಹುದಾದ ಒಂದು ಮಾರ್ಗವೆಂದರೆ ಈ ಮಕ್ಕಳು ಇತರ ಮಕ್ಕಳೊಂದಿಗೆ ಇರುವುದು ಹಾಗೂ ಅವನು ಅಥವಾ ಅವಳು ಇತರ ಮಕ್ಕಳಿಂದ ಕಲಿಯುವುದು. ಜನರು ಒಳ್ಳೆಯವರು, ಕಾಳಜಿಯುಳ್ಳವರು, ಮುಕ್ತ ಮನಸ್ಸಿನವರು ಮತ್ತು ಹೊಂದಾಣಿಕೆಗಳನ್ನು ಮಾಡಲು ಸಿದ್ಧರಾಗಿರುವವರು. ಆದರೆ ಅನೇಕ ಸಲ, ಇದಿಷ್ಟೇ ಸಾಕಾಗುವುದಿಲ್ಲ, ಏಕೆಂದರೆ ಮಗುವಿನ ಬೆಳವಣಿಗೆಯ ಸಂದಿಗ್ಧ ವರ್ಷಗಳಲ್ಲಿ ನಾವು ಮಧ್ಯ–ಪ್ರವೇಶಿಸದಿದ್ದರೆ, ನಾವು ಬಹಳಷ್ಟನ್ನು ಕಳೆದು ಕೊಳ್ಳುತ್ತೇವೆ. ವಿಕಲತೆಯನ್ನು ತೆಗೆದು ಹಾಕಲು ಸಾಧ್ಯವಾಗದಿದ್ದರೂ, ಸಹ ಅದರ ಪರಿಣಾಮವನ್ನು ಕಡಿಮೆ ಮಾಡುವಲ್ಲಿ ಈ ಹಸ್ತಕ್ಷೇಪವೂ ಪ್ರಭಾವ ಬೀರುತ್ತದೆಂಬ ಪ್ರಾಮುಖ್ಯತೆಯನ್ನು ಅರ್ಥ–ಮಾಡಿಕೊಂಡಿರುವ ಜನರ ಲಭ್ಯತೆಯು ಕಡಿಮೆ ಇರುವುದರಿಂದ ಯಾವುದನ್ನು ಸರಿಮಾಡಿಕೊಳ್ಳಬಹುದಿತ್ತೋ ಅಥವಾ ವಿಕಲತೆಯ ಪರಿಣಾಮವನ್ನು ಹಿಂದಕ್ಕೆ ತೆಗೆದುಕೊಳ್ಳಬಹುದಿತ್ತೋ ಅದು ಆಗುವುದಿಲ್ಲ.

ಕೆಲವು ರಾಜ್ಯಗಳು ವಲಯ ಮತ್ತು ಕ್ಲಸ್ಟರ್ ಮಟ್ಟದವರೆಗೂ ಉತ್ತಮವಾದ ವ್ಯವಸ್ಥೆಯನ್ನು ಕಲ್ಪಿಸಿವೆ, ಇತರ ರಾಜ್ಯಗಳು ಈ ವ್ಯವಸ್ಥೆ ಮಾಡಿದ್ದರೂ, ಹೆಚ್ಚಿನ ಯಶಸ್ವಿಯಾಗಿಲ್ಲ. ಸಣ್ಣ ಶಾಲೆಗಳು ಹಾಗೂ ವ್ಯಾಪಕವಾಗಿ ಹರಡಿ ಕೊಂಡಿರುವ ಸರ್ಕಾರಿ ಶಾಲಾ ವ್ಯವಸ್ಥೆಯ ವಾಸ್ತವಗಳಿಂದಾಗಿ, ಅವರು ಮಕ್ಕಳನ್ನು ಪರೀಕ್ಷಿಸುವ, ಅವರೊಂದಿಗೆ ಪ್ರತ್ಯೇಕವಾಗಿ ಕೆಲಸ ಮಾಡುವ ಅರ್ಹರನ್ನು ನೇಮಿಸಿಕೊಂಡಿದ್ದಾರೆ. ಆದ್ದರಿಂದ ಪ್ರತಿ ಶಾಲೆಗೆ ಒಬ್ಬ ವಿಶೇಷ ಶಿಕ್ಷಕರ ಬದಲು, ಈ ರೀತಿಯಲ್ಲಿ ನಿಯೋಜನೆಗೊಳಿಸುವುದು ಹೆಚ್ಚು ಅರ್ಥವನ್ನು ನೀಡುತ್ತದೆ. ವಲಯ ಮಟ್ಟದಲ್ಲಿ (Block level) (ಭೌತ ಚಿಕಿತ್ಸಕ, ವಾಕ್ ಚಿಕಿತ್ಸಕ, ವಿಶೇಷ ಶಿಕ್ಷಕ ಇತ್ಯಾದಿ) ಶ್ರವಣ–ದೋಷವುಳ್ಳ ಮಕ್ಕಳೊಂದಿಗೆ ಕೆಲಸ ಮಾಡುವ ಅರ್ಹ 5–6 ಜನರಿದ್ದಾರೆ, ಚಲನಶಕ್ತಿಯ ವೈಕಲ್ಯತೆ (Locomotor disability), ನರವೈಜ್ಞಾನಿಕ ತೊಂದರೆಗಳು (Neurological difficulties), (ಇವು ಪರಿಪೂರ್ಣ ಸಂದರ್ಭಗಳಲ್ಲಿ ಮಾತ್ರವಿದ್ದು ವಾಸ್ತವದಲ್ಲಿ, ಪ್ರತಿ ವಲಯ ಮಟ್ಟದಲ್ಲಿ ಅರ್ಹತೆ ಇರುವ ಹೆಚ್ಚು ಜನರು ನಿಮಗೆ ದೊರೆಯುದಿಲ್ಲ). ಒಂದೋ ಮಕ್ಕಳು ಕೇಂದ್ರಕ್ಕೆ ಬರುತ್ತಾರೆ ಅಥವಾ ಈ ಶಿಕ್ಷಕರು ಅವರ ಮನೆಗಳು ಅಥವಾ ಶಾಲೆಗಳಿಗೆ ಹೋಗುತ್ತಾರೆ. ಇದು ಆದರ್ಶತೆಯಿಂದ ದೂರವಿದ್ದರೂ, ವಾಸ್ತವದ ಗುರಿಯತ್ತ ಸಾಗುವುದು ಸಾಧ್ಯವಿದೆ ಎಂಬ ಅರ್ಥದಲ್ಲಿ ನಾನು ಇದನ್ನು ಹೇಳಿದ್ದೇನೆ. ನೀವು ಅನೇಕ ಕೆಲಸಗಳನ್ನು ಬೆಂಗಳೂರಿನಲ್ಲಿ ಮಾಡಬಹುದು. ಆದರೆ ಯಾದಗಿರಿ ಅಥವಾ ಬೀದರ್ ಅಥವಾ ಬಾಗಲಕೋಟೆಯಲ್ಲಿರುವ ಯಾವುದೇ ಒಂದು ಕ್ಷೇತ್ರಕ್ಕೆ ನೀವು ಸ್ಥಳಾಂತರಗೊಂಡರೆ, ಅಂತಹ ಪರಿಣತಿಯ ಲಭ್ಯತೆಯು ನಿಮಗೆ ಕಡಿಮೆ ಇರುತ್ತದೆ. ನೀವು ಆರ್ಥಿಕವಾಗಿ ಸಮರ್ಥರಾಗಿದ್ದರೂ ಕೂಡ ಸರಿಯಾದ ವಾಕ್ ಚಿಕಿತ್ಸಕ, ಭೌತಚಿಕಿತ್ಸಕ, ವಿಶೇಷ ಶಿಕ್ಷಣ ತಜ್ಞರನ್ನು ಹೊಂದಲು ಇರುವ ಸಮಸ್ಯೆ ಎಂದರೆ ಅವರ ಲಭ್ಯತೆ. ಆದ್ದರಿಂದ, ನಾವು ನಿರ್ದಿಷ್ಟ ಜಾಗಗಳಲ್ಲಿ ನೈಪುಣ್ಯತೆಯನ್ನು ಒಗ್ಗೂಡಿಸಿದ್ದೇವೆ, ಆದರೆ ಅದು ವ್ಯಾಪಕತೆ ಪಡೆದಿಲ್ಲ. ಇನ್ನೊಂದು ವಿಚಾರವೆಂದರೆ, ವೈಕಲ್ಯವುಳ್ಳ ಮಕ್ಕಳನ್ನುದ್ದೇಶಿಸಿ ಕಾರ್ಯ–ಪ್ರವೃತ್ತರಾದಾಗ, ಈವರೆಗೆ ಮಾಡಿರದ, ಸಾಕಷ್ಟು ಕಾರ್ಯ–ಸಾಧ್ಯವಾಗಿರದ, ಕೆಲವಷ್ಟೇ ಆಗಿದ್ದರೂ ಎಲ್ಲವನ್ನೂ ಮಾಡಿರದ ನಿರ್ದಿಷ್ಟ ಅಭ್ಯಾಸಗಳು, ಆಲೋಚನೆಗಳು ಮತ್ತು ವಿಧಾನಗಳನ್ನು ಸೇವಾ ಪೂರ್ವ ಶಿಕ್ಷಕ ಶಿಕ್ಷಣದಲ್ಲಿ ಜಾರಿಗೆ ತರುವುದು. ಸಾಮಾನ್ಯ ಶಾಲೆಯ ತರಗತಿಯಲ್ಲಿ ಶಿಕ್ಷಕರಿಗೆ ೨೦ ವಿಶೇಷ ಅಗತ್ಯವುಳ್ಳ ಮಕ್ಕಳು ಇರುವುದಿಲ್ಲ, ಮುಂದೆ ಅವರಿಗೆ ಒಬ್ಬ ವಿಶೇಷ ಅಗತ್ಯವುಳ್ಳ ಮಗುವಿನ ಶಿಕ್ಷಣದ ಹೊಣೆ ನೀಡಬೇಕು. ಆಗ, ಈ ಒಂದು ಮಗುವನ್ನು ತರಗತಿಯಲ್ಲಿ ಹೊಂದಿದ್ದರೆ, ನಿಜವಾಗಿಯೂ ನೀವು ಯಾವೆಲ್ಲಾ ವಿಚಾರಗಳನ್ನು ಮಾಡಬಲ್ಲಿರಿ? ನೀವು ಗಮನಿಸಬೇಕಾದ ಹಾಗು ಚಿಂತಿಸಬೇಕಾದ ಸಂಕೇತಗಳು ಯಾವುವು? ನೀವು ಯಾವ ಯಾವ ಸನ್ನೆಗಳನ್ನು ಹಣೆಪಟ್ಟಿ ಮಾಡುವಲ್ಲಿ ಅವಸರಿಸಬಾರದು? ತುಂಬ ಬೇಗನೆ ಒಂದು ಮಗುವಿಗೆ ಹಣೆಪಟ್ಟಿ ಹಚ್ಚುವುದರ ಅಪಾಯಗಳು ಸಹ ಅಷ್ಟೇ ಕೆಟ್ಟವು. ಶಿಕ್ಷಕರ ಶಿಕ್ಷಣದ ಆರಂಭಿಕ ವರ್ಷಗಳಲ್ಲೇ ಈ ಅಂಶಗಳು ಶಿಕ್ಷಣದ ಭಾಗವಾಗಿ ಕಡ್ಡಾಯವಾಗಿರಬೇಕು, ಏಕೆಂದರೆ ನಂತರದ ವರ್ಷಗಳಲ್ಲಿ ಇದು ತುಂಬಾ ಕಠಿಣವಾಗಿರುತ್ತದೆ. ನಾನು ೩ರಿಂದ ೮ ವರ್ಷಗಳ ಮಕ್ಕಳಿರುವ ಪೂರ್ವ ಪ್ರಾಥಮಿಕ ಮತ್ತು ಆರಂಭಿಕ ಪ್ರಾಥಮಿಕ ಶಾಲೆಯ ಬಗ್ಗೆ ಮಾತನಾಡುತ್ತಿದ್ದೇನೆ. ಸ್ಪಷ್ಟ ಕಣ್ಣಿಗೆ ಕಾಣುವ ವೈಕಲ್ಯತೆಯ ಸಂದರ್ಭದಲ್ಲಿ, ಅದನ್ನು ನಿರ್ವಹಿಸುವ ಕೆಲವು ವಿಧಾನಗಳನ್ನು ಶಿಕ್ಷಕರು ತಿಳಿದಿರಬೇಕು ಅವು ತರಗತಿಯಲ್ಲಿ ಹಿಂದಿನ ಸಾಲಿನಲ್ಲಿ ಕುಳಿತು ನೋಡಲು ಸಾಧ್ಯವಾಗದ ಮಗುವನ್ನು ತರಗತಿಯ ಮುಂದಕ್ಕೆ ಕರೆದು ಕೂರಿಸುವಂಥ, ಅಸಾಧ್ಯವಾದ ಆದರ್ಶವಾದಿ ವಿಚಾರಗಳಾಗಿರದೆ, ಕಾರ್ಯಸಾಧ್ಯವಾದ ಸಣ್ಣ ವಿಚಾರಗಳಾಗಿರಬಹುದು. ಸಾಮಾನ್ಯ ಅಧ್ಯಾಪಕರ ತರಬೇತಿಯಲ್ಲಿ ಈ ರೀತಿಯ ವಿಷಯವನ್ನು ನಿಯಮಿತವಾಗಿ ಸೇರಿಸುವ ನಿಟ್ಟಿನಲ್ಲಿ ನಾವು ಬಹಳ ದೂರದಲ್ಲಿದ್ದೇವೆ.

ಎರಡನೆಯ ಸಮಸ್ಯೆ ರಚನಾತ್ಮಕವಾದುದು. ವಿಶೇಷ ಅಗತ್ಯವುಳ್ಳ ಮಕ್ಕಳ ಶಿಕ್ಷಕರ ತರಬೇತಿಯನ್ನು ಭಾರತೀಯ ಪುನರ್ವಸತಿ ಮಂಡಳಿಯು (Rehabilitation Council of India- RCI) ನೋಡಿಕೊಳ್ಳುತ್ತದೆ ಮತ್ತು ಸಾಮಾನ್ಯ ಶಿಕ್ಷಕರ ತರಬೇತಿಯನ್ನು ರಾಷ್ಟ್ರೀಯ ಅಧ್ಯಾಪಕರ ಶಿಕ್ಷಣ ಮಂಡಳಿಯು National Council for Teacher Education-NCTE) ನಿರ್ವಹಿಸುತ್ತದೆ. ಈ ಎರಡನ್ನು ನಾವು ಒಟ್ಟಿಗೆ ತರಬೇಕಿದೆ. ಭಾರತೀಯ ಪುನರ್ವಸತಿ ಮಂಡಳಿಯು (ಆರ್‌ಸಿಐ) ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯದ ಭಾಗವಾಗಲು ಸಾಧ್ಯವಿಲ್ಲ: ಇದು ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯದ (ಈಗಿನ ಶಿಕ್ಷಣ ಸಚಿವಾಲಯ) ಒಂದು ಭಾಗವಾಗಿರಬೇಕು.

ಕೆಲವು ವಿಚಾರಗಳ ಪರಿಶುದ್ಧತೆಯ ಮೇಲೆ ಸಂಪೂರ್ಣವಾಗಿ ಗಮನಹರಿಸುವುದರಿಂದ ಬಹುಶಃ ನಾವು ದೂರವಿರಬೇಕು. ಬೃಹತ್ ಪ್ರಮಾಣದಲ್ಲಿ, ಸುದೀರ್ಘ ಸಮಯದವರೆಗೆ ಪರಿಶುದ್ಧ ರೂಪದ ಸಮನ್ವಯವೆಂಬುದು ಅಸ್ತಿತ್ವದಲ್ಲಿರುವುದು ಅಸಂಭವವಾದದ್ದು. ವೈಕಲ್ಯತೆ ಹೊಂದಿರುವ ಮಗುವಿಗೆ ಆರೈಕೆ ಮಾಡುವ ಮತ್ತು ಶಿಕ್ಷಣ

ನೀಡುವ ಮಟ್ಟವನ್ನು ಪ್ರತಿ ಶಾಲೆಯು 'ಸ್ವಾಗತಿಸಲು' ಮತ್ತು 'ಸಮರ್ಥ'ವಾಗಲು ನಾವು ಕನಿಷ್ಠ ೫೦ ವರ್ಷಗಳನ್ನಾದರೂ ತೆಗೆದುಕೊಳ್ಳುತ್ತೇವೆ. ಆದರೆ ನಾವು ಆ ನಿಟ್ಟಿನಲ್ಲಿ ಕೆಲಸ ಮಾಡುವುದಿಲ್ಲ ಎಂದಲ್ಲ. ಸಮನ್ವಯತೆಯು ಅದರ ಪರಿಶುದ್ಧ ಸ್ವರೂಪದಲ್ಲಿ ಒಂದು ಆದರ್ಶವಾಗಿ, ನಾವು ಮಾಡುವ ಎಲ್ಲದರಲ್ಲೂ, ಎಲ್ಲಕಾಲದಲ್ಲೂ ಅಡಗಿರುವ ಸಂದೇಶವಾಗಿರಬೇಕು. ಆದರೆ ಅತ್ತ ಹೋಗಲು ನಾವು ಬಹಳಷ್ಟು ಕೆಲಸಗಳನ್ನು ಮಾಡಬೇಕು. ನಾವು ಒಂದು ನಿರ್ದಿಷ್ಟ ಪರಿಶುದ್ಧ ಆಲೋಚನೆಗೆ ಬದ್ಧರಾಗಿ ನಮಗಿರುವ ಆಯ್ಕೆಗಳನ್ನು ಮುಚ್ಚಬಾರದು.

'ಎಲ್ಲಾ ವಿಶೇಷ ಶಾಲೆಗಳನ್ನು ಮುಚ್ಚಿಬಿಡಿ' ಎಂದು ಹೇಳುವ ಜನರ ಒಂದು ದೊಡ್ಡ ಗುಂಪೇ ಇದೆ. ಒಮ್ಮೆ ನೀವು ಹಾಗೆ ಮಾಡಿದರೆ, ಸಾಕಷ್ಟು ಉತ್ತಮ ಕೆಲಸಗಳನ್ನು ಮಾಡಿದ ವ್ಯವಸ್ಥೆಯನ್ನು ಮತ್ತು ವೈಕಲ್ಯವುಳ್ಳ ಮಕ್ಕಳ ಕುಟುಂಬಗಳ ಮನಸ್ಸಿನಲ್ಲಿರುವ ಬಲವಾದ ಆಯ್ಕೆಯನ್ನು ನಾಶಪಡಿಸಿದಂತೆ. ಈ ಸಂಸ್ಥೆಗಳಿಂದಾಗಿ ನಾವು ಬಲುದೂರ ಸಾಗಿ ಬಂದಿದ್ದೇವೆ. ಈ ಸಂಸ್ಥೆಗಳ ಕೆಲವು ಅಭ್ಯಾಸಗಳನ್ನು ನಾವು ಸಾಮಾನ್ಯ ಶಾಲಾ ವ್ಯವಸ್ಥೆಯಲ್ಲಿ ಸಂಯೋಜಿಸಲು ಪ್ರಯತ್ನಿಸಬೇಕು. ಶಿಕ್ಷಕರ ಶಿಕ್ಷಣದ ಸುತ್ತ ಸಕ್ರಿಯತೆ ಮತ್ತು ವಿಶೇಷ ಅಗತ್ಯವುಳ್ಳ ಮಕ್ಕಳನ್ನು ಎಲ್ಲಿ ಗುರುತಿಸುತ್ತೇವೋ ಅಲ್ಲಿ, ಕಲಿಕಾ ಸಾಮಗ್ರಿಗಳು / ಸಾಧನಗಳು / ವಸ್ತುಗಳಾಗಿ ಇರುವ ಆಯವ್ಯಯವನ್ನು ಹೆಚ್ಚಿಸಬೇಕು.

ಪಠ್ಯಕ್ರಮ ಮತ್ತು ಮೌಲ್ಯಮಾಪನದಲ್ಲಿರುವ ಜಟಿಲತೆಯನ್ನು ಸರಳಗೊಳಿಸಿ ಹೊಂದಿಸುವುದರತ್ತ ಗಮನಹರಿಸುವುದು ಅತ್ಯಂತ ಮಹತ್ವವಾದದ್ದು. ಅದನ್ನು ನಿರ್ವಹಿಸಲು ನಾವು ಇಚ್ಛಿಸುವುದಿಲ್ಲ, ಪರೀಕ್ಷೆಗಳೇ ಪರಮಪವಿತ್ರ ಎಂದು, ಅದರ ಸುತ್ತಲೇ ಕೆಲಸ ಮಾಡಲು ಪ್ರಯತ್ನಿಸುತ್ತೇವೆ. ನಿಮಗೆ ಕಲಿಕಾ ನ್ಯೂನತೆ ಇರುವ ಮಗುವೊಂದಿದ್ದರೆ, ಅದರ ಏಳಿಗೆಗೆ ನೆರವಾಗಬೇಕು. ಪರ್ಯಾಯ ಕಲಿಕೆ ಮತ್ತು ಮೌಲ್ಯಮಾಪನ ಮಾರ್ಗಗಳನ್ನು ನಾವು ಕಂಡುಕೊಳ್ಳಬೇಕು, ಅದು ಇತರ ಮಾರ್ಗಗಳಂತೆ ಕಠಿಣ ಮತ್ತು ನ್ಯಾಯ ಸಮ್ಮತವಾಗಿರಬೇಕು. ನಮಗೆ ಸಹಾಯ ಮಾಡಲು ಪ್ರಪಂಚದಾದ್ಯಂತ ಸಾಕಷ್ಟು ಸಂಶೋಧನೆಗಳಿವೆ. ಇದನ್ನು ಅನುಮತಿಸುವ ಮತ್ತು ಪ್ರೋತ್ಸಾಹಿಸುವ ವ್ಯವಸ್ಥೆಯನ್ನು ನಾವು ರಚಿಸಬೇಕು.

ಹದಿಹರೆಯದ ಸಮಯದಲ್ಲಿ ವೈಕಲ್ಯವುಳ್ಳ ಮಕ್ಕಳ ನಿರ್ವಹಣೆಯ ಬಗ್ಗೆಯೂ ಸಾಕಷ್ಟು ಮೆಚ್ಚುಗೆ ಅಥವಾ ತಿಳುವಳಿಕೆ ಇಲ್ಲ. ಅವರ ಶಾರೀರಿಕ, ಭಾವನಾತ್ಮಕ ಸಂಗತಿಗಳು, (Emotional selves) ಬೌದ್ಧಿಕ ವೈಕಲ್ಯತೆಗಳಿರದ ತೀವ್ರ ಕಾರ್ಯ ಚಟುವಟಿಕೆಯ ಸ್ವಲೀನತೆಯುಳ್ಳ (Autism spectrum) ಮಕ್ಕಳು; ಅತ್ಯಂತ ತೀಕ್ಷ್ಣವಾದ ಬುದ್ಧಿಮತ್ತೆಯುಳ್ಳ, ಆದರೆ ಬಹುವಿಧದ ದೈಹಿಕ ವಿಕಲತೆಯುಳ್ಳವರು; ಕಲಿಕಾ ನ್ಯೂನತೆಯಿರುವ ಗುಂಪಿನ ವಿವಿಧ ವಿಭಾಗಗಳ ಮಕ್ಕಳು, ಬೌದ್ಧಿಕ ವಿಕಲತೆಯುಳ್ಳ ಮಕ್ಕಳು – ಇವರಿಗೆ ಹದಿಹರೆಯದ ಸಮಯದಲ್ಲಿ ಏನಾಗುತ್ತದೆ? ಅವರ ಭಾವನಾತ್ಮಕ ಪ್ರತಿಕ್ರಿಯೆಗಳು; ಅವರ ಬದಲಾಗುತ್ತಿರುವ ವಿಚಾರಗಳು; ಅವರ ಸೌಂದರ್ಯದ ಕಲ್ಪನೆ; ಲೈಂಗಿಕ ಆಕರ್ಷಣೆ; ತಮ್ಮ ದೇಹದಲ್ಲಿನ ಬದಲಾವಣೆಯನ್ನು ನಿರ್ವಹಿಸುವುದು, ಹೀಗೆ ಏನಾದರೂ ವಿಶೇಷವಾದುದು ಘಟಿಸುತ್ತದೆಯೇ? ವಿಶೇಷ ಅಗತ್ಯವುಳ್ಳ ಮಕ್ಕಳು ವಿಭಿನ್ನರು ಎಂಬ ನಮ್ಮ ಅನೇಕ ನಂಬಿಕೆಗಳಿಂದಾಗಿ ಇಂಥ ಸಂಗತಿಗಳನ್ನು ನಾವು ಸಾಕಷ್ಟು ಅರ್ಥೈಸಿಕೊಂಡಿಲ್ಲ. ಹೀಗಾಗಿ ನಮ್ಮ ವಿಶೇಷ ಅಗತ್ಯವುಳ್ಳ ಮಕ್ಕಳನ್ನು ಹದಿಹರೆಯ ಮತ್ತು ಯುವ ಪ್ರೌಢಾವಸ್ಥೆಗೆ ನಾವು ತಯಾರು ಮಾಡುವುದಿಲ್ಲ.

ಸಾಮಾಜಿಕ ಸಮನ್ವಯತೆಯತ್ತ (Societal inclusion) ಯಾವುದೇ ನಡೆಯಲ್ಲಿ ಇದು ನಿರ್ಣಾಯಕವಾಗಲಿದೆ. ಏಕೆಂದರೆ ಮಕ್ಕಳು ತಾವೇ ನಿರ್ವಹಿಸಬಲ್ಲ ಅನೇಕ ವಿಷಯಗಳನ್ನು ನಿಭಾಯಿಸಲು ಸಾಧ್ಯವಾಗದಿದ್ದರೆ, ಅದು ಶಾಶ್ವತವಾಗಿ ಹೋರಾಟವಾಗಿ ಪರಿಣಮಿಸುತ್ತದೆ ಹೊರ ಜಗತ್ತಿಗೆ ತೆರೆದುಕೊಳ್ಳಲು ಸಾಮರ್ಥ್ಯವುಳ್ಳವರು ಅಥವಾ ಸ್ವತಂತ್ರವಾಗಿ ಜೀವಿಸಲು ಸಾಧ್ಯವಿರುವ ಮಕ್ಕಳಿಗೂ ಕೂಡ ನಿರಂತರ ರಕ್ಷಣೆಯ ಅಗತ್ಯವಿದೆ. ಎಲ್ಲಾ ಮಕ್ಕಳಿಗೂ ಕಾಳಜಿಯ ಅಗತ್ಯವಿಲ್ಲದಿದ್ದರೂ, ಒಂದು ಹಂತದ ಬಳಿಕ ನಿರಂತರ ರಕ್ಷಣೆಯೂ ಮಗುವಿಗೆ ಸೂಕ್ತವಲ್ಲ ಮತ್ತು ಅದು ಋಣಾತ್ಮಕವಾಗಿ ಪರಿಣಮಿಸುತ್ತದೆ. ಭಾವನಾತ್ಮಕ ಮತ್ತು ದೈಹಿಕ ಸುರಕ್ಷತೆಯ ಸಮಸ್ಯೆಗಳು ಬೃಹತ್ ಆಗಿದೆ. ದುರು-ಪಯೋಗವಾಗುವ ಅಪಾಯ ಸದಾ ಇದ್ದು, ಅದರಿಂದ ಓಡಿ-ಹೋಗಲು ಸಾಧ್ಯವಿಲ್ಲ. ಕೆಲವು ಮಕ್ಕಳಿಗೆ ಯಾವಾಗಲೂ ಇತರರಿಗಿಂತ ಹೆಚ್ಚಿನ ರಕ್ಷಣೆ ಬೇಕಾಗುತ್ತದೆ. ಆದ್ದರಿಂದ, ಮಗುವಿನ ಸುತ್ತ ಬೆಂಬಲ ವ್ಯವಸ್ಥೆಯನ್ನು ನಿರ್ಮಿಸುವುದು ಬಹಳ ಮುಖ್ಯ. ಆದರೆ ಎಲ್ಲಾ ವಿಶೇಷ ಅಗತ್ಯವುಳ್ಳ ಮಕ್ಕಳು ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಅಸಮರ್ಥರು ಎಂದು ಭಾವಿಸುವುದು ಒಂದು ಅತಿಯಾದ ಪ್ರತಿಕ್ರಿಯೆಯಾದೀತು.

ಅಲ್ಲದೆ, ಬಹಳ ಸಂಕೀರ್ಣವಾದ ಶೈಲಿಯಲ್ಲಿ ಸನ್ನಿವೇಶಗಳಿಗೆ ಪ್ರತಿಕ್ರಿಯಿಸುವುದು ಆ ಕುಟುಂಬಗಳಿಗೆ ಬಹಳಷ್ಟು ತೊಂದರೆ ನೀಡುತ್ತದೆ. ಕೆಲವು ಸರಳ ವಿಚಾರಗಳು, ಕಾರ್ಯರೂಪಕ್ಕೆ ಬರುವ ಸಣ್ಣ ವಿಚಾರಗಳು, ತಾಯಿ ಅಥವಾ ಮಗು ಅಥವಾ ಸ್ನೇಹಿತರು ನಿಜವಾಗಿಯೂ ಕಾರ್ಯನಿರ್ವಹಿಸುವಂತೆ ಮಾಡುವವುಗಳನ್ನು ನಾವು ಆಗಾಗ್ಗೆ ತಪ್ಪಿಸಿಕೊಳ್ಳುತ್ತೇವೆ. ಇವುಗಳಲ್ಲಿ ಹೆಚ್ಚಿನವು ನಮ್ಮ ಎಲ್ಲ ಮಕ್ಕಳಿಗೂ ಅನ್ವಯಿಸುತ್ತವೆ. ನಾವು ಅನೇಕ ವಿಷಯಗಳನ್ನು, ಕೆಲವೊಮ್ಮೆ ಬಹಳ ಸಣ್ಣ ವಿಷಯಗಳನ್ನು ಸಹ ಬದಲಾಯಿಸಿ-ಕೊಳ್ಳಬೇಕಾಗುತ್ತದೆ ಮತ್ತು ಹಾಗೆ ಅದನ್ನು ಬದಲಾಯಿಸುವುದು ವ್ಯವಸ್ಥೆಯ ಜವಾಬ್ದಾರಿಯಾಗಿದೆ. ಮಕ್ಕಳು ಅವರಿಗಿರುವ ವೈಕಲ್ಯವನ್ನು ನಿಭಾಯಿಸಲು ಸಾಧ್ಯವಿಲ್ಲ ಎಂದು ಭಾವಿಸುವುದನ್ನು ಒಂದು ತತ್ವವಾಗಿ ನೋಡಿದರೆ ಅದು ಅವರ ಘನತೆಗೆ ಮಾಡಿದ ಅವಮಾನ ಎಂದು ಕೂಡ ನಾನು ಯೋಚಿಸುತ್ತೇನೆ. ಇದು ಹೇಗಿದೆ ಎಂದರೆ ನಾನು ದಿನದ 24 ಗಂಟೆಗಳ ಕಾಲ ಇಟಾಲಿಯನ್ ಮಾತನಾಡುವ, ಇಟಾಲಿಯನ್ ಭಾಷೆಯಲ್ಲಿ ಎಲ್ಲಾ ಪಠ್ಯವನ್ನು ಹೊಂದಿರುವ ತರಗತಿಯಲ್ಲಿ ನಾನು ಬೆಳೆದಂತೆ, ಮತ್ತು ಅವರ ಇಡೀ ಸಾಂಸ್ಕೃತಿಕ ವ್ಯಾಕರಣವು ನನಗೆ ಸಂಪೂರ್ಣವಾಗಿ ಅನ್ಯವಾಗಿ ನಾನು ಆ ತರಗತಿಯಲ್ಲಿ ವೈಕಲ್ಯವುಳ್ಳವಳಂತಾಗುತ್ತೇನೆ. ಒಂದು ಸಾಮಾನ್ಯ ಪರಿಸ್ಥಿತಿಯಲ್ಲಿ, ಅದು ತರಗತಿಯಾಗಲಿ ಅಥವಾ ಆಟದ ಮೈದಾನವಾಗಲಿ ಅಥವಾ ಮಾರುಕಟ್ಟೆಯಾಗಲಿ ವಿಶೇಷ ಅಗತ್ಯವುಳ್ಳ ನಮ್ಮ ಬಹುತೇಕ ಮಕ್ಕಳು ಇದೇ ರೀತಿಯ ಭಾವನೆಯನ್ನು ಹೊಂದುತ್ತಾರೆ. ಅವರನ್ನು ಚೆನ್ನಾಗಿ ತಿಳಿದಿರುವ ಯಾರಾದರೂ ಮಾರುಕಟ್ಟೆ ಮತ್ತು ಆಟದ ಮೈದಾನದಂತಹ ಅನೌಪಚಾರಿಕ ಸ್ಥಳಗಳಲ್ಲಿ ಮಧ್ಯಸ್ಥಿಕೆ ವಹಿಸಬಹುದು, ಆದರೆ ತರಗತಿಯಲ್ಲಿ ಅವರು ಹೆಚ್ಚಾಗಿ ಏಕಾಂಗಿಯಾಗಿರುತ್ತಾರೆ.

ಹಾಗಾಗಿ, ಎಲ್ಲರನ್ನೂ ಒಳಗೊಂಡ ರೀತಿಯಲ್ಲಿ ಆ ತರಗತಿಯನ್ನು ಮರು ವಿನ್ಯಾಸಗೊಳಿಸಲು ಸಾಧ್ಯವಾಗಿಸುವುದು ಒಂದು ಸವಾಲಾಗಿದ್ದು, ನಾವೆಲ್ಲರೂ ಈ ನಿಟ್ಟಿನಲ್ಲಿ ಕಾರ್ಯ-ಪ್ರವೃತ್ತರಾಗಬೇಕಿದೆ. ಅವರು ತರಬೇತಿ ಪಡೆದಿರುವುದರಿಂದ ಅಥವಾ ಉತ್ತಮ ಶಿಕ್ಷಕರಾಗಿರುವುದರಿಂದ ಮತ್ತು ಅವರು ಮಕ್ಕಳನ್ನು ಮಕ್ಕಳಂತೆ ನೋಡಿ ಉಪಚರಿಸುವುದರಿಂದ ಅವರಿಗೆ ಇದು ಸಾಧ್ಯವಾಗಿದೆ. ತಾಂತ್ರಿಕವಾಗಿ, ಅವರು ಮಹತ್ವದ ವಿಚಾರ ಮಾಡದೆ

ಇರಬಹುದು, ಆದರೆ ಅವರು ಪ್ರಸ್ತುತ ಪರಿಸರದಲ್ಲಿ ಕೆಲವು ವಿಷಯಗಳನ್ನು ನಿಭಾಯಿಸುವ ಸಾಮರ್ಥ್ಯವನ್ನು ಹೊಂದಿರುವ ಮಕ್ಕಳನ್ನು ತಯಾರು ಮಾಡುತ್ತಾರೆ. ಅತಿ ಕುಗ್ರಾಮಗಳಲ್ಲೂ ಇದು ಸಂಭವಿಸುವುದನ್ನು ನಾನು ನೋಡಿದ್ದೇನೆ. ಹಳ್ಳಿಯಲ್ಲಿ ಮಗುವಿಗೆ ಹೋಗಲು ಬೇರೆ ಜಾಗವಿಲ್ಲದ ಕಾರಣ, ಅದು ಆ ಹಳ್ಳಿಯ ಶಾಲೆಗೆ ಹೋಗುತ್ತದೆ. ಪೋಷಕರಿಬ್ಬರೂ ಇಡೀ ದಿನ ಕೆಲಸದ ನಿಮಿತ್ತ ಹೊರಗಿರುತ್ತಾರೆ. ಅಜ್ಜಿ–ಅಜ್ಜಂದಿರೂ ಸಹ ಕೆಲಸದಲ್ಲಿರುತ್ತಾರೆ, ಹಾಗಾಗಿ ಮಗುವನ್ನು ನೋಡಿಕೊಳ್ಳಲು ಯಾರೂ ಇಲ್ಲದ್ದರಿಂದ ಒಡಹುಟ್ಟಿದವರೊಂದಿಗೆ ಮಗುವು ಶಾಲೆಗೆ ಬರುತ್ತದೆ. ತುಂಬಾ ಅದೃಷ್ಟ ಹೊಂದಿದ್ದರೆ ಇಲ್ಲಿ ಮಗುವನ್ನು ಸ್ವಾಗತಿಸಿ ಅರ್ಥ–ಮಾಡಿಕೊಳ್ಳುವ ಶಿಕ್ಷಕರು ಸಿಗುತ್ತಾರೆ ಹಾಗೂ ಮಗು ಕೆಲವು ವಿಷಯಗಳನ್ನು ಕಲಿಯಲು ಮತ್ತು ಮಾಡಲು ಪ್ರಾರಂಭಿಸುತ್ತದೆ. ಮಗುವಿಗೆ ಸರಿಯಾದ ರೀತಿಯ ಚಿಕಿತ್ಸೆ, ಸರಿಯಾದ ರೀತಿಯ ಶೈಕ್ಷಣಿಕ ಮಾರ್ಗದರ್ಶನ, ಸರಿಯಾದ ರೀತಿಯ ಇತ್ಯಾದಿ ಇತ್ಯಾದಿ ಸರಿಯಾದ ಹಂತದಲ್ಲಿ ಸಿಗುವುದು ಸಾಧ್ಯವಾದರೆ ಬಹುಶಃ ಮಗುವಿನ ಪ್ರಗತಿಯು ಹೆಚ್ಚು ಉತ್ತಮವಾಗುತ್ತಿತ್ತು. ಆದರೆ ನೀವು ಶಾಲೆಗೆ ಕಾಲಿಟ್ಟಾಗ ಮತ್ತು ಆ ಸಂದರ್ಭಗಳಲ್ಲಿ, ಸಂತೋಷದಿಂದ ಕೆಲವು ಸಂಗತಿಗಳನ್ನು ಮಾಡುತ್ತಿರುವ ಮಗುವನ್ನು ನೀವು ನೋಡುತ್ತೀರಿ, ಅದು ಬಹಳವಾಗಿ ನಂಬಲು ಅಸಾಧ್ಯವಾದದ್ದು. ಈ ಮಗುವನ್ನು ಮಗುವಂತೆಯೇ ನೋಡುವ ಶಿಕ್ಷಕರಿಂದ ಇದು ಸಾಧ್ಯವಾಗಿದೆ.

ಮತ್ತೊಂದೆಡೆ, ಯಾವುದೇ ವಿಷಯಕ್ಕೆ ಅನಾವರಣಗೊಳ್ಳದ, ಈ ವಿಷಯಗಳ ಬಗ್ಗೆ ಯಾವುದೇ ತಿಳುವಳಿಕೆಯಿಲ್ಲದ, ತನ್ನ ತರಗತಿಯಲ್ಲಿ ಐವತ್ತು ಮಕ್ಕಳನ್ನು ಹೊಂದಿರುವ ಶಿಕ್ಷಕರಿಂದ ಇದನ್ನು ನಿರೀಕ್ಷಿಸುವುದು, ಯಾವುದೇ ಬೆಂಬಲವಿಲ್ಲದೆ ಇವೆಲ್ಲವನ್ನು ನಿಭಾಯಿಸುತ್ತಾ ಮತ್ತು ನಂತರ ಶಿಕ್ಷಕರಿಗೆ ಕಾಳಜಿ ಇಲ್ಲ ಎಂದು ಹೇಳುವುದು ಸರಿಯೆನಿಸಲಾರದು. ಇದನ್ನು ಶಿಕ್ಷಕರೇ ಸಮತೋಲನಗೊಳಿಸಿಕೊಳ್ಳಬೇಕು, ಯಾರೋ ಒಬ್ಬ ಆದರ್ಶ ನಾಯಕರ ಮೇಲೆ ಅವರು ಅವಲಂಬಿತವಾಗಿ ಇರಲಾಗುವುದಿಲ್ಲ. ಮಕ್ಕಳಿಗೆ ಸಹಾಯ ಮಾಡುವ ವ್ಯವಸ್ಥೆಯ ಮೇಲೆ ಈ ಜವಾಬ್ದಾರಿ ಇರಬೇಕು, ಪರಿಹಾರಗಳು ಸರಳ ಮತ್ತು ಸುಸ್ಥಿರವಾಗಿರಬೇಕು ಮತ್ತು ಮೂರನೆಯದಾಗಿ ಪರಿಶುದ್ಧ ವಿಚಾರಗಳ ಆಧಾರದಲ್ಲಿ ಅಲ್ಲದೆ, ಸಾಧ್ಯವಿರುವ ಹೊಂದಾಣಿಕೆ, ಬದಲಾವಣೆಗಳನ್ನು ಮಾಡುವಂತಿರಬೇಕು. ಈಗ ಸಾಧ್ಯವಾದದ್ದನ್ನು ಮಾಡೋಣ.

ಕೆಲವು ರಚನಾತ್ಮಕ ಮತ್ತು ವ್ಯವಸ್ಥಿತ ಸಮಸ್ಯೆಗಳನ್ನು ಪರಿಹರಿಸಬೇಕಾಗಿದೆ, ವಿಶೇಷ ಅಗತ್ಯವುಳ್ಳ ಮಕ್ಕಳ ಶಿಕ್ಷಕರ ತರಬೇತಿಯನ್ನು ಸಾಮಾನ್ಯ ಶಿಕ್ಷಕರ ತರಬೇತಿಯಲ್ಲಿ ಸಂಯೋಜಿಸುವುದು; ಮೌಲ್ಯಮಾಪನದ ಪರ್ಯಾಯ ವ್ಯವಸ್ಥೆಯನ್ನು ರಚಿಸುವುದು, ಪಠ್ಯಕ್ರಮದ ಮೇಲೆ ಪ್ರಯೋಗಗಳನ್ನು ನಡೆಸುವುದು, ಇಂಥ ಅಂಶಗಳನ್ನು ನಿಜವಾಗಿಯೂ ಎಲ್ಲಾ ಮಕ್ಕಳನ್ನು ತಲುಪುವಂತೆ ಪರಿಹರಿಸಬೇಕು. ಈ ಅಂಶಗಳಿಗಾಗಿ, ವ್ಯವಸ್ಥೆಯು ಸಿದ್ಧವಾಗಿರಬೇಕು ಎಂದು ನಾನು ಭಾವಿಸುತ್ತೇನೆ. ವೈಕಲ್ಯವುಳ್ಳ ಮಕ್ಕಳು ಎಲ್ಲಿದ್ದರೂ ಅಂತಹ ಸಂಪನ್ಮೂಲಗಳನ್ನು ಒದಗಿಸಲು ಶಾಲೆಗೆ ಸಾಧ್ಯವಾಗಬೇಕು. ಎಲ್ಲ ಶಾಲೆಗಳಲ್ಲೂ ವೈಕಲ್ಯತೆಯುಳ್ಳ ಮಗು ಇರುವುದಿಲ್ಲ. ಆದರೆ ಒಮ್ಮೆ ನೀವು ಒಂದು ಮಗುವನ್ನು ಗುರುತಿಸಿದ ನಂತರ ಶಾಲೆಯೊಳಗೆ ಇಲ್ಲದ, ಆದರೆ ಶಾಲೆಗಳ ಸಮೂಹದ ನಡುವೆ ಸಂಪನ್ಮೂಲ ಕೇಂದ್ರದಲ್ಲಿರುವ ಸಂಪನ್ಮೂಲಗಳನ್ನು ಗುರುತಿಸುವ ಸಾಮರ್ಥ್ಯವನ್ನು ಶಿಕ್ಷಕರು ಹೊಂದಿರಬೇಕು. ಇದು ವಿಶಾಲವಾದ, ಭೌಗೋಳಿಕವಾಗಿ ಹರಡುವುದರ ಮೂಲಕ ಕಾರ್ಯನಿರ್ವಹಿಸುವ ವ್ಯವಸ್ಥೆಯಾಗಿದೆ. ನಮ್ಮ ಪ್ರತಿಯೊಂದು ಶಾಲೆಗೂ ಪ್ರಸ್ತುತ ಸ್ವರೂಪದಲ್ಲಿ ಅಂತಹ ಸಂಪನ್ಮೂಲಗಳನ್ನು ಹೊಂದಲು ಸಾಧ್ಯವಾಗುವುದಿಲ್ಲ. ನಾವು ಮುಂದೆ ನಮ್ಮ ಸ್ವರೂಪವನ್ನು ಬದಲಾಯಿಸಿದರೆ, ಅದು ವಿಭಿನ್ನವಾಗಿರುತ್ತದೆ.

ನೂತನ 2016ರ ವಿಕಲತೆಗಳುಳ್ಳ ವ್ಯಕ್ತಿಗಳ ಹಕ್ಕು ಕಾಯ್ದೆಯು (PWD Act 2016) ಬಹಳ ಸಮಗ್ರವಾಗಿದೆ. ಈ ಕಾಯ್ದೆಯು ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ (National Education Policy - NEP) ಶಿಫಾರಸು ಮಾಡಲಾಗಿರುವ ಅಂಶಗಳಿಗೆ ಅನುಗುಣವಾಗಿದೆ. ಈಗ ತಮ್ಮ ಹಕ್ಕುಗಳಿಗಾಗಿ ಹೋರಾಡಲು ಸಾಧ್ಯವಾಗದ ವೈಕಲ್ಯವುಳ್ಳವರನ್ನು ನಾವು ಹೇಗೆ ಸದೃಢರನ್ನಾಗಿ ಮಾಡುವುದು?, ದೇಶಾದ್ಯಂತ ಹಲವಾರು ಗುಂಪುಗಳಿವೆ ಮತ್ತು ಅವುಗಳಲ್ಲಿ ಹೆಚ್ಚಿನವು ಪೋಷಕ ಗುಂಪುಗಳಾಗಿ ಪ್ರಾರಂಭವಾದವು. ಏಕೆಂದರೆ ಹೆಚ್ಚು ಅನುಭವಿಸುವ, ಕಷ್ಟಪಡುವ ಮತ್ತು ಹೆಚ್ಚು ಹೋರಾಟ ಮಾಡುವವರು ಅವರೇ. ಆದ್ದರಿಂದ, ಪೋಷಕರ ಸಂಘಗಳು ವೈಕಲ್ಯವುಳ್ಳವರ ಪರವಾದ ಆಂದೋಲನವನ್ನು ಮುನ್ನಡೆಸಿವೆ. ನಂತರ, ಇವರೊಂದಿಗೆ ಸ್ವತಃ ವೈಕಲ್ಯವುಳ್ಳವರು, ಶಿಕ್ಷಣವನ್ನು ಪಡೆದವರು, ಸಮುದಾಯದೊಂದಿಗೆ ಕೆಲಸ ಮಾಡಲು ಬಯಸಿದವರು, ಒಟ್ಟಾಗಿ ಬಲವಾದ ಧ್ವನಿಯನ್ನು ಹೊಂದಿರಬೇಕು ಎಂದು ಅರಿತು ಕೊಂಡಿರುವವರು ಸಹ ಇದ್ದಾರೆ. ಅಲ್ಲದೆ, ವಿಶೇಷ ಅಗತ್ಯವುಳ್ಳ ಮಕ್ಕಳೊಂದಿಗೆ ಹಲವು ವರ್ಷಗಳಿಂದ ಕೆಲಸ ಮಾಡಿದ ಸಂಸ್ಥೆಗಳು ಇವೆ. ವಿಶೇಷ ಅಗತ್ಯವುಳ್ಳ ವ್ಯಕ್ತಿಗಳ ಹಕ್ಕು ಕಾಯ್ದೆ 2016 ಇದರ ಫಲವಾಗಿದೆ. ಅದು ಮೊದಲ ಕಾಯಿದೆಯೇನೂ ಅಲ್ಲ, ಆದರೆ ಇದರಿಂದ ಬಂದ ವಿವಿಧ ರೀತಿಯ ಬದಲಾವಣೆಗಳು, ಭಾಷೆ–ಇವು ಈ ರಾಷ್ಟ್ರೀಯ ಮಟ್ಟದ ಹೋರಾಟದ ಫಲಿತಾಂಶವಾಗಿದೆ.

ಆದರೆ ಸಣ್ಣ ಸ್ಥಳಗಳಲ್ಲಿ, ಈ ರೀತಿಯ ಬೆಂಬಲ ವ್ಯವಸ್ಥೆ ಲಭ್ಯವಿರದ ಸ್ಥಳಗಳಲ್ಲಿ, ಪೋಷಕರು ವಿಶೇಷವಾಗಿ ಮಗುವನ್ನು ಚಿಕ್ಕವನಿದ್ದಾಗಿನಿಂದ ಅವರು ನೋಡಿರುವುದರಿಂದ, ಅವರೇ ಮೊದಲ ಧ್ವನಿಯಾಗುವುದು ಬಹಳ ಮುಖ್ಯ. ಅವರು ಪ್ರಶ್ನೆಗಳನ್ನು ಕೇಳಬೇಕು, ಸೇವೆಗಳಿಗೆ ಬೇಡಿಕೆ ಮತ್ತು ಕೊಡುಗೆ ನೀಡಬೇಕು, ಪ್ರೋತ್ಸಾಹಿಸಬೇಕು, ಅಲ್ಲಿ ಸಾಧ್ಯವಿರುವ ಎಲ್ಲ ಉಪಕರಣಗಳನ್ನು ಬಳಸಬೇಕು. ಕೆಲಮೊಮ್ಮೆ, ಕುಟುಂಬಗಳಿಗೆ ಈ ರೀತಿಯ ಸೌಲಭ್ಯಗಳು ಲಭ್ಯವಿವೆ ಎಂದು ತಿಳಿದಿರುವುದಿಲ್ಲ ಮತ್ತು ನಿಸ್ಸಂಶಯವಾಗಿ, ಇವುಗಳಿಗೆ ಆರ್ಥಿಕ ಮತ್ತು ಭೌತಿಕ ಲಭ್ಯತೆಗಳು ಸೀಮಿತವಾಗಿದೆ. ಆದ್ದರಿಂದ, ಕುಟುಂಬವು ವ್ಯವಸ್ಥೆಯನ್ನು ತಲುಪುವ ಬದಲು ವ್ಯವಸ್ಥೆಯು ಕುಟುಂಬವನ್ನು ತಲುಪುತ್ತದೆ ಎಂಬುವುದು ಇಲ್ಲಿಯ ಯೋಚನೆ. ಆದರೆ ವಾಸ್ತವದಲ್ಲಿ, ನಮ್ಮಂತಹ ದೊಡ್ಡ ದೇಶದಲ್ಲಿ ಇದು ಸಾಧ್ಯವಿಲ್ಲ. ಶೈಕ್ಷಣಿಕ ಸ್ವರೂಪ, ಸರ್ಕಾರೇತರ ಸಂಸ್ಥೆಗಳು (ಎನ್‌ಜಿಒಗಳು) ಮತ್ತು ನಾಗರಿಕ ಸಮಾಜ ಸಂಸ್ಥೆಗಳು ಹೀಗೆ ನಾವು ಲಭ್ಯವಿರುವ ವ್ಯವಸ್ಥೆಯಲ್ಲಿ ಎಲ್ಲಾ ಸ್ವರೂಪಗಳನ್ನು ಬಳಸಬೇಕಾಗುತ್ತದೆ. ಇನ್ನೂ ಜವಾಬ್ದಾರಿ ಸರ್ಕಾರದ ಮೇಲಿದೆ, ಆದರೆ ಜನರು ಪಂಚಾಯತಿಗಳು, ಶಾಲಾ ನಿರ್ವಹಣಾ ಮಂಡಳ (ಎಸ್‌ಎಂಸಿ)ಗಳು ಮತ್ತು ಇತರೆಡೆಗಳಲ್ಲಿ ಮಾತುಕತೆಗಳನ್ನು ಪ್ರಾರಂಭಿಸಬೇಕು ಮತ್ತು ಸಂಪನ್ಮೂಲಗಳನ್ನು ಹೇಗೆ ಹೊಂದಿಸಿಕೊಳ್ಳಬಹುದು ಎಂಬುದನ್ನು ಕಂಡುಹಿಡಿಯಲು ಪ್ರಯತ್ನಿಸಬೇಕು. ಇದು ಹೋಗಿ ಬೇಡಿಕೆಯನ್ನಿಡುವ ವಿಷಯವಲ್ಲ; ನಿಜವಾಗಿಯೂ ಆಲೋಚನೆಗಳನ್ನು ಹೊರಹೊಮ್ಮಿಸುವ ವಿಷಯವಾಗಿದೆ. ವ್ಯವಸ್ಥೆಯಲ್ಲಿರುವ ಜನರು ಸಹಾಯ ಮಾಡಲು ಬಯಸುವುದಿಲ್ಲ, ಅವರು ಆಸಕ್ತಿ ಹೊಂದಿಲ್ಲ ಎಂಬಂತೆಯೂ ಅಲ್ಲ.

ಪೋಷಕರು 'ಕ' ಜಿಲ್ಲೆಯ 'ದ' ವಲಯದಲ್ಲಿ ಅಧಿಕಾರಿಯನ್ನು ವಾಕ್ ಚಿಕಿತ್ಸಕರಿಗಾಗಿ ಕೇಳಿದರೆ, ಅಧಿಕಾರಿಯು ಅವರನ್ನು ಎಲ್ಲಿ ಹುಡುಕುತ್ತಾನೆ? ಆದರೆ ಪೋಷಕರು ರಾಜ್ಯ ರಾಜಧಾನಿಯಲ್ಲಿ ವಾಕ್ ಚಿಕಿತ್ಸಕರಿಗೆ ತರಬೇತಿ ನೀಡುವ ಕಾಲೇಜು ಇದೆ ಮತ್ತು ಅವರ ಅಂತಿಮ ವರ್ಷದ ಕೆಲವು ವಿದ್ಯಾರ್ಥಿಗಳಿಗೆ ವಲಯ ಮಟ್ಟದಲ್ಲಿ ಪ್ರಾಯೋಗಿಕ ತರಬೇತಿಗೆ ಕಳಿಸಲು ಉತ್ಸುಕವಾಗಿದೆ. ಎಂದು ಹೇಳಿದರೆ, ಅದು ಅಧಿಕಾರಿಗೆ ಕೆಲವು ವಿಚಾರಗಳನ್ನು ಹೊಳೆಯಿಸ-ಬಹುದು. ಬೋಧಕರು ಇದ್ದರೂ, ಒಬ್ಬರು ಅಥವಾ ಇಬ್ಬರು ಪೋಷಕರಿಗೆ ಅವರು ಬೇಗನೆ ಕಲಿಯುವ ತರಬೇತಿ ನೀಡಬಹುದು ಮತ್ತು ಕೆಲವು ಚಿಕಿತ್ಸೆಯನ್ನು ಪೋಷಕರೇ ಮಾಡಲು ಪ್ರಾರಂಭಿಸಬಹುದು. ಆದ್ದರಿಂದ, ಯಾರಾದರೊಬ್ಬರು ಪರಿಹಾರಗಳು ಮತ್ತು ಆಲೋಚನೆಗಳನ್ನು ತರಬೇಕಾಗಿದೆ. ಯಾರಿಗಾದರೂ ಬೇಡಿಕೆ ಇಡುವುದು ಒಂದು ಮಾರ್ಗ, ಆದರೆ ಅದು ಸಾಕಾಗುವುದಿಲ್ಲ ಎಂದು ನಾನು ಭಾವಿಸುತ್ತೇನೆ. ನಾವು ಒಟ್ಟಾಗಿ ಕೆಲಸ ಮಾಡಬೇಕಾಗುತ್ತದೆ, ಪೋಷಕರು ತಮ್ಮ ಮಗುವಿಗೆ ಏನು ಬೇಕು ಎಂಬುದನ್ನು ಅರ್ಥಮಾಡಿಕೊಳ್ಳುವುದರಿಂದ ಅವರೇ ಇದನ್ನು ಮುನ್ನಡೆಸಬೇಕಾಗುತ್ತದೆ.

ನಾನು ಹೇಳಲು ಬಯಸುವ ಒಂದು ಕೊನೆಯ ವಿಷಯವೆಂದರೆ, ನಮ್ಮ ವೈಕಲ್ಯವುಳ್ಳ ಮಕ್ಕಳ ದತ್ತಾಂಶವು ಅದರ ವಿವರಗಳ ಕೊನೆಯ ಹಂತದವರೆಗೆ ಹೆಚ್ಚು ವಿಶ್ವಾಸಾರ್ಹವಾದುದಲ್ಲ. ಶಾಲೆಯಲ್ಲಿರುವ ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಏನಾಗುತ್ತಿದೆ, ಯಾರು ಹಾಜರಾಗುತ್ತಿದ್ದಾರೆ, ಯಾರು ಹಾಜರಾಗುತ್ತಿಲ್ಲ ಎಂಬುದನ್ನು ಪತ್ತೆಹಚ್ಚಲು ನಾವು ಇದರ ಬಗ್ಗೆ ಹೆಚ್ಚು ಉತ್ತಮವಾದ ತಿಳುವಳಿಕೆಯನ್ನು ಹೊಂದಿರಬೇಕು.



**ಇಂದು ಪ್ರಸಾದ್** ಅವರು ಪ್ರಸ್ತುತ ಬೆಂಗಳೂರಿನ ಅಜೀಂ ಪ್ರೇಮ್‌ಜಿ ಯುನಿವರ್ಸಿಟಿಯ ಸ್ಕೂಲ್ ಆಫ್ ಎಜುಕೇಶನ್ ಹಾಗೂ ಸ್ಕೂಲ್ ಆಫ್ ಕಂಟಿನ್ಯೂಯಿಂಗ್ ಎಜುಕೇಶನ್ ಮತ್ತು ಸಂಪನ್ಮೂಲ ಕೇಂದ್ರದಲ್ಲಿ ನಿರ್ದೇಶಕರು, ಇವರು 2005ರಿಂದ ಅಜೀಂ ಪ್ರೇಮ್‌ಜಿ ಪೌಂಡೇಷನ್‌ನ ಭಾಗವಾಗಿದ್ದಾರೆ ಮತ್ತು ಶಿಕ್ಷಕರ ಶಿಕ್ಷಣ (ನೀತಿ, ಪಠ್ಯಕ್ರಮ, ಅಭ್ಯಾಸ) ಮತ್ತು ಕೇಂದ್ರ ಮತ್ತು ರಾಜ್ಯ ಸರ್ಕಾರಗಳೊಂದಿಗೆ ಶಿಕ್ಷಣ ನೀತಿ ಕುರಿತು ಕೆಲಸ ಮಾಡುವುದು ಅವರ ಮುಖ್ಯ ಕ್ಷೇತ್ರಗಳಾಗಿವೆ. ಇದಕ್ಕೂ ಮುನ್ನ ಸುಮಾರು ಹದಿನೈದು ವರ್ಷಗಳ ಕಾಲ ಇಂದು ಅವರು ವೈಕಲ್ಯ ಹೊಂದಿರುವ ಮಕ್ಕಳ ಕ್ಷೇತ್ರದಲ್ಲಿ ಕೆಲಸ ಮಾಡಿದ್ದಾರೆ. ಇವರನ್ನು indu@azimpremjifoundation.org ನಲ್ಲಿ ಸಂಪರ್ಕಿಸಬಹುದು.

ಅನುವಾದ: **ಆನಂದ ಡಿ** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ಸಮನ್ವಯ ಶಿಕ್ಷಣ:
## ಸಮಂಜಸ ಅರ್ಥಗ್ರಹಿಕೆಯನ್ನು ರೂಪಿಸುವಲ್ಲಿನ ಸವಾಲುಗಳು

ಡಾ. ಅಂಕುರ್ ಮದನ್

ಕಳೆದ ಆರು ವರ್ಷಗಳಿಂದ ಶಿಕ್ಷಣ ವಿಷಯದ ಸ್ನಾತಕೋತ್ತರ ಪದವಿಗೆ ಸಮನ್ವಯ ಶಿಕ್ಷಣದ ಬಗ್ಗೆ ಪಾಠಮಾಡುತ್ತಿರುವ ನಾನು ವರ್ಷ ಕಳೆದಂತೆ ವಿದ್ಯಾರ್ಥಿಗಳಿಂದ ಒಂದು ಬಗೆಯ ಅನುಮಾನದಿಂದ ವ್ಯವಹರಿಸುವಂತಾಗಿದೆ. ಈಗಾಗಲೇ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯ ವಾಸ್ತವಗಳಿಗೆ ತೆರೆದುಕೊಂಡಿರುವ ವಿದ್ಯಾರ್ಥಿಗಳು ಭಾರತದಲ್ಲಿನ ಬಹುತೇಕ ಶಾಲೆಗಳಲ್ಲಿರುವ ಮಿತಿಗಳ ಬಗ್ಗೆಯೂ ಚೆನ್ನಾಗಿ ಅರಿತಿದ್ದಾರೆ. ಸಂಪನ್ಮೂಲಗಳ ಕೊರತೆ ಇರುವ ತರಗತಿ ಕೊಠಡಿಗಳು, ಸರಿಯಾದ ತರಬೇತಿಯಿಲ್ಲದ ಮತ್ತು ಮಕ್ಕಳೊಡನೆ ಒಡನಾಡಲು ಯಾವುದೇ ಪ್ರೇರಣೆ ಇಲ್ಲದ ಶಿಕ್ಷಕರನ್ನು ಕಂಡಿದ್ದಾರೆ. ಕಠಿಣವಾದ ಮತ್ತು ವಾಸ್ತವ ಸನ್ನಿವೇಶಕ್ಕೆ ಬಹಳ ದೂರವಿರುವ ಪಠ್ಯಕ್ರಮವನ್ನು ಅರ್ಥಮಾಡಿಕೊಳ್ಳಲು ಹೆಣಗುತ್ತಿರುವ ಕಲಿಕಾ ಸಮಸ್ಯೆಗಳುಳ್ಳ ಮಕ್ಕಳೊಡನೆ ಕೆಲಸ ಮಾಡಿದ್ದಾರೆ.

ಹಾಗಾಗಿ, ನಾನು ಅವರಿಗೆ ಸಮನ್ವಯ ಶಿಕ್ಷಣದ ಪರಿಚಯ ಮಾಡಿಸಿ ಸಂಬಂಧಪಟ್ಟ ಕಾಯಿದೆಗಳು ಮತ್ತು ನೀತಿ ನಿಯಮಗಳ ದಾಖಲೆಗಳನ್ನು ಮಾನವ ಹಕ್ಕುಗಳ ಮತ್ತು ಸಾಮಾಜಿಕ ನ್ಯಾಯದ ಬಗ್ಗೆ ಚರ್ಚೆಗಳನ್ನು ಎತ್ತಿತೋರಿಸಿ ಸಮನ್ವಯ ಶಿಕ್ಷಣದ ಅನುಷ್ಠಾನಕ್ಕೆ ಅವರ ಬೆಂಬಲ ಪಡೆಯಲು ನೋಡಿದಾಗ ಮೇಲಿನ ಅನುಭವಗಳಿಂದಾಗಿ ನನ್ನ ಈ ಪ್ರಸ್ತಾಪವನ್ನು ಅವರು ಸಂಶಯದಿಂದಲೇ ನೋಡುತ್ತಾರೆ ಮತ್ತು ವಾಸ್ತವದಲ್ಲಿ ಇದರ ಜಾರಿಯ ಸಾಧ್ಯತೆಯ ಬಗ್ಗೆ ಕಠಿಣ ಪ್ರಶ್ನೆಗಳನ್ನು ಕೇಳುತ್ತಾರೆ. ನನ್ನ ವಿದ್ಯಾರ್ಥಿಗಳೆದುರು ಈ ಪ್ರಶ್ನೆಗಳಿಗೆ ಹೆದರುವುದಿಲ್ಲವೆಂದು ತೋರಿಸಿಕೊಳ್ಳಲು ಹೆಣಗುತ್ತಾ, ಮನವರಿಕೆ ಮಾಡುವಂತೆ ವಾದಿಸಿದರೆ, ಮತ್ತೊಂದು ಬಗೆಯ ಸವಾಲನ್ನೂ ಎದುರಿಸುತ್ತೇನೆ. ಭಾರತದ ಸಂದರ್ಭದಲ್ಲಿ ಸಮನ್ವಯ ಶಿಕ್ಷಣದ ಸರಿಯಾದ ಮಾರ್ಗದರ್ಶಿ ಸೂತ್ರಗಳು, ಅದರ ಅನುಷ್ಠಾನಕ್ಕೆ ಅಗತ್ಯವಾದ ಶಿಫಾರಸುಗಳು ಇರುವ ಒಂದು ಚೌಕಟ್ಟನ್ನು ನೀಡಬಲ್ಲ ಪರಿಪೂರ್ಣವಾದ ಮತ್ತು ಗೊಂದಲವಿಲ್ಲದ ಪರಿಕಲ್ಪನೆಯನ್ನು ಅವರ ಮುಂದೆ ಮಂಡಿಸಲು ಅಸಮರ್ಥಳಾಗುತ್ತೇನೆ. ನಾನು ತರಗತಿಯಲ್ಲಿ ಬೋಧಿಸಲು ಉಪಯೋಗಿಸುವ ಹೆಚ್ಚಿನೆಲ್ಲ ಆಕರಗಳು ಮತ್ತು ಪ್ರಬಂಧಗಳು ಪಾಶ್ಚಾತ್ಯ ಜಗತ್ತಿನಲ್ಲಿ ಸೃಷ್ಟಿಯಾದವು. ಅಲ್ಲಿ ಸಮನ್ವಯ ಶಿಕ್ಷಣವು ಒಂದು ಪರಿಕಲ್ಪನೆಯಾಗಿ ಮತ್ತು ಅನುಷ್ಠಾನದಲ್ಲಿ ಬಹಳ ವರ್ಷಗಳಿಂದ ಶಿಕ್ಷಣ ಸಂಕಥನಗಳಲ್ಲಿ ಇದೆಯಷ್ಟೇ ಅಲ್ಲದೆ ಅದರ ಮೂಲ ಮತ್ತು ಅನುಷ್ಠಾನ ಚಾರಿತ್ರಿಕವಾಗಿ ನಮ್ಮ ದೇಶಕ್ಕಿಂತಲೂ ಬಹಳವೇ ವಿಭಿನ್ನ ಸಾಂದರ್ಭಿಕ ಹಿನ್ನೆಲೆಯನ್ನು ಹೊಂದಿದೆ.

ಆದ್ದರಿಂದಲೇ ತರಗತಿಯಲ್ಲಿ ನಾನು ಎದುರಿಸುವ ಅಧ್ಯಾಪನದ ಸವಾಲೆಂದರೆ ಕೇವಲ ಸಮನ್ವಯ ಶಿಕ್ಷಣದ ಆದರ್ಶಗಳನ್ನು ಭಾರತದ ಸಾರ್ವಜನಿಕ ಶಿಕ್ಷಣದಲ್ಲಿ ಅನುಷ್ಠಾನ ಮಾಡಲು ಮನವರಿಕೆಯಾಗುವಂತಹ ಮತ್ತು ಕಾರ್ಯಸಾಧುವಾದ ಪರಿಹಾರವನ್ನು ಹೇಳುವುದಷ್ಟೇ ಅಲ್ಲ, ವಿದ್ಯಾರ್ಥಿಗಳ ಕೆಲವು ನಿರುಪದ್ರವಿ ಪ್ರಶ್ನೆಗಳಿಗೆ ಉತ್ತರಿಸುವುದು ಕೂಡ ಆಗಿದೆ. ಉದಾಹರಣೆಗೆ, ಸಮನ್ವಯ ಶಿಕ್ಷಣ ಎಂದರೇನು? ಅದು ಯಾರಿಗಾಗಿ? ಅದನ್ನು ನಿಜವಾಗಿಯೂ ಸಾಕಾರಗೊಳಿಸುವುದು ಹೇಗೆ? ನಾನು ಈ ಲೇಖನದಲ್ಲಿ ಸಮನ್ವಯ ಶಿಕ್ಷಣದ ಬಗ್ಗೆ ಒಂದು ಸರಿಯಾದ ಅರ್ಥಗ್ರಹಿಕೆಗೆ ಬರಲು ಅಗತ್ಯವಾದ ಪರಿಕಲ್ಪನಾತ್ಮಕ ವಿಷಯಗಳನ್ನು ಸವಿವರವಾಗಿ ವಿವರಿಸುತ್ತೇನೆ. ಮತ್ತು ನಮ್ಮ ದೇಶದಲ್ಲಿ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯು ಸಾಮಾಜಿಕ, ಸಾಂಸ್ಕೃತಿಕ, ಸಾಂದರ್ಭಿಕತೆಗಳೊಂದಿಗೆ ನೆಲೆಗೊಂಡಿದೆ. ಹಾಗಾಗಿ ಇಲ್ಲಿ ಈ ಸಮನ್ವಯ ಶಿಕ್ಷಣದ ಗ್ರಹಿಕೆಯನ್ನು ಕಟ್ಟಿಕೊಡುವುದು ಏಕೆ ಸಮಯೋಚಿತ, ಅತ್ಯಗತ್ಯ ಎಂದೂ ಕೊನೆಯದಾಗಿ, ಸಮನ್ವಯ ಶಿಕ್ಷಣದ ಅನುಷ್ಠಾನದಲ್ಲಿ ಸಂಪೂರ್ಣವಾಗಿ ತೊಡಗಿ-ಕೊಂಡಿರುವವರನ್ನು ಬಳಸಿಕೊಂಡು ಅಗತ್ಯ ಪಾಂಡಿತ್ಯವನ್ನು ಅದರಲ್ಲಿ ಹೇಗೆ ತಳಮಟ್ಟದಿಂದ ಬೆಳೆಸಬಹುದೆಂದೂ ನಾನು ವಿವರಿಸುತ್ತೇನೆ.

### ಸಮನ್ವಯ ಶಿಕ್ಷಣದ ಸ್ವರೂಪ ಪರಿಶೀಲನೆ

ಸಮನ್ವಯ ಶಿಕ್ಷಣದ ಬಗೆಗಿನ ಶೈಕ್ಷಣಿಕ ಮತ್ತು ಪ್ರಾಯೋಗಿಕ ಆಕರಗಳನ್ನು ಹುಡುಕಲು ಭಾರತೀಯ ಸಂದರ್ಭದಲ್ಲಿ ಇರುವ ಸಮಸ್ಯೆ ವಿವಿಧ ಹಂತಗಳದು. ಮೊದಲನೆಯದಾಗಿ ಸಮನ್ವಯ ಶಿಕ್ಷಣವು ಭಾರತದಲ್ಲಿ ನೀತಿ ನಿರೂಪಣೆಯ ದಾಖಲೆಗಳಲ್ಲಿ ೯೦ರ ದಶಕದ ಕೊನೆಯಲ್ಲಿ ಸೇರ್ಪಡೆಗೊಂಡ ನಂತರ, ಒಂದು ಮುಖ್ಯ ವಿಷಯವಾಗಿ ಇತ್ತೀಚೆಗಷ್ಟೇ ಮುನ್ನೆಲೆಗೆ ಬರುತ್ತಿದೆ. ಆದ್ದರಿಂದ ಕೇವಲ ಕೆಲವೇ ಪಾಂಡಿತ್ಯಪೂರ್ಣ ಪ್ರಬಂಧಗಳು ಪ್ರಕಟವಾಗಿವೆ ಮತ್ತು ಸಾರ್ವಜನಿಕವಾಗಿ ದೊರಕುತ್ತವೆ. ಎರಡನೆಯದಾಗಿ ಕಳೆದೆರಡು ದಶಕಗಳಿಂದ ನಡೆಯುತ್ತಿರುವ ಸಮನ್ವಯ ಶಿಕ್ಷಣದ ಸಂಶೋಧನೆಗಳು ವ್ಯಾಪ್ತಿ ಮತ್ತು ಗುಣಮಟ್ಟದಲ್ಲಿ ಬಹಳ ಮಿತಿಯುಳ್ಳವು (ಅಂಡ್ಲೆ, 2007, ರೋಸ್, 2017; ಸಿಂಗಾಲ್, 2006). ಮೂರನೆಯದಾಗಿ, ನೀತಿ ನಿಯಮಗಳ ದಾಖಲೆಗಳಲ್ಲಿ ಪರಿಕಲ್ಪನೆಯು ಮೂಡಿರುವ ರೀತಿಯು ಗೊಂದಲ ಮತ್ತು ಅಪಾರ್ಥಗಳಿಗೆ ಎಡೆ ಮಾಡಿಕೊಡುವಂತಿದ್ದು, ಮಸುಕಾದ ಪರಿಕಲ್ಪನೆಯನ್ನಷ್ಟೇ ಬಿಟ್ಟುಕೊಡುತ್ತದೆ. ಅಷ್ಟೇ ಅಲ, ಮುಖ್ಯವಾಹಿನಿ ಶಿಕ್ಷಣ ಸಂಕಥನಗಳಲ್ಲಿ ಸಮನ್ವಯ ಶಿಕ್ಷಣವು ಒಂದು ಅವಿಭಾಜ್ಯ ಅಂಗವಾಗಿ ಸ್ಥಾನವನ್ನೇ ಪಡೆದಿಲ್ಲ. ಹಾಗಾಗಿ, ಇದು ಪಡೆದಿರುವ ಹೊರವಲಯದ ಸ್ಥಾನದಿಂದಾಗಿ ಶೈಕ್ಷಣಿಕ ಅಧ್ಯಯನ ಕ್ಷೇತ್ರಗಳ ಜ್ಞಾನಭಂಡಾರಕ್ಕೆ ಯಾವುದೇ ರೀತಿಯ ಮಹತ್ವಪೂರ್ಣ ಕೊಡುಗೆ ನೀಡಲು ಆಗುತ್ತಿಲ್ಲ.

ಆದಾಗ್ಯೂ, ಇವು ಸಮನ್ವಯ ಶಿಕ್ಷಣದಲ್ಲಿ ಜ್ಞಾನ ಮತ್ತು ಪರಿಣತಿಯನ್ನು ರೂಪಿಸಲು ಭಾರತದಲ್ಲಿರುವ ಸಮಸ್ಯೆಗಳಾಗಿದ್ದರೂ ಈಗಾಗಲೇ ಈ ವಿಷಯದಲ್ಲಿ ಹೆಚ್ಚು ಗಮನವನ್ನು ನೀಡಿರುವ ಪಾಶ್ಚಾತ್ಯ ಸನ್ನಿವೇಶದಲ್ಲೂ ಸಮನ್ವಯ ಶಿಕ್ಷಣವು ಹಲವು ನಿರೂಪಣೆಗಳಿಂದ ಕೂಡಿದ್ದು ವಿವಾದದ ವಿಷಯವೇ ಆಗಿದೆ. ಆರ್ಮ್‌ಸ್ಟ್ರಾಂಗ್, ಆರ್ಮ್‌ಸ್ಟ್ರಾಂಗ್ ಮತ್ತು ಸ್ಪಾಂಡಗೌ(2010) ಅವರು ವಿಷಯವನ್ನು ಮನಕ್ಕೆ ಮುಟ್ಟಿಸಲು 'ಸಮನ್ವಯ ಎನ್ನುವುದು ಒಬ್ಬೊಬ್ಬರಿಗೆ ಒಂದೊಂದು ಬಗೆಯಲ್ಲಿ ಅರ್ಥವಾಗುತ್ತದೆ' ಎಂಬ

ನಾಣ್ಣುಡಿಯನ್ನು ಬಳಸುತ್ತಾರೆ. ಲೇಖಕರು ಮುಂದುವರೆಯುತ್ತಾ ಸಮನ್ವಯ ಎನ್ನುವುದು ಅದು ಏನು ಎನ್ನುವುದಕ್ಕಿಂತ ಹೆಚ್ಚಾಗಿ ಏನಲ್ಲ ಎನ್ನುವುದು ಅದರ ಸಂಕೀರ್ಣತೆಯನ್ನು ತೋರುತ್ತದೆ ಎಂದು ಹೇಳುತ್ತಾರೆ. ಸಮನ್ವಯ ಶಿಕ್ಷಣದ ಒಂದು ಸುಸಂಬದ್ಧ ವ್ಯಾಖ್ಯಾನವನ್ನು ನೀಡುವುದಕ್ಕೆ ಪ್ರಯತ್ನಿಸಲಾಗಿದೆಯಾದರೂ ಒಮ್ಮತಕ್ಕೆ ಬರುವುದರಲ್ಲಿ ಇರುವ ತೊಂದರೆಗಳನ್ನು ಶಿಕ್ಷಣ ತಜ್ಞರು ಮತ್ತು ವಿದ್ವಾಂಸರು ತೋರಲು ಪ್ರಯತ್ನಿಸಿದ್ದಾರೆ. ಸಮನ್ವಯ ಶಿಕ್ಷಣದ ಮೂಲದ ಅರ್ಥವೇನಾಗಿತ್ತು ಮತ್ತು ಅದರ ಪ್ರಸ್ತುತ ಅರ್ಥವೇನು ಎಂಬುದರ ನಡುವಿನ ವ್ಯತ್ಯಾಸದಲ್ಲಿಯೇ ಮುಖ್ಯವಾದ ತೊಡಕಿದೆ. ಅದರ ಮೂಲವನ್ನು ಹುಡುಕುತ್ತಾ ಹೊರಟ, ಆರ್ಮ್‌ಸ್ಟ್ರಾಂಗ್, ಆರ್ಮ್‌ಸ್ಟ್ರಾಂಗ್ ಮತ್ತು ಸ್ಪಾಂಡಗೌ (2010) ಅವರು, ಸಮನ್ವಯ ಶಿಕ್ಷಣವು ಮುಖ್ಯವಾಹಿನಿಯಲ್ಲಿ ಸಮನ್ವಯ ಶಿಕ್ಷಣಕ್ಕಿದ್ದ ನಿರ್ಬಂಧಗಳನ್ನು ಪ್ರಶ್ನಿಸುತ್ತಾ ಹುಟ್ಟಿಕೊಂಡುದಾಗಿದೆ ಎಂಬುದನ್ನು ನೆನಪಿಸಿಕೊಳ್ಳುತ್ತಾರೆ. ಒಂದು ಪ್ರಜಾಪ್ರಭುತ್ವವಾದಿ ಮತ್ತು ಸಮನ್ವಯ ಸಮಾಜದ ನಿರ್ಮಾಣದಲ್ಲಿ ಶಾಲೆಗಳ ಪಾತ್ರವನ್ನು ಕಂಡುಕೊಂಡ ಪೋಷಕರು, ಶಿಕ್ಷಕರು ಮತ್ತು ವೈಕಲ್ಯತೆ ಪರ ಕಾರ್ಯಕರ್ತರು ಆಂದೋಲನವನ್ನು ಆರಂಭಿಸಿದರು. ಆದರೆ ವಾಸ್ತವದಲ್ಲಿ, ಅದರ ಅನುಷ್ಠಾನಕ್ಕೆ ಯಾವುದೇ ಸ್ಪಷ್ಟ ನೀತಿಗಳು ಇಲ್ಲದೇ ಹೋದದ್ದು, ಸಮನ್ವಯ ಶಿಕ್ಷಣವು ಕೇವಲ ಒಂದು ಒಳ್ಳೆಯ ಮಾತಷ್ಟೇ ಆಗಿ ಸಮನ್ವಯ ಸಂಕಥನದಲ್ಲಿ ಉಳಿಯಿತು. ಹಾಗಾಗಿ, ಸಮನ್ವಯ ಶಿಕ್ಷಣದ ವಾಸ್ತವದ ಆಚರಣೆಗೂ ಮತ್ತು ಅದರ ವ್ಯಾಖ್ಯಾನಗಳಿಗೂ ಬಹಳ ವ್ಯತ್ಯಾಸವಿದೆ. (ಐನ್‌ಸ್ಕೌವ್, 2006) ಸಮನ್ವಯ ಶಿಕ್ಷಣವು ಯಾರಿಗಾಗಿ ಇದೆಯೋ ಆ ವಿದ್ಯಾರ್ಥಿಗಳ ಆಧಾರದ ಮೇಲೆ ಹೇಳುವುದಾದರೆ ಇದೇ ರೀತಿಯ ಸಮಸ್ಯೆ ಇನ್ನಿತರ ವ್ಯಾಖ್ಯೆಗಳಲ್ಲೂ ಇದೆ. ಅವು, ಒಂದೋ ತುಂಬಾ ಸಂಕುಚಿತ ಅಥವಾ ತುಂಬಾ ವಿಸ್ತೃತ ವ್ಯಾಪ್ತಿ ಉಳ್ಳವು ಮತ್ತು ಕೆಲವೊಮ್ಮೆ ಈ ವ್ಯಾಖ್ಯಾನಗಳು ಅನಿಶ್ಚಿತ ಸ್ವರೂಪದವು.

> ವ್ಯಾಖ್ಯಾನ ವಿವರಣೆಯ ಚರ್ಚೆಗಳ ಹೊರತಾಗಿ ಗ್ರಹಾಂ ಮತ್ತು ಸ್ಲೀ(2007)ರಂತಹ ಲೇಖಕರು ಕೆಲವು ಮೂಲಭೂತ ಪ್ರಶ್ನೆಗಳನ್ನು ಎತ್ತಿದರು. ಶೈಕ್ಷಣಿಕ ಕಾರ್ಯಕರ್ತರು ಮತ್ತು ಸಮನ್ವಯ ಶಿಕ್ಷಣ ಕ್ಷೇತ್ರದಲ್ಲಿ ಕಾರ್ಯ ನಿರ್ವಹಿಸುತ್ತಿರುವವರು ಈ ಸಮನ್ವಯ ಶಿಕ್ಷಣದ ಸಾಧ್ಯತೆಯು ವಾಸ್ತವವಾಗಿ ಹೇಗಿದೆ ಎಂಬ ಪ್ರಶ್ನೆಗಳಿಗೆ ಉತ್ತರಿಸಲು ಪ್ರಯತ್ನಿಸುತ್ತಾರೆ ಎಂದು ಅವರು ಆಶಿಸಿದರು. ಅಸ್ತಿತ್ವದಲ್ಲಿರುವ ಕಾರ್ಯಯೋಜನೆಗಳ ಬಗ್ಗೆ ಆಸ್ಟ್ರೇಲಿಯದಲ್ಲಿ ಪ್ರಬಲ ವಿಮರ್ಶೆಯೆದ್ದಿತು. ಆಗ ಲೇಖಕರು ಈ ಪ್ರಶ್ನೆಗಳನ್ನು ಎತ್ತಿದರು, ಸಮನ್ವಯದ ಬಗ್ಗೆ ಸಂವಾದ ನಡೆಸುವುದು ಎಂದರೆ ಏನು? ಒಳಗೊಳ್ಳುವ ಮನಸ್ಥಿತಿಗೂ ಇದಕ್ಕೂ ಏನು ವ್ಯತ್ಯಾಸ ಮತ್ತು ಒಳಗೊಳ್ಳುವುದನ್ನು ಆಶಿಸುವ ಪದ್ಧತಿಗಳಿಂದ ಯಾರ ಆಶಯಗಳನ್ನು ಪೂರೈಸಲಾಗುತ್ತಿದೆ?

ಈ ಪ್ರಶ್ನೆಗಳ ಬಗ್ಗೆ ಚಿಂತಿಸಿದಾಗ, ಸಮನ್ವಯ ಶಿಕ್ಷಣದ ಆದರ್ಶಮಯ ಮತ್ತು ಪರಿಕಲ್ಪನಾತ್ಮಕ ರಚನೆ ಮತ್ತು ವಾಸ್ತವದಲ್ಲಿ ಇರುವ ವೈರುಧ್ಯಗಳಿಂದಾಗಿ ಉಂಟಾಗುವ ಉದ್ವೇಗವೇ ಅದರ ಹಗುರವಾದ ಅರ್ಥೈಸುವಿಕೆಗೆ ಕಾರಣ ಎನ್ನುವುದು ಸ್ಪಷ್ಟವಾಗುತ್ತದೆ. ಆರ್ಮ್‌ಸ್ಟ್ರಾಂಗ್, ಆರ್ಮ್‌ಸ್ಟ್ರಾಂಗ್ ಮತ್ತು ಸ್ಪಾಂಡಗೌ (2010), ಅವರು ಎತ್ತುವ 'ಸಮನ್ವಯ ಯಾರಿಗಾಗಿ? ಯಾವುದರೊಡನೆ? ಮತ್ತು ಯಾವ ಉದ್ದೇಶಕ್ಕಾಗಿ?' ಎಂಬ ಪ್ರಶ್ನೆಗಳನ್ನು ಉತ್ತರಿಸಿದ ನಂತರ ಸಮನ್ವಯದ ಅಭ್ಯಾಸ ಅಂದರೆ ಏನು ಎಂಬುದನ್ನು ಕೇಳಬೇಕಾಗುತ್ತದೆ. ಏಕೆಂದರೆ ಯಾವುದು ಅಪೇಕ್ಷಣೀಯವೋ (ಅಂದರೆ ಆದರ್ಶಪ್ರಾಯವಾದದ್ದೋ) ಅದು ಯಾವುದನ್ನು ಸಾಧಿಸಲು ಸಾಧ್ಯವೋ (ವಾಸ್ತವದಲ್ಲಿ)ಅದಕ್ಕಿಂತ ಬೇರೆ ಇರಬಹುದು.

**ನೀತಿ ನಿರೂಪಣೆಯಲ್ಲಿ ಸಮನ್ವಯ ಶಿಕ್ಷಣ**

ಈ ವಿಭಜನೆಗಳನ್ನು ಮೀರಲು ಪ್ರಯತ್ನ ಪಡುತ್ತಿರುವ ಸಮಯದಲ್ಲಿ ಈ ವಿಷಯಕ್ಕಿರುವ ಮತ್ತೊಂದು ಆಯಾಮವಾದ ನೀತಿ ನಿರೂಪಣೆಗಳಲ್ಲಿ ಸಮನ್ವಯ ಶಿಕ್ಷಣಕ್ಕೆ ಪ್ರಾತಿನಿಧ್ಯ ನೀಡುವುದು ಸಮಸ್ಯೆಯನ್ನು ಇನ್ನಷ್ಟು ಜಟಿಲಗೊಳಿಸುತ್ತಿದೆ. ಭಾರತೀಯ ಸಂದರ್ಭದಲ್ಲಿ ಈ ಆಯಾಮವು ಹೆಚ್ಚು ಸಮಂಜಸವೆನಿಸುತ್ತದೆ. ತೊಂಬತ್ತರ ದಶಕದಲ್ಲಿ ಭಾರತದಲ್ಲಿ ಸಮನ್ವಯ ಶಿಕ್ಷಣ ಎಂಬ ಪದವು ನೀತಿ ನಿರೂಪಣೆಯಲ್ಲಿ ಮತ್ತು ವಿವಿಧ ಯೋಜನೆಗಳಲ್ಲಿ, ಪಿಐಇಡಿ, ಡಿಪಿಇಡಿ, ಪಿಡಬ್ಲ್ಯೂಡಿ ಮುಂತಾದೆಡೆ ಮತ್ತು ಎಸ್‌ಎಸ್‌ಎ (2000)ನಲ್ಲಿ ಸ್ಥಾನ ಪಡೆದುಕೊಳ್ಳಲು ಪ್ರಾರಂಭಿಸಿತು. 1994ರಲ್ಲಿ ಸ್ಪೇನ್ ದೇಶದ ಸಲಮಾಂಕ ಘೋಷಣೆಗೆ ಭಾರತವು ಸಹಿ ಹಾಕಿದ ನಂತರ ಇದಕ್ಕೆ ಇಂಬು ದೊರೆಯಿತು (ಚೌಧುರಿ 2011). ಆದರೂ ಭಾರತದಲ್ಲಿ ಸಮನ್ವಯ ಶಿಕ್ಷಣವು ಒಂದು ಪರಿಕಲ್ಪನೆಯಾಗಿ ಕಾಣಿಸಿಕೊಂಡದ್ದು ಪಶ್ಚಿಮದಿಂದ ಎರವಲು ಪಡೆದ ವಿಶೇಷವಾಗಿ ಅದರ ನಯವಂತಿಕೆ, ಮಗು ಕೇಂದ್ರಿತ ಮತ್ತು ರಮ್ಯವಾದ ಮೊರೆಯಿಂದಾಗಿ (ಸಿಂಗಾಲ್, 2005; ಶರ್ಮ, 2010; ಆಲೂರ್, 2007). ಸಿಂಗಾಲ್ (2006) ಅವರು ವಾದಿಸುವಂತೆ, ಭಾರತದಲ್ಲಿ ಸಮನ್ವಯ ಶಿಕ್ಷಣವು ಒಂದು ವಿದ್ಯಮಾನವಾಗಿ ಸಾಕಷ್ಟು ಸಕ್ರಿಯವಾಗಿಲ್ಲ. ಅವರೇ, ಮುಂದುವರೆದು ಹಲವಾರು ನೀತಿ ನಿರೂಪಣೆಯ ದಾಖಲೆಗಳಲ್ಲಿ, ಅಷ್ಟೇ ಅಲ್ಲದೆ ಸಮನ್ವಯದ ಬಗೆಗಿನ ಆರಂಭಿಕ ಬರವಣಿಗೆಗಳಲ್ಲಿ ಏಕೀಕರಣ ಮತ್ತು ಸಮನ್ವಯ ಎರಡನ್ನೂ ಒಂದಕ್ಕೊಂದು ಪರ್ಯಾಯವಾಗಿ ಬಳಸಿದ್ದು, ಗೊಂದಲ ಮತ್ತು ತಪ್ಪು ವ್ಯಾಖ್ಯಾನಗಳಿಗೆ ಎಡೆಮಾಡಿಕೊಟ್ಟಿತು ಎನ್ನುತ್ತಾರೆ.

ಇದರ ಜೊತೆಗೆ ಆ ಸಮಯದಲ್ಲಿ ಜಾರಿಗೊಂಡ ಯೋಜನೆಗಳಲ್ಲಿಯೂ ಇಬ್ಬಗೆಯ ನೀತಿಗಳನ್ನು ಅನುಸರಿಸಲಾಯಿತು. ವಿಶೇಷ ಅಗತ್ಯವುಳ್ಳ ಮಕ್ಕಳ ಶಿಕ್ಷಣವು ಸಾಮಾನ್ಯ ಶಾಲೆಗಳಲ್ಲಿಯೇ ಎಂದು ಚಿಂತನೆ ಮಾಡಲಾಯಿತಾದರೂ, ವಿಶೇಷ ಶಾಲೆಗಳನ್ನು ಪ್ರೋತ್ಸಾಹಿಸುವುದನ್ನೂ ಮುಂದುವರೆಸಲಾಯಿತು. ಅಂದರೆ ಸಮನ್ವಯ ಶಿಕ್ಷಣವು ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಹಲವಾರು ಆಯ್ಕೆಗಳಲ್ಲಿ ಒಂದಾಯಿತೇ ಹೊರತು ಶಾಲೆಯ ಪರಿವರ್ತನೆಗೆ ಒಂದು ದಾರಿಯಾಗಲೇ ಇಲ್ಲ (ಅಂಡ್ಲೆ, 2007). ಹಾಗಾಗಿ, ನೀತಿ ನಿರೂಪಣಾ ದಾಖಲೆಗಳು ಸಮನ್ವಯ ಶಿಕ್ಷಣಕ್ಕೆ ಕೇವಲ ಗೊಂದಲಮಯವಾದ ಕಲ್ಪನೆಗಳನ್ನಷ್ಟೇ ನೀಡುತ್ತಿರುವುದರಿಂದ, ಸಾಮಾನ್ಯವಾಗಿ ಮೂಲ ಪ್ರಶ್ನೆಗಳಾದ ಸಮನ್ವಯ ಶಿಕ್ಷಣ ಎಂದರೇನು ಅಥವಾ ಸಮನ್ವಯ ಶಿಕ್ಷಣದ ಅನುಷ್ಠಾನದಲ್ಲಿ ಏನೇನಿರುತ್ತದೆ? ಎಂಬ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳಿಲ್ಲ.

ಈ ವಿಷಯಗಳನ್ನು ಪರಿಶೀಲಿಸಿದಾಗ ಮತ್ತೂ ಹಿರಿದಾದ ಪ್ರಶ್ನೆಯನ್ನೆತ್ತ ಬಹುದು: ಹಾಗಿದ್ದರೆ ಸಮನ್ವಯ ಶಿಕ್ಷಣವನ್ನು ಅರ್ಥಮಾಡಿಕೊಳ್ಳಲು ಕೊಡುಗೆ ನೀಡಬಹುದಾದ ಸೂಕ್ತವಾದ ಜ್ಞಾನದ ಆಕರಗಳು ಯಾವುವು?

**ಪಾಂಡಿತ್ಯವನ್ನು ಸೂಕ್ತ ಸಂದರ್ಭಕ್ಕೆ ಅಳವಡಿಸುವುದು**

ಈ ಲೇಖನದಲ್ಲಿ ಮೊದಲು ಹೇಳಿದಂತೆ ಭಾರತದಲ್ಲಿ ಸಮನ್ವಯ ಶಿಕ್ಷಣವು ಸರಿಯಾದ ವಿಮರ್ಶೆ ಚರ್ಚೆಗಳಿಲ್ಲದೆ ಪಶ್ಚಿಮದಿಂದ

ಎರವಲು ಪಡೆದ ಒಂದು ವಿದ್ಯಮಾನವಷ್ಟೇ ಆಗಿದೆ (ಸಿಂಗಾಲ್, 2006). ಇದರಿಂದಾಗಿ ಸಮನ್ವಯ ಶಿಕ್ಷಣದ ಹುಟ್ಟು, ಉದ್ದೇಶ ಮತ್ತು ಆಚರಣೆ ಮೊದಲಾದ ಕೆಲ ಪ್ರಮುಖ ಅಂಶಗಳು ನಿರ್ಲಕ್ಷ್ಯಕ್ಕೊಳಗಾಗಿ ಕೇವಲ ಚದುರಿದ ಅರ್ಥಗಳಷ್ಟೇ ಹೊರ-ಹೊಮ್ಮಲು ಅನುವು ಮಾಡಿಕೊಟ್ಟು ವಿಭಿನ್ನ ವ್ಯಾಖ್ಯಾನಗಳು ಹುಟ್ಟಿಕೊಳ್ಳುವಂತಾಗಿದೆ.

ನಾವು ಮುಂದುವರಿದಂತೆ,ಈ ಕ್ಷೇತ್ರದಲ್ಲಿ ಯಾವುದೇ ಪಾಂಡಿತ್ಯವು ಅಭಿವೃದ್ಧಿಗೊಳ್ಳುವಾಗ ನಮ್ಮ ವಿಶಿಷ್ಟ ಚಾರಿತ್ರಿಕ, ಆರ್ಥಿಕ ಸಾಮಾಜಿಕ ಮತ್ತು ಸಾಂಸ್ಕೃತಿಕ ವೈವಿಧ್ಯತೆಗಳನ್ನು ಪರಿಗಣಿಸುವುದರೊಂದಿಗೆ ಭಾರತದ ಶೈಕ್ಷಣಿಕ ಕ್ಷೇತ್ರದ ಸಂಕೀರ್ಣತೆಯನ್ನು ಪರಿಗಣಿಸಬೇಕಿದೆ. ಸಾಕಷ್ಟು ವಿದ್ವಾಂಸರು ಈ ನಿಲುವನ್ನು ಒಪ್ಪುತ್ತಾರೆ (ಅಂಡ್ಲೇ, 2007; ರಾವ್, 2001; ರೋಸ್, 2017; ಸಿಂಗಾಲ್, 2006). ಕೆಳಗಿನ ಉದಾಹರಣೆಗಳೊಂದಿಗೆ ನಾನೂ ಈ ವಿಷಯವನ್ನು ಸಾದರ-ಪಡಿಸುತ್ತೇನೆ.

**ಮೂಲವನ್ನು ಹುಡುಕುತ್ತಾ**

ಅಭಿವೃದ್ಧಿ ಹೊಂದಿದ ಜಗತ್ತಿನಲ್ಲಿ ವಿಶೇಷ ಅಗತ್ಯವುಳ್ಳ ಮಕ್ಕಳನ್ನು ಸಾಂಪ್ರದಾಯಿಕವಾಗಿ ವಿಶೇಷ ಶಾಲೆಗಳಿಗೆ ಸೇರಿಸಲಾಗುತ್ತಿತ್ತು ಎಂದು ಪಾಶ್ಚಾತ್ಯ ಜಗತ್ತಿನಲ್ಲಿ ಸಮನ್ವಯದ ಮೂಲವನ್ನು ರಾವ್ (2011) ವಿವರಿಸುತ್ತಾರೆ. ವೈಕಲ್ಯತೆಯ ಸಾಮಾಜಿಕ ಮಾದರಿಯು ವಿಕಸಿತಗೊಳ್ಳುತ್ತಿದ್ದಂತೆ, ಸಮನ್ವಯವನ್ನು ಬೇರ್ಪಡಿಸುವ ತಡೆಗಳನ್ನು ಹಾಗೂ ಸಾಂಸ್ಥಿಕರಣವನ್ನು ತಡೆಯುವ ಹಾದಿಯನ್ನಾಗಿ ಪರಿಗಣಿಸಲಾಯಿತು. ಸಮತೆ ಮತ್ತು ಸಾಮಾಜಿಕ ನ್ಯಾಯಗಳು ಮಾರ್ಗದರ್ಶಿ ಸೂತ್ರಗಳಾದ ಮೇಲೆ ಸಮನ್ವಯವು ಪರಿವರ್ತನೆಯ ಒಂದು ಮುಖ್ಯ ದ್ಯೋತಕವಾಯಿತು. ವಿಶೇಷ ಶಾಲೆಗಳು ಸಾಮಾನ್ಯ ಆಗಿರದಿದ್ದ ಭಾರತದಂತಹ ದೇಶಗಳಲ್ಲಿ-ಯಾದರೋ ಈ ರೀತಿಯ ಸಾಂಸ್ಥಿಕ ವಿಭಜನೆಯನ್ನು ಸಮನ್ವಯ ಶಿಕ್ಷಣದ ಕಾರಣವನ್ನಾಗಿ ಉಪಯೋಗಿಸಲು ಸಾಧ್ಯವಿರಲಿಲ್ಲ.

ಅದೇ ರೀತಿ ಪರ್ಯಾಯ ಶಿಕ್ಷಣ ವ್ಯವಸ್ಥೆಯನ್ನು ಕಟ್ಟಲು ಆರ್ಥಿಕವಾಗಿ ಭಾರತಕ್ಕೆ ಅಸಾಧ್ಯವಾದ್ದರಿಂದ ಸಮನ್ವಯ ಶಿಕ್ಷಣ ಅನಿವಾರ್ಯ ಎಂಬ ವಾದ ಕೂಡ ಸೂಕ್ತವಾದುದಲ್ಲ. ರಾವ್ ಅವರು, ಪಶ್ಚಿಮ ಜಗತ್ತಿನಿಂದ ಅನಾಮತ್ತಾಗಿ ವರ್ಗಾವಣೆಯಾಗಿರುವ ಈ ಸಮನ್ವಯ ಕಲ್ಪನೆಯು ವಿಶೇಷ ಶಿಕ್ಷಣದಂತೆ ಮತ್ತೊಂದು ಧೋರಣೆಯಾಗುವುದರ ಬಗ್ಗೆ ಎಚ್ಚರಿಸುತ್ತಾರೆ. ಪಾಶ್ಚಾತ್ಯ ಜಗತ್ತಿನ ಸಮಾಜದಲ್ಲಿ ಯಾವುದರ ಆಧಾರದ ಮೇಲೆ ಸಮನ್ವಯ ಶಿಕ್ಷಣ ಬೆಳೆಯಿತೋ ಅದೇ ಭಾರತದ ಸಂದರ್ಭದಲ್ಲೂ ಆಧಾರ ಮೂಲವಾಗಲು ಸಾಧ್ಯವಿಲ್ಲ. ಆದ್ದರಿಂದಲೇ ಸಮನ್ವಯ ಶಿಕ್ಷಣವನ್ನು ನಾವು ಒಪ್ಪಿಕೊಂಡರೆ ಅದಕ್ಕೆ ಅಗತ್ಯವಾದ ಕಾರಣಗಳು ನಮ್ಮ ಚಾರಿತ್ರಿಕ ಮತ್ತು ಸಮಾಜೋ-ಆರ್ಥಿಕ ಸಂದರ್ಭಗಳಿಂದಲೇ ಮೂಡಿ ಬರಬೇಕು.

ಅದೇ ರೀತಿ ಸಮನ್ವಯ ಶಿಕ್ಷಣದ ಬಗೆಗಿನ ತಿಳಿವನ್ನು ಬೆಳೆಸಿಕೊಳ್ಳಲು ಭಾರತದಲ್ಲಿ ವಿಶೇಷ ಅಗತ್ಯವುಳ್ಳ ಮಕ್ಕಳ ಪರಿಸ್ಥಿತಿಯನ್ನು ಐತಿಹಾಸಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ಆಯಾಮಗಳಿಂದ ಅರಿತುಕೊಳ್ಳುವುದು ಅತ್ಯಗತ್ಯ. ಸಮನ್ವಯ ಶಿಕ್ಷಣವನ್ನು ಭಾರತದ ಸಾಮರಸ್ಯದ ಅನನ್ಯ ವೈವಿಧ್ಯತೆಗಳಾದ ಜಾತಿ, ಅಂತಸ್ತು ಮತ್ತು ಧಾರ್ಮಿಕ ವ್ಯತ್ಯಾಸಗಳ ಒಂದು ಸಂಕೀರ್ಣವಾದ ಸಂದರ್ಭದೊಳಗೇ ಗ್ರಹಿಸಿಕೊಳ್ಳುವುದು ಮತ್ತು ಅಭ್ಯಸಿಸುವುದು ಅತ್ಯಗತ್ಯ. ಈ ನನ್ನ ವಾದವನ್ನು ವಿವರಿಸಲು ಕೆಲವು ಅಂಶಗಳನ್ನು ಸಾದರಪಡಿಸುತ್ತೇನೆ.

**ಭಾರತದಲ್ಲಿ ವೈಕಲ್ಯತೆ**

ವೈಕಲ್ಯತೆಯ ಬಗ್ಗೆ ಭಾರತದಲ್ಲಿ ಒಂದೇ ರೂಪದ ಅರ್ಥ ವಿವರಣೆ ಇಲ್ಲ ಎಂದು ಘಾಯ್ (2015) ಅವರು ಹೇಳುತ್ತಾರೆ. ಭಾರತೀಯ ಸಂದರ್ಭ ಮತ್ತು ಸಾಂಸ್ಕೃತಿಕ ಹಿನ್ನೆಲೆಗಳು ಪುರಾಣಗಳು ಮತ್ತು ಧಾರ್ಮಿಕ ನಂಬಿಕೆಗಳಲ್ಲಿ ಬೇರೂರಿದ್ದರಿಂದಾಗಿ ಇವು ವೈಕಲ್ಯತೆ ಮತ್ತು ವಿಶೇಷ ಅಗತ್ಯವುಳ್ಳ ಜನರ ಬಗ್ಗೆ ದುಷ್ಟರು, ಪಾಪಾತ್ಮರು ಅಥವಾ ಅತೀಂದ್ರಿಯ ಶಕ್ತಿ ಉಳ್ಳವರು ಎಂಬಂಥ ವಿವಿಧ ಮತ್ತು ಸಂಕೀರ್ಣ ಅರ್ಥಗಳನ್ನು ಹುಟ್ಟಿಸಿವೆ. ಮತ್ತು ಚಾರಿತ್ರಿಕ ಸನ್ನಿವೇಶಗಳ ವ್ಯವಸ್ಥಿತ ಸಂಶೋಧನೆಯ ದೃಷ್ಟಿಕೋನದ ಕೊರತೆಯಿಂದ ಸಮಕಾಲೀನ ಸನ್ನಿವೇಶದಲ್ಲಿ ವಿಶೇಷ ಅಗತ್ಯವುಳ್ಳವರ ಚಿತ್ರವನ್ನು ಕೇವಲ ಋಣಾತ್ಮಕ ವ್ಯಕ್ತಿಗಳನ್ನಾಗಿ ಕಟ್ಟಿಕೊಡಲಾಗಿದೆ. ಏಕೆಂದರೆ ಪ್ರಬಲವಾದ ವೈದ್ಯಕೀಯ ಮಾದರಿಗಳು ವಿಶೇಷ ಅಗತ್ಯವುಳ್ಳವರಲ್ಲಿ ಇಲ್ಲದಿರುವ ಅಥವಾ ಸರಿಯಿಲ್ಲದ ಲಕ್ಷಣಗಳ ಬಗ್ಗೆ ಮಾತ್ರ ಗಮನ ನೀಡುತ್ತವೆ ಎಂದೂ ಅವರು ಹೇಳುತ್ತಾರೆ (ಘಾಯ್, 2001). ಅವರು ವಿಶೇಷ ಅಗತ್ಯವುಳ್ಳವರನ್ನು ಸಮಾಜವು ಅಂಚಿಗೆ ತಳ್ಳುರುವುದನ್ನು ಟೀಕಿಸುತ್ತಾ:

"ಅಸಹಾಯಕ ಸಿನಿಕತನ, ರಾಜಕೀಯ ಜಡತ್ವ ಮತ್ತು ಸಾಮಾಜಿಕ ಹೊಸ ಅನ್ವೇಷಣೆಗಳ ದಾರಿದ್ರ್ಯಗಳು ಅವರಿಗೆ ಯಾವುದೇ ದೂರಗಾಮಿ ಪರಿಹಾರವನ್ನು ಕೊಡದೆ ಅವರ ಜೀವನವು ಒಂದು ವಿಷವರ್ತುಲದಲ್ಲಿ ಉಳಿಯುವಂತೆ ಮಾಡಿವೆ" ಎನ್ನುತ್ತಾರೆ.

ಒಂದು ಮುಖ್ಯ ವಿಷಯವೇನೆಂದರೆ ಭಾರತದ ಸಂದರ್ಭದಲ್ಲಿ ವೈಕಲ್ಯತೆಯು ಬಡತನದೊಂದಿಗೆ ತಳುಕು ಹಾಕಿಕೊಂಡಿರುವುದನ್ನು ಕಡೆಗಣಿಸಲಾಗದು. ಭಾರತದಂತಹ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಬಡತನವು ಒಂದು ಬಲು ದೊಡ್ಡ ದೌರ್ಬಲ್ಯವಾಗಿದ್ದು ಅದು ವಿಶೇಷ ಅಗತ್ಯವುಳ್ಳವರಿಗೆ ಮತ್ತು ಅವರ ಕುಟುಂಬಗಳಿಗೆ ರಚನಾತ್ಮಕ ಮತ್ತು ಭಾವುಕ ಅಡೆತಡೆಗಳನ್ನು ಸೃಷ್ಟಿಸಿ ಅವರನ್ನು ದುರ್ಬಲರನ್ನಾಗಿಸಿದೆ ಮತ್ತು ಅವಹೇಳನಕ್ಕೆ ಗುರಿಮಾಡಿದೆ. (ಘಾಯ್, 2001)ಬಡತನ, ಲಿಂಗತ್ವ, ಜಾತಿ ಹಾಗೂ ಗ್ರಾಮ ನಗರಗಳ ಮಧ್ಯದ ಕಂದಕಗಳು ಉಂಟುಮಾಡುವ ಭೇದಭಾವಗಳು ವಿಶೇಷ ಅಗತ್ಯವುಳ್ಳವರಿಗೆ ಅಪವಾದ ಮತ್ತು ಕಳಂಕದ ಹಣೆಪಟ್ಟಿಯನ್ನು ಹಚ್ಚಿವೆ. ಇದರಿಂದಾಗಿ ದೇಶದಲ್ಲಿ ವೈಕಲ್ಯತೆಗಳಿಂದ ಬಳಲುತ್ತಿರುವವರ ಸರಿಯಾದ ಅಂದಾಜನ್ನು ಮಾಡುವ ಪ್ರಕ್ರಿಯೆಯೂ ಹೆಚ್ಚು ಸಂಕೀರ್ಣ-ಗೊಳ್ಳುತ್ತಿದೆ. ಇದರ ಜೊತೆಗೆ ಬೇರೆ ಬೇರೆ ಬಗೆಯ ವೈಕಲ್ಯತೆಗಳನ್ನು ಗುರುತಿಸಲು ಹಲವಾರು ವಿಂಗಡಣೆಗಳು, ಅನಿಯಂತ್ರಿತ ಪಾರಿಭಾಷಿಕ ಪದಗಳನ್ನು ಉಪಯೋಗಿಸಿರುವುದು ಕೂಡ ಗೊಂದಲವನ್ನು ಹೆಚ್ಚಿಸಿದೆ. ಭಾರತದಲ್ಲಿ ವಿಶೇಷ ಅಗತ್ಯವುಳ್ಳ ಮಕ್ಕಳ ಶಿಕ್ಷಣದ ಬಗ್ಗೆ ಯಾವುದೇ ವಿಶ್ವಾಸಾರ್ಹ ಚರ್ಚೆಯಲ್ಲೂ ಈ ಎಲ್ಲಾ ಅಂಶಗಳನ್ನು ಪ್ರಮುಖವಾಗಿ ಪರಿಗಣಿಸಬೇಕಾಗುತ್ತದೆ.

**ಶಿಕ್ಷಣದ ಕಾರ್ಯಕ್ಷೇತ್ರ**

ಭಾರತದ ಶಿಕ್ಷಣ ಪದ್ಧತಿಯು ವಿಸ್ತಾರ ಮತ್ತು ವಿವಿಧತೆಯಲ್ಲಿ ಹಲವು ಸ್ತರಗಳನ್ನು ಒಳಗೊಂಡಿದೆ. ಜಗತ್ತಿನಲ್ಲೇ ಅತಿ ಹೆಚ್ಚು ಶಾಲಾ ವಯಸ್ಸಿನ ಮಕ್ಕಳು ಇರುವ ಭಾರತದಲ್ಲಿ, ಪ್ರಾಥಮಿಕ ಶಿಕ್ಷಣದ ಪ್ರಮಾಣವು ಅತೀ ದೊಡ್ಡದಾಗಿದ್ದು ಪ್ರಪಂಚದಾದ್ಯಂತ ಇರುವ

ಯಾವುದೇ ಯೋಜನಕಾರರು ಹಾಗೂ ನೀತಿ ನಿರೂಪಕರಿಗೆ ಕಲ್ಪಿಸಿಕೊಳ್ಳಲೂ ಅಸಂಭವವಾಗಿದೆ (ಆಟ್ಲ್, 2010 ಸಿಂಗಾಲ್ ಅವರು ಉದ್ಧರಿಸಿರುವಂತೆ, 2014). ಇತ್ತೀಚಿನ ವರ್ಷಗಳಲ್ಲಿ ಅನೇಕ ಮುಖ್ಯ ನೀತಿನಿಯಾಮಕಗಳು ಮತ್ತು ಕಾನೂನಿನ (ಎಸ್‌ಎಸ್‌ಎ, 2001 ಮತ್ತು ಆರ್‌ಟಿಇ 2009 ಮುಂತಾದವು)ನಿರ್ದೇಶದನದಿಂದ ಉತ್ತೇಜನಗೊಂಡು ದೇಶದ ಸುಮಾರು ಶೇ.98ರಷ್ಟು ಮಕ್ಕಳನ್ನು ಶಾಲೆಗೆ ಸೇರಿಸಲು ಸಾಧ್ಯವಾಗಿರುವುದು ಭಾರತದ ಬಲುದೊಡ್ಡ ಸಾಧನೆ (ಯುನಿಸೆಫ್, 2015). ಆದರೂ ಮಕ್ಕಳನ್ನು ಶಾಲೆಯಲ್ಲಿ ಉಳಿಸಿಕೊಳ್ಳುವುದರಲ್ಲಿ ಇರುವ ಸಮಸ್ಯೆಗಳು, ಅಗತ್ಯ ಸಂಪನ್ಮೂಲಗಳ ವಿತರಣೆ ಮತ್ತು ವಿಂಗಡಣೆ, ಶಿಕ್ಷಕ ತರಬೇತಿ ಮತ್ತು ಅತೀ ಮುಖ್ಯವಾಗಿ ಶಿಕ್ಷಣದ ಗುಣಮಟ್ಟ ಇವುಗಳು ಇಂದಿಗೂ ಚಿಂತೆಯ ವಿಷಯಗಳಾಗಿವೆ. ಜಾತಿ ಮತ್ತು ಲಿಂಗ ಇವು ಮಕ್ಕಳು ಶಿಕ್ಷಣದಿಂದ ಹೊರಗುಳಿಯುವಲ್ಲಿ ಮುಖ್ಯ ಆಯಾಮಗಳಾಗಿವೆ. ಅದರಲ್ಲೂ ಕೆಳ ಜಾತಿಯ ಮಕ್ಕಳು ಮತ್ತು ಹೆಣ್ಣುಮಕ್ಕಳು ಶಾಲೆಯಿಂದ ಹೊರಬೀಳುವ ಹೆಚ್ಚಿನ ಅಪಾಯವನ್ನು ಎದುರಿಸುತ್ತಿದ್ದಾರೆ (ಸಿಂಗಾಲ್, 2014). ಮಕ್ಕಳನ್ನು ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯೊಳಗೆ ಉಳಿಸಿಕೊಳ್ಳುವ ಹೋರಾಟಕ್ಕೆ ಕಡಿಮೆ ಶುಲ್ಕದ, ಕಳಪೆ ಗುಣಮಟ್ಟದ, ಹೆಚ್ಚುತ್ತಿರುವ ಖಾಸಗಿ ಶಾಲೆಗಳ ಜನಪ್ರಿಯತೆಯು ಭಾರತೀಯ ಶಿಕ್ಷಣ ಪದ್ಧತಿಗೆ ಎದುರಾಗಿರುವುದು ಮತ್ತೊಂದು ಸವಾಲಾಗಿದೆ. ವಿಶೇಷ ಅಗತ್ಯವುಳ್ಳ ಮಕ್ಕಳು ಶಾಲೆಗೆ ಹೋಗುತ್ತಿರುವುದರ ಬಗ್ಗೆ ದೊರೆತಿರುವ ದತ್ತಾಂಶವು ದೋಷಪೂರಿತವೂ ವಿರೋಧಾಭಾಸದಿಂದ ಕೂಡಿರುವುದೂ ಆಗಿದೆ. ಇತ್ತೀಚಿನ ಯುನೆಸ್ಕೋ ಮತ್ತು ಟಿಸ್ (2019)ನ ಒಂದು ವರದಿಯಂತೆ 19 ವರ್ಷಗಳಿಗಿಂತ ಕಿರಿಯ ವಯಸ್ಸಿನ ಸುಮಾರು 78 ಲಕ್ಷ ವಿಶೇಷ ಅಗತ್ಯವುಳ್ಳ ಮಕ್ಕಳು ಭಾರತದಲ್ಲಿದ್ದಾರೆ. ಅವರಲ್ಲಿ, 5 ವರ್ಷದ ಮಕ್ಕಳ ಗುಂಪಿನ ನಾಲ್ಕನೇ ಮೂರರಷ್ಟು ಮತ್ತು 5–19 ವರ್ಷದೊಳಗಿನ ನಾಲ್ಕನೇ ಒಂದರಷ್ಟು ಮಕ್ಕಳು ಯಾವುದೇ ಶಿಕ್ಷಣ ಸಂಸ್ಥೆಗೆ ಹೋಗುವುದಿಲ್ಲ. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳಂತಹ ಇತರ ಅನನುಕೂಲಿತ ಸಮಾಜದ ವರ್ಗಗಳಿಗಿಂತಲೂ 5 ಪಟ್ಟು ಹೆಚ್ಚಿನ ವಿಶೇಷ ಅಗತ್ಯವುಳ್ಳ ಮಕ್ಕಳು ಶಾಲೆಯಿಂದ ಹೊರಬೀಳುವ ಸಾಧ್ಯತೆಯಿದೆ. (ಸಿಂಗಾಲ್, 2014) ಈ ಚಿತ್ರಣದಲ್ಲಿ ಶಿಕ್ಷಣ ವ್ಯವಸ್ಥೆಯೊಳಗಿನ ವ್ಯವಸ್ಥಿತ ಸವಾಲುಗಳನ್ನು ಅಥವಾ ಸಮನ್ವಯ ಶಿಕ್ಷಣವನ್ನು ಕೇವಲ ವಿಶೇಷ ಅಗತ್ಯವುಳ್ಳ ಮಕ್ಕಳ ದೃಷ್ಟಿಯಿಂದ ಮಾತ್ರ ಗಮನಿಸುವುದು ವಿಫಲ ಯತ್ನಗಳಾಗುತ್ತವೆ. ಈ ದೂರದೃಷ್ಟಿರಹಿತ ಚಿಂತನಧಾರೆಯಿಂದ ಎಲ್ಲರಿಗೂ ಶಿಕ್ಷಣ ನೀಡುವುದಾಗಲೀ ಇಲ್ಲವೇ ವಿಶೇಷ ಅಗತ್ಯವುಳ್ಳ ಮಕ್ಕಳ ಶಿಕ್ಷಣವನ್ನು ಅರ್ಥಪೂರ್ಣ ಮತ್ತು ಸಬಲಗೊಳಿಸುವು-ದಾಗಲೀ ಸಾಧ್ಯವಿಲ್ಲ. ಈ ಎಲ್ಲ ಅಂಶಗಳನ್ನೂ ಗುರುತಿಸಿ-ಕೊಳ್ಳುವುದು ದೇಶದಲ್ಲಿ ಯಾವುದೇ ಬಗೆಯ ಸಮನ್ವಯ ಶಿಕ್ಷಣಕ್ಕೆ ಅತೀ ಪ್ರಮುಖವಾದುದು.

### ಸಮನ್ವಯ ಶಿಕ್ಷಣದಲ್ಲಿ ಜ್ಞಾನಭಂಡಾರವನ್ನು ಕಟ್ಟುವುದು

ನನ್ನ ನಿವೇದನೆಯೇನೆಂದರೆ, ಭಾರತದಲ್ಲಿ ಕಳಂಕ ಮತ್ತು ಬಡತನದ ಕಾರಣದಿಂದ ಬಹತೇಕರು ತೀವ್ರ ಅಂಚಿಗೆ ದೂಡಲ್ಪಟ್ಟಿದ್ದಾರೆ, ಇದನ್ನು ಎದುರಿಸುತ್ತಿರುವ ಹೆಚ್ಚಿನವರು ವೈಕಲ್ಯವುಳ್ಳವರು. ನಾವು ಭಾರತದ ಶಿಕ್ಷಣ ವ್ಯವಸ್ಥೆಯಲ್ಲಿರುವ ವೈವಿಧ್ಯ ಮತ್ತು ಸಂಕೀರ್ಣ ಲಕ್ಷಣಗಳೊಂದಿಗೆ ಸಮನ್ವಯ ಶಿಕ್ಷಣದ ಚೌಕಟ್ಟನ್ನು ಕಟ್ಟಬೇಕಾಗಿದೆ. ಮುಂದುವರೆದು, ಸಂಶೋಧಕರು ಮತ್ತು ವೃತ್ತಿಪರರು ಇಬ್ಬರೂ ಒಟ್ಟಾಗಿ ಸಹಭಾಗಿತ್ವದಲ್ಲಿ ಸಮನ್ವಯ ಅಭ್ಯಾಸಗಳ ನಿಜ ಜೀವನದ ಅನುಭವಗಳನ್ನು ಅದರಲ್ಲಿ ತೊಡಗಿಕೊಂಡವರಿಂದ ಪಡೆದು ತಳಮಟ್ಟದಿಂದ ಬೆಳೆಸಿದಾಗ ಮಾತ್ರ ಅಂತಹ ಪಾಂಡಿತ್ಯವನ್ನು ಕಟ್ಟಲು ಸಾಧ್ಯ. ಯಾರು ಮುಖ್ಯರೋ ಅವರ ಅಭಿಪ್ರಾಯಗಳನ್ನೂ ಪಡೆದುಕೊಂಡು ರೂಪಿಸಲಾದ ಸಮನ್ವಯ ಶಿಕ್ಷಣದ ಈ ಜ್ಞಾನವನ್ನು ಮುಂದೆ ವಿವಿಧ ಹಂತಗಳಲ್ಲಿ ನೀತಿನಿರೂಪಕರು, ಅಧಿಕಾರಿ ವರ್ಗ, ಪೋಷಕರು ಮತ್ತು ಶಿಕ್ಷಕರಿಗೆ ಹಂಚಿದರೆ ಒಂದು ಸಾಮಾನ್ಯ ಅರ್ಥ ಗ್ರಹಿಕೆಯನ್ನು ಬೆಳೆಸಬಹುದು. ವಿಶೇಷವಾಗಿ, ಅಂತಹ ಅಧ್ಯಯನಗಳು ಸೈದ್ಧಾಂತಿಕ ವರ್ಗಾವಣೆ ಮತ್ತು ವರ್ತನೆಗಳಲ್ಲಿ ಬದಲಾವಣೆಗಳನ್ನು ತಂದು ಶಾಲೆಗಳನ್ನು ಸಮನ್ವಯತೆಯ ಅಳವಡಿಕೆಗೆ ಸಶಕ್ತಗೊಳಿಸುತ್ತವೆ. ಮತ್ತು ಹೊರಗಿಡುವಂತಹ ಕಲಿಕಾ ತಡೆಗಳನ್ನು ಹೇಗೆ ತೆರವುಗೊಳಿಸುವುದು, ಶಿಕ್ಷಕರು ಮತ್ತಿತರ ಭಾಗೀದಾರರು ವಿಭಿನ್ನ ಅಗತ್ಯಗಳ ಮಕ್ಕಳೊಡನೆ ಹೇಗೆ ನಿರಂತರವಾಗಿ ಕೆಲಸ ಮಾಡಲು ತಯಾರಾಗುವುದು, ಎಲ್ಲ ಭಾಗೀದಾರರೂ ಪರಸ್ಪರ ಪೂರಕವಾಗಿ ಕೆಲಸಮಾಡುವಂತೆ ಹೇಗೆ ರೂಪಿಸುವುದು, ಆಡಳಿತ, ಆರ್ಥಿಕ ಹಾಗೂ ಪಠ್ಯಕ್ರಮದ ಬಿಗಿ ನಿಲುವುಗಳು ಮತ್ತು ಮೌಲ್ಯಮಾಪನಗಳ ವಿಷಯದಲ್ಲಿನ ಸವಾಲುಗಳನ್ನು ಹೇಗೆ ನಿರ್ವಹಿಸುವುದು ಎಂಬುದನ್ನೂ ಪರಿಗಣಿಸುತ್ತವೆ. (ಮದನ್, 2018).

ಸಮನ್ವಯ ಶಿಕ್ಷಣದಲ್ಲಿನ ಉತ್ತಮ ಪದ್ಧತಿಗಳು ಹೇಗೆ ಎಲ್ಲ ಸವಾಲುಗಳನ್ನೂ ಮೀರಿ ಸಮನ್ವಯ ಶಿಕ್ಷಣದ ಧ್ಯೇಯಗಳನ್ನು ಸಾಧಿಸಲು ನೆರವಾಗುತ್ತವೆ ಎನ್ನುವುದಕ್ಕೆ ನಾವು ಸಾಕಷ್ಟು ಉದಾಹರಣೆಗಳನ್ನು ಕಾಣುವವರೆಗೂ ಮಕ್ಕಳ ಮರ್ಮಭೇದಕ ಪ್ರಶ್ನೆಗಳಿಗೆ ಸಮಂಜಸ ಸಮಾಧಾನಗಳನ್ನು ಕೊಡುವ ಸವಾಲು ಇದ್ದೇ ಇರುತ್ತದೆ. ಇದೇ ಸಮಯದಲ್ಲಿ, ಅದರ ಸಾಮಾಜಿಕ, ಸಾಂಸ್ಕೃತಿಕ ಸಂದರ್ಭದಲ್ಲಿ ಬೇರೂರಿದ, ನಿತ್ಯದ ಅಭ್ಯಾಸದಿಂದ ಶ್ರೀಮಂತಗೊಂಡು ಅದು ಸಾಕಾರಗೊಳ್ಳಲು ಸುಲಭಗೊಳಿಸು-ವಂತಹ ಸಮನ್ವಯ ಶಿಕ್ಷಣದ ಬಗೆಗೊಳಿಸುವಂತಹ ಒಂದು ಒಮ್ಮತದ ಅರ್ಥೈಸುವಿಕೆಯನ್ನು ರೂಪಿಸಲು ಸಂಶೋಧಕರು, ಶಿಕ್ಷಕರು, ಆಡಳಿತಗಾರರು, ನೀತಿ ನಿರೂಪಕರು ಮತ್ತು ಶಿಕ್ಷಣ ತಜ್ಞರು ಎಲ್ಲರೂ ಕೈಜೋಡಿಸಬೇಕಾಗಿದೆ.

***References***

Ainscow, M, Booth, T & Dyson, A. (2006). *Improving Schools, Developing Inclusion*. London: Routledge.

Alur, M. (2007). *The Lethargy of a Nation: Inclusive Education in India*, in L. Barton and F. Armstrong, (eds.). *Policy, experience and change: Cross-cultural reflections on inclusive education*, pp. 91-106. Dordrchet: Springer.

Armstrong, A.C., Armstrong, D. & Spandagou, I. (2010). *Inclusive Education: International Policy and Perspective*. London: Sage.

Ghai, A. (2015). *Rethinking Disability in India*. London: Routledge.

Ghai, A. (2001). *Marginalization and disability: Experiences from the Third World*, in M. Priestley (Ed.). *Disability and the Life Course: Global Perspectives*. Cambridge University Press.

Graham, L. J., and Slee, R. (2008). *An Illusory Interiority: Interrogating the Discourses of Inclusion. Educational Philosophy and Theory*, Vol.40, No. 2.

Lindsay, K. G. (2007). *Inclusive Education in India: Interpretation, implementation and issues. Create Pathways to Access*, 15. University of Sussex.

Madan, A. (2018). *Inclusive Education in India: Concept, Practice and the Way Forward*, in A. Ghai, (Ed.). *Disability in South Asia: Knowledge and experience*. London: Sage.

Rao, S. (2001) *'A Little Inconvenience': Perspectives of Bengali Families of Children with Disabilities on Labelling and Inclusion, Disability & Society*, 16:4, pp. 531-548.

Singal, N. (2014). *Entry, Engagement and Empowerment: Dilemmas for Inclusive Education in an Indian Context*, in L. Florian (Ed.). *The Sage Handbook of Special Education*, Vol 1. (pp.203-216). London: Sage.

Singal, N. (2006). *Inclusive Education in India: International Concept, National Interpretation. International Journal of Disability, Development and Education*, Vol. 53, No. 3, pp. 351–369.

Singal, N. (2005). *Mapping the Field of Inclusive Education: A Review of the Indian Literature. International Journal of Inclusive Education*, 9:4, 331-350, DOI: 10.1080/13603110500138277

UNESCO (2019). *N for Nose: State of the Education Report India: Children with Disabilities*. New Delhi: UNESCO.

UNICEF (2015). Retrieved from: https://www.oxfamindia.org/education/Still-too-many-children-out-of-school.



**ಡಾ. ಅಂಕುರ್ ಮದನ್** ಅವರು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಮಕ್ಕಳ ಅಭಿವೃದ್ಧಿ ಮತ್ತು ಕಲಿಕೆ ಹಾಗೂ ಸಮನ್ವಯ ಶಿಕ್ಷಣದ ಕೋರ್ಸುಗಳನ್ನು ಬೋಧಿಸುತ್ತಾರೆ. ಅವರನ್ನು ankur.madan@azimpremjifoundation.org ನಲ್ಲಿ ಸಂಪರ್ಕಿಸಬಹುದು.

ಅನುವಾದ: **ಜನಾರ್ಧನ್** । ಪರಿಶೀಲನೆ: **ನಾಗಮಣಿ ಎಸ್ ಎನ್**

# ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಕಲಿಕೆಯ ಅವಕಾಶಗಳನ್ನು ಸೃಷ್ಟಿಸುವುದು

ಅನುಪಮಾ ರೈ

ನೀವು ವಿಶೇಷ ಅಗತ್ಯವುಳ್ಳ ಮಗುವಿನ ಪೋಷಕರಾಗಿದ್ದರೆ ಸುರಕ್ಷಿತ ಮತ್ತು ಕೈಗೆಟಕುವ ಕಲಿಕಾ ಅವಕಾಶಗಳಿಗಾಗಿ ಹುಡುಕಾಡುವುದು ನಿಮಗೆ ಒಂದು ಎದೆಗುಂದಿಸುವ ಕಾರ್ಯ ಅನ್ನಿಸೀತು. ನಾನು ನನ್ನ ಮಗನಿಗಾಗಿ ತೆಗೆದುಕೊಂಡ ಕೆಲವು ಹಂತಗಳ ರೂಪರೇಖೆಯನ್ನು ಈ ಲೇಖನದಲ್ಲಿ ನೀಡುತ್ತೇನೆ.

ವಿಶೇಷ ಅಗತ್ಯವುಳ್ಳವರಿಗೆ ಉದ್ಯೋಗ ಉತ್ತೇಜನಕ್ಕಾಗಿ ಇರುವ ರಾಷ್ಟ್ರೀಯ ಕೇಂದ್ರ (National Centre for Promotion of Employment for Disabled People-NCPEDP) ನಡೆಸಿದ ಸಮೀಕ್ಷೆಯೊಂದರ ಪ್ರಕಾರ ಭಾರತದಲ್ಲಿನ ವಿಶೇಷ ಅಗತ್ಯವುಳ್ಳವರ (PwDs) ಪೈಕಿ ಕೇವಲ ಶೇಕಡಾ 1.2ರಷ್ಟು ಮಂದಿ ಮಾತ್ರ ವಿವಿಧ ಬಗೆಯ ಶಿಕ್ಷಣ ಪಡೆಯುತ್ತಿದ್ದಾರೆ. ಅಖಿಲ ಭಾರತ ಶಾಲಾ ಮಟ್ಟದಲ್ಲಿ ಎನ್‌ಸಿಪಿಇಡಿಪಿ ಸಮೀಕ್ಷೆಗೆ ಒಳಗಾದ 89 ಶಾಲೆಗಳ ಪೈಕಿ 34 ಶಾಲೆಗಳಲ್ಲಿ ಒಬ್ಬನೇ/ಳೇ ಒಬ್ಬ ವಿಶೇಷ ಅಗತ್ಯವುಳ್ಳ ವಿದ್ಯಾರ್ಥಿ ಕಾಣಿಸಲಿಲ್ಲ. ದುರದೃಷ್ಟವಶಾತ್, ಇವುಗಳ ಪೈಕಿ 18 ಶಾಲೆಗಳು ಇಂತಹ ಮಕ್ಕಳನ್ನು ದಾಖಲಿಸುವುದರ ವಿರುದ್ಧದ ನೀತಿಯನ್ನೇ ಹೊಂದಿವೆ. (ಸಖುಜಾ, 2004)

ಮುಖ್ಯವಾಗಿ ದೃಷ್ಟಿ, ಮಾತು, ಭಾಷೆಯಲ್ಲಿ ಕಲಿಕಾ ತೊಂದರೆಗಳು ಶ್ರವಣ ದೋಷ, ಮಾಂಸಖಂಡ ಅಸ್ಥಿವ್ಯವಸ್ಥೆ ಅಥವಾ ನರವ್ಯೂಹ ವ್ಯವಸ್ಥೆಯಲ್ಲಿ ನೋವು ಅಥವಾ ಇವೆರಡೂ ತೊಂದರೆಗಳು, ಕಲಿಕಾ ನ್ಯೂನತೆಗಳು, ಸ್ವಲೀನತೆಯ ಸಮಸ್ಯೆ (Autism spectrum disorders), ಮಾನಸಿಕ ಸಮಸ್ಯೆಗಳು, ತೀವ್ರ ನರದೌರ್ಬಲ್ಯಗಳಿಂದ ಉಂಟಾಗುವ ವೈಕಲ್ಯ, ಬಹು ವೈಕಲ್ಯಗಳು ಅಥವಾ ಕೇಂದ್ರ ಸರ್ಕಾರದ ಅಧಿಸೂಚನೆಯಲ್ಲಿ ಹೇಳಲಾದ ಇತರ ವರ್ಗಕ್ಕೆ ಸೇರಿದ ವೈಕಲ್ಯಗಳು ಕಲಿಕೆಗೆ ತೊಡಕು ಉಂಟು ಮಾಡುವ ವೈಕಲ್ಯಗಳಾಗಿವೆ.

“ಭಾರತೀಯ ಶಿಕ್ಷಣ ವ್ಯವಸ್ಥೆಯಲ್ಲಿ, ಶಿಕ್ಷಣಶಾಸ್ತ್ರವು ಹೆಚ್ಚಾಗಿ ದೃಶ್ಯಕ್ಕಾಗಿ ಪಠ್ಯಪುಸ್ತಕಗಳನ್ನು ಮತ್ತು ಕರಿಹಲಗೆಗಳನ್ನು ಅವಲಂಬಿಸಿದೆ. ಇದು ಶ್ರವಣದೋಷ ಅಥವಾ ದೃಷ್ಟಿದೋಷ ಇರುವ ಮಕ್ಕಳಿಗೆ ಇನ್ನಿಲ್ಲದ ಸಮಸ್ಯೆಗಳನ್ನು ಉಂಟುಮಾಡುತ್ತದೆ. ಅಂತಹ ಮಕ್ಕಳಿಗೆ ನಾಟಕ, ಸಂಗೀತ, ಚಿತ್ರ ರಚನೆ, ದೃಶ್ಯ-ಶ್ರವಣ ಸಾಧನಗಳ ಬಳಕೆಯನ್ನು ಒಳಗೊಂಡ ಚಟುವಟಿಕೆಗಳು ಅತ್ಯಗತ್ಯ. ಉದಾಹರಣೆಗೆ ಮರಳುಕಾಗದದ ಕತ್ತರಿಸಿದ ತುಂಡುಗಳ ಮೂಲಕ ವರ್ಣಮಾಲೆಯ ಕಲಿಕೆ, ಅಕ್ಷರಗಳ ಗುರುತು ಹಿಡಿಯುವುದು, ದೇಹದ ಚಲನೆ (ನೃತ್ಯದಲ್ಲಿ ಇರುವಂತೆ), ಧ್ವನಿಗಳು ಇತ್ಯಾದಿ ಹೆಚ್ಚು ಸೂಕ್ತವಾದವು. ಭೂಗೋಳ ಶಾಸ್ತ್ರದಲ್ಲಿ ಪರಿಭ್ರಮಣ ಮತ್ತು ಕಕ್ಷೆಯ ಕ್ರಮಣ ಇರುವಂತೆ ಪರಿಕಲ್ಪನೆಗಳನ್ನು ತಿಳಿಸುವ ಚಟುವಟಿಕೆಗಳು, ಕರಕುಶಲ ಚಟುವಟಿಕೆಗಳ ಮೂಲಕ, ಇಲ್ಲವೇ ಪಾತ್ರಾಭಿನಯದ ಮೂಲಕ ವಿದ್ಯಾರ್ಥಿಗಳು ಗ್ರಹಿಸಿದ್ದಾರೆಯೇ ಎನ್ನುವುದನ್ನು ಖಾತರಿಪಡಿಸಬಹುದು. ಇಂತಹ ಬಹು-ಇಂದ್ರಿಯ ಬೋಧನಾ ವಿಧಾನಗಳು ಒಂದಕ್ಕಿಂತ ಹೆಚ್ಚು ಇಂದ್ರಿಯಗಳ ಮೂಲಕ ಕಲಿಯಲು ಮಗುವಿಗೆ ಸಹಾಯ ಮಾಡುತ್ತದೆ”.

ಹೀಗಿದ್ದರೂ ವಿಶೇಷ ಅಗತ್ಯವುಳ್ಳ ಮಗು ದೃಷ್ಟಿ ಅಥವಾ ಶ್ರವಣ ಅಥವಾ ಈ ಎರಡಕ್ಕೂ ಸಂಬಂಧಿಸಿದ ಸಮಸ್ಯೆಗಳನ್ನು ಎದುರಿಸಬಹುದು. ಮಗುವಿನ ದೃಶ್ಯ ಪ್ರಕ್ರಿಯೆಯ ಮೇಲೆ ದುಷ್ಪರಿಣಾಮ ಬೀರಬಹುದು. ಹುಡುಕಾಟ ಮತ್ತು ದಿಕ್ಕು ತಿಳಿಯುವಲ್ಲಿ ಕಷ್ಟ ಆಗಬಹುದು. ಇದಕ್ಕೆ ಉತ್ತರ ಎಂದರೆ ಎರಡು ಅಥವಾ ಅದಕ್ಕಿಂತ ಹೆಚ್ಚಿನ ಇಂದ್ರಿಯಗಳನ್ನು ಒಟ್ಟಿಗೆ ಸೇರಿಸಿ ಬೋಧನೆಯಲ್ಲಿ ಬಳಸುವುದೇ ಆಗಿದೆ. ವರ್ಣಮಾಲೆ ರಚನೆಯ ಕಲಿಕಾ ಸಂದರ್ಭದಲ್ಲಿ ಮುಖ್ಯವಾಗಿ ಚಲನಾತ್ಮಕ (Kinetic) ಮತ್ತು ಸ್ಪರ್ಶಜ್ಞಾನ (Tactile) ಇವೆರಡನ್ನೂ ಬಳಸುವ ಮೂಲಕ ಸಮಸ್ಯೆಗೆ ಉತ್ತರ ಕಂಡುಕೊಳ್ಳಬಹುದು. ಉದಾಹರಣೆಗೆ, ಶೇವಿಂಗ್ ಫೋಮ್ ಅನ್ನು ಬಳಸಿ ತಟ್ಟೆಯಲ್ಲಿ ಅಕ್ಷರ ಬರೆಯಲು ಮಗುವನ್ನು ಪ್ರೋತ್ಸಾಹಿಸುವುದು. ಇದು ಮಗುವಿನ ಮಿದುಳಲ್ಲಿ ದೃಶ್ಯ ಮತ್ತು ಶ್ರವಣಕ್ಕೆ ಸಂಬಂಧಿಸಿದ ಸ್ಪರ್ಶ ಮತ್ತು ಚಲನೆಯ ನೆನಪುಗಳನ್ನು ಅಚ್ಚೊತ್ತಬಹುದು.

ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಹೇಳಿಕೊಡಬೇಕಿದ್ದರೆ ಪ್ರತಿಯೊಂದೂ ಸ್ಪರ್ಶಿಸುವಂಥದ್ದೇ ಆಗಿರಬೇಕಾಗುತ್ತದೆ: ಒಬ್ಬ ಅನುಭವಿ ವಿಶೇಷ ಶಿಕ್ಷಕರ ಪ್ರಕಾರ ‘ಮೊದಲು ವಸ್ತು, ಅನಂತರ ಕಲ್ಪನೆ’. ತರಗತಿ ಕೊಠಡಿ ಮತ್ತು ಇತರ ಬೋಧನಾ ಪರಿಸರವು ಮಕ್ಕಳಿಗೆ ಆಟದ ರೂಪದಲ್ಲಿ ಕಲಿಯಲು ಸಾಕಷ್ಟು ಅವಕಾಶಗಳನ್ನು ಕೊಡಬೇಕು ಮತ್ತು ವೇಗದ ಓದುವಿಕೆ ಮತ್ತು ಬರವಣಿಗೆಯ ಕೌಶಲ್ಯಗಳಿಗೆ ಒತ್ತು ನೀಡುವುದು ಹಿಂದಕ್ಕೆ ಸರಿಯುವಂತೆ ಆಗಬೇಕು. ಒಂದು ದಿನ ನಾನು ನನ್ನ ಮಗನಿಗೆ ಅವನ ಶಾಲೆಯ ವಿಶೇಷ ಶಿಕ್ಷಕರ ಕೊಠಡಿಯಲ್ಲಿ ಚೆಂಡು ಮತ್ತು ಯೋಗದ ಹಾಸು ಬಳಸಿ ಇಂದ್ರಿಯಕ್ಕೆ ಸಂಬಂಧಿಸಿದ ವಿರಾಮ ಕೊಡುತ್ತಿದ್ದಾಗ, ಅದೇ ಹೊತ್ತಿಗೆ ವಿಶೇಷ ಶಿಕ್ಷಕರು ತರಗತಿ ಮಾಡುತ್ತಿದ್ದರೂ, ಅವನು ಚೆಂಡಿನ ಎಲ್ಲ ಚಲನೆಯ ಕಡೆಗೆ ಆಕರ್ಷಿತನಾದ. ಆತ ತನ್ನ ದೇಹದ ಮೂಲಕ ಕಲಿಯುವುದಕ್ಕೆ ಆದ್ಯತೆ ನೀಡಿದ. ಕಲಿಕೆಯ ಸಮಸ್ಯೆ ಇರುವ ಮಕ್ಕಳು ಎಲ್ಲವನ್ನೂ ತಮ್ಮ ಕೈಯಿಂದಲೇ ಮಾಡುತ್ತಾ ತಮ್ಮ ದೇಹದಿಂದಲೇ ಕಲಿಯಬೇಕು. ಪ್ರತಿಯೊಂದು ಕ್ರಿಯೆ ಕೂಡ ಅವರಿಗೆ ಹೊಸ ಪದವನ್ನು ಕಲಿಸಿಕೊಡುತ್ತದೆ. ತರಗತಿ ಕೊಠಡಿಗಳಲ್ಲಿ ತಮ್ಮ ಜಾಗೃತಾವಸ್ಥೆ, ಸುಸ್ಥಿರ ಗಮನ ಮತ್ತು ಶ್ರದ್ಧೆಯ ಮಟ್ಟವನ್ನು ಹೆಚ್ಚಿಸಿಕೊಳ್ಳುವುದಕ್ಕೆ ಅವರಿಗೆ ಇತರ ವಿದ್ಯಾರ್ಥಿಗಳಿಗಿಂತ ಹೆಚ್ಚಿನ ಚಲನೆಗಳು ಬೇಕಾಗುತ್ತವೆ. ಇಲ್ಲದಿದ್ದರೆ ಅವರು ಪಾಠದ ವಿಚಾರದಲ್ಲಿ ಬಹಳ ಸುಲಭವಾಗಿ ಹಳಿತಪ್ಪಿ ಬಿಡುತ್ತಾರೆ. ಮೂಲಭೂತ ವಿಚಾರಗಳನ್ನು ಗ್ರಹಿಸುವುದಕ್ಕಾಗಿ ಅವರು ಪದೇ ಪದೇ ತಮ್ಮ ಅಧ್ಯಾಪಕರ ಪಾಠ ನಿಲ್ಲಿಸಬೇಕಾಗುತ್ತದೆ ಮತ್ತು ಅನೇಕ ಸಲ ಪಾಠದ ಪರಿಕಲ್ಪನೆಗಳನ್ನು ಪುನರಾವರ್ತನೆ ಮಾಡಿಸಿಕೊಳ್ಳಬೇಕಾಗುತ್ತದೆ.

ಕ್ರೀಡಾ ಚಿಕಿತ್ಸಕರು ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಸಂಬಂಧಿಸಿದಂತೆ ಅದ್ಭುತವನ್ನೇ ಮಾಡುತ್ತಿದ್ದಾರೆ. ಮಕ್ಕಳು ಯಾವುದೇ ಬಗೆಯ ವಿಕಲತೆಯಿಂದ ಇರಲಿ ಅವರು ಮನರಂಜನೆಯ ತಂತ್ರ ಬಳಸಿ ಗುಂಪಿನ ಭಾಗವಾಗಿರುವಂತೆ ನೋಡಿಕೊಳ್ಳುತ್ತಾರೆ. ಅದೇ ಹೊತ್ತಿಗೆ ವೃತ್ತಿಪರ ಚಿಕಿತ್ಸಕರು ಮಕ್ಕಳ ಅಗತ್ಯಕ್ಕೆ ಅನುಗುಣವಾದ ಅಭ್ಯಾಸ ಮತ್ತು ಚಟುವಟಿಕೆಗಳನ್ನು ವಿನ್ಯಾಸಗೊಳಿಸುತ್ತಾರೆ.

ಪ್ರತಿಯೊಂದು ಶಾಲೆ ಕೂಡ ವಿಶೇಷ ಶಿಕ್ಷಕರನ್ನು ಹೊಂದಿರಬೇಕು ಎಂದು ಸಿಬಿಎಸ್ಇ ಕಡ್ಡಾಯಗೊಳಿಸಿದೆ. ಬೇಸರದ ಸಂಗತಿ ಎಂದರೆ ಬಹುತೇಕ ಶಾಲೆಗಳಲ್ಲಿ ವಿಶೇಷ ಶಿಕ್ಷಕರು ಒಂದೋ ಕಳಪೆ ತರಬೇತಿ ಪಡೆದವರಾಗಿರುತ್ತಾರೆ ಅಥವಾ ರಜೆಯ ಮೇಲೆ ತೆರಳಿದ ಅಧ್ಯಾಪಕರ ಬದಲಿಗೆ ಬಂದವರಾಗಿರುತ್ತಾರೆ ಅಥವಾ ಪರೀಕ್ಷೆ ಇಲ್ಲವೇ ಕ್ರೀಡಾ ಚಟುವಟಿಕೆಗಳಲ್ಲಿ ಮಾತ್ರ ಸಹಾಯಹಸ್ತ ಚಾಚುತ್ತಾರೆ.

ಬಹುತೇಕ ಪ್ರಕರಣಗಳಲ್ಲಿ, ವಿವಿಧ ತರಗತಿಗಳಲ್ಲಿ ಕಲಿಯುವ ಮತ್ತು ವಿವಿಧ ಬಗೆಯ ವೈಕಲ್ಯವನ್ನು ಹೊಂದಿರುವ ಹದಿನೈದು ಇಪ್ಪತ್ತು ವಿದ್ಯಾರ್ಥಿಗಳ ಗುಂಪಿಗೆ ಒಬ್ಬರೇ ಒಬ್ಬ ವಿಶೇಷ ಶಿಕ್ಷಕರಿರುತ್ತಾರೆ. ನನ್ನ ಮಗನ ಶಾಲೆಯಲ್ಲಿದ್ದ ವಿಶೇಷ ಶಿಕ್ಷಕರು ಶೈಕ್ಷಣಿಕ ವಿಚಾರದಲ್ಲಿ ಅವನಿಗೆ ಸಹಾಯ ಮಾಡಲು ವಾರದಲ್ಲಿ ಕೇವಲ ಒಂದೇ ಒಂದು ತರಗತಿ ನಡೆಸುತ್ತಿದ್ದರು. ವಿರಳ ಲಭ್ಯತೆ (ಪಾಲಕರ ಜೊತೆಗಿನ ನೇರ ಸಂವಾದಕ್ಕೆ ಸಂಬಂಧಿಸಿ) ಮತ್ತು ದೀರ್ಘ ಕೆಲಸದ ಅವಧಿ, ವಾಸ್ತವ ಸಂಭಾವನೆ ಇವೆಲ್ಲ ಅವರ ಅರ್ಹತೆಗೆ ಸರಿದೂಗುವಂತಿಲ್ಲ. ಶಿಕ್ಷಕರ ಕೊರತೆ ಈ ವಲಯದಲ್ಲಿ ಹೆಚ್ಚು. ವಿಶೇಷ ಶಿಕ್ಷಕರು ಒಂದು ಶಾಲೆಯಿಂದ ಇನ್ನೊಂದು ಶಾಲೆಗೆ ಹಾರುತ್ತಾ ಇರುತ್ತಾರೆ. ಇದು ಬಹಳ ಗಂಭೀರವಾದ ಸಮಸ್ಯೆಯಾಗಿದೆ. ಇದು ಅವರ ವಿದ್ಯಾರ್ಥಿಗಳಲ್ಲಿ ಅಸುರಕ್ಷಿತ ಭಾವನೆಯನ್ನು ಉಂಟುಮಾಡುತ್ತದೆ. ವಿಶೇಷ ಅಗತ್ಯವುಳ್ಳ ವಿದ್ಯಾರ್ಥಿಗಳಿಗೆ ಕಲಿಕೆಯ ವಾತಾವರಣ ಎನ್ನುವುದು ನಿರೀಕ್ಷಿತ ಮಟ್ಟದಲ್ಲಿರಬೇಕು. ಭಾವನಾತ್ಮಕವಾಗಿ ಸುರಕ್ಷಿತ ಪ್ರದೇಶವಾಗಿರಬೇಕು. ಇದಕ್ಕಾಗಿ ಶಿಕ್ಷಕ ಮತ್ತು ವಿದ್ಯಾರ್ಥಿಯ ನಡುವೆ ಸುಸ್ಥಿರ ಮತ್ತು ಗಟ್ಟಿಯಾದ ಸಂಬಂಧ ಅಗತ್ಯವಾಗಿದೆ.

ಖಾಸಗಿ ವಿಶೇಷ ಶಿಕ್ಷಣ ಮತ್ತು ವೃತ್ತಿಪರ ಚಿಕಿತ್ಸೆಯ ತರಗತಿಗಳ ವೆಚ್ಚ 45 ನಿಮಿಷದಿಂದ 1 ಗಂಟೆ ಅವಧಿಗೆ 400–600 ರೂಪಾಯಿಗಳವರೆಗೆ ಇರುತ್ತದೆ. ಬಹುತೇಕ ಪಾಲಕರಿಗೆ ಇದನ್ನು ಭರಿಸುವುದು ಕಷ್ಟ. ಇದು ಪಾಲಕರ ಆರ್ಥಿಕ ಸ್ಥಿರತೆಯನ್ನು ತೀವ್ರ ರೀತಿಯಲ್ಲಿ ಏರುಪೇರು ಮಾಡುತ್ತದೆ. ಮುಖ್ಯವಾಗಿ ಅವರಿಗೆ ಭವಿಷ್ಯದ ಉಳಿತಾಯ ಅಗತ್ಯ ಇರುವ ಹೊತ್ತಿಗೇ ಇದು ದುಬಾರಿ ಹೊರೆಯಾಗುತ್ತದೆ. ಈ ಚಿಕಿತ್ಸೆಗಳು ನಾಲ್ಕೈದು ವರ್ಷಗಳವರೆಗೆ ಮುಂದುವರಿಯಬಹುದು. ವಿಶೇಷ ಶಿಕ್ಷಣ ಮತ್ತು ವೃತ್ತಿಪರ ಚಿಕಿತ್ಸೆ, ಭಾಷೆ ಮತ್ತು ವಾಕ್ ಚಿಕಿತ್ಸೆಗಳಿಗೆ ಬೇಕಾದ ಸವಲತ್ತುಗಳನ್ನು ಶಾಲೆಗಳಲ್ಲಿ ಒದಗಿಸಿದರೆ ಪಾಲಕರು ಸಮಯ ಮತ್ತು ಹಣವನ್ನು ಉಳಿಸುವುದರ ಜೊತೆಗೆ ತಮ್ಮ ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಇತರ ಅನುಭವಗಳ ಆಯ್ಕೆಯನ್ನು ಒದಗಿಸುವುದು ಸಾಧ್ಯವಾಗುತ್ತದೆ; ಕೌಶಲ ತರಗತಿಗೆ ಸೇರಿಸಿ ಅವರ ಆಂತರಿಕ ಸಾಮರ್ಥ್ಯ ಮತ್ತು ಆಸಕ್ತಿಗಳನ್ನು ಹೊರಹೊಮ್ಮಿಸಬಹುದು. ಉದಾಹರಣೆಗೆ, ಕುಂಬಾರಿಕೆ, ಕಲೆ ಮತ್ತು ಕರಕುಶಲತೆ, ಮಲ್ಟಿ ಮೀಡಿಯಾ, ನಾಟಕ, ಸಂಗೀತ, ಕ್ರೀಡೆ, ಅಡುಗೆ ಮತ್ತು ಬೇಕಿಂಗ್, ಹೀಗೆ ವಿವಿಧ ಅನುಭವಗಳು ವಿದ್ಯಾರ್ಥಿಗಳಿಗೆ ಒದಗಿಬರುತ್ತವೆ.

ಎರಡು ಮತ್ತು ಮೂರನೆಯ ಹಂತದ ನಗರಗಳಲ್ಲಿ ಬೇಕಾದ ಚಿಕಿತ್ಸೆಗಳನ್ನು ಒದಗಿಸುವ ಒಂದೋ ಎರಡೋ ಕೇಂದ್ರಗಳು ಮಾತ್ರ ಇರುತ್ತವೆ. ಶಾಲೆಗಳಲ್ಲಿ ಒಬ್ಬನೇ ಒಬ್ಬ ವಿಶೇಷ ಶಿಕ್ಷಕ ಕೂಡಾ ಇರುವುದಿಲ್ಲ. ದೆಹಲಿ, ಮುಂಬಯಿ, ಪುಣೆಯಂತಹ ಮೆಟ್ರೋ ನಗರಗಳಲ್ಲಿ ಪ್ರತಿ ವಾರ ಹೊಸ ಕೇಂದ್ರಗಳು ತಲೆ ಎತ್ತುತ್ತಿವೆ. ಅಲ್ಲಿ ಅತ್ಯುತ್ತಮ ವೃತ್ತಿಪರರನ್ನು ಒಳಗೊಂಡ ತಂಡ ಹೊಂದಿರುವ ಶಾಲೆಗಳು ಇವೆ. ಆದರೆ ಈ ಶಾಲೆಗಳು ದುಬಾರಿ ಶುಲ್ಕ ವಿಧಿಸುತ್ತವೆ. ಬಹುತೇಕ ಪಾಲಕರಿಗೆ ಇದು ಭರಿಸಲಾರದ ವೆಚ್ಚವಾಗಿರುತ್ತದೆ.

ಈ ಬಗೆಯ ಶಿಕ್ಷಣದ ಕುರಿತು ಭಾರತೀಯ ಪುನರ್ವಸತಿ ಮಂಡಳಿ–(Rehabilitation Council of India-RCI) ಯಿಂದ ಯಾವುದೇ ಮಾರ್ಗದರ್ಶಿ ಸೂತ್ರಗಳಿಲ್ಲ ಎನ್ನುವುದು ಉಲ್ಲೇಖನೀಯ ಅಂಶ. ಆರ್‌ಸಿಐ ಮತ್ತು ಸಿಬಿಎಸ್ಇ ಎರಡೂ ಜೊತೆ ಸೇರಿ ಈ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುತ್ತಿರುವ ಸಂಸ್ಥೆಗಳಿಗಾಗಿ ನಿಯಂತ್ರಕ ಮಾರ್ಗದರ್ಶಿ ಸೂತ್ರಗಳನ್ನು ರೂಪಿಸಬೇಕಾದ ಅಗತ್ಯ ಇದೆ. ಕೇವಲ ಇತ್ತೀಚೆಗಷ್ಟೇ, ಖಾಸಗಿ ಸಂಸ್ಥೆಗಳಲ್ಲಿ ವಿವಿಧ ವಿಕಲತೆಗಳಿಗೆ ಸಂಬಂಧಿಸಿದ ಡಿಪ್ಲೊಮಾ ಮತ್ತು ಬಿ.ಎಡ್ ಮಾಡುವ ವಿದ್ಯಾರ್ಥಿಗಳಿಗೆ ಹಾಜರಾತಿ ಕಡ್ಡಾಯಗೊಳಿಸಲಾಗಿದೆ. ಇದು ಈ ದಿಕ್ಕಿನಲ್ಲಿ ಸರಿಯಾದ ಹೆಜ್ಜೆ. ಶಾಲೆಗಳು ಪ್ರತಿವರ್ಷ ಮಕ್ಕಳನ್ನು ತಪಾಸಣೆ ಮಾಡಬೇಕು. ಅಗತ್ಯವಿರುವ ಸರಳವಾದ ಮತ್ತು ಹೆಚ್ಚು ವೈವಿಧ್ಯಮಯವಾದ ಬೋಧನಾ ಮತ್ತು ಕಲಿಕಾ ಸಾಮಗ್ರಿಗಳನ್ನು ಒದಗಿಸುವ ಕೆಲಸ ಮಾಡಬೇಕು.

ಕಡಿಮೆ ಗಮನ ಹೊಂದಿರುವ ಮಕ್ಕಳು ವೃತ್ತಿಪರ ಚಿಕಿತ್ಸಕರ ಸಲಹೆ ಪಡೆದು ವಿನ್ಯಾಸಗೊಳಿಸಿದ ಆಟ ಮತ್ತು ವ್ಯಾಯಾಮಗಳ ಮೂಲಕ ಬಹಳಷ್ಟು ಪ್ರಯೋಜನ ಪಡೆಯುತ್ತಾರೆ. ತರಗತಿಯಲ್ಲಿ ಶೈಕ್ಷಣಿಕವಾಗಿ, ಬೌದ್ಧಿಕವಾಗಿ ಮತ್ತು ಸಾಮಾಜಿಕವಾಗಿ ಹೊಂದಿಕೊಳ್ಳುವುದಕ್ಕೆ ಕಷ್ಟಪಡುತ್ತಿರುವ ಮಕ್ಕಳನ್ನು ಶಾಲೆ ಮತ್ತು ಪಾಲಕರು ಎಷ್ಟು ಬೇಗ ಗುರುತಿಸುತ್ತಾರೋ ಅಷ್ಟು ಒಳ್ಳೆಯದು. ವೃತ್ತಿಪರರ ಸಹಾಯದೊಂದಿಗೆ, ಅಂದರೆ ಮಕ್ಕಳ ಬೆಳವಣಿಗೆ ತಜ್ಞರು, ವಿಶೇಷ ಶಿಕ್ಷಕರು ಮತ್ತು ವೃತ್ತಿಪರ ಚಿಕಿತ್ಸಕರ ನೆರವಿನೊಂದಿಗೆ ನಿರ್ದಿಷ್ಟ ಸಮಸ್ಯೆ ಏನು ಎಂದು ಗೊತ್ತು ಮಾಡಿಕೊಂಡರೆ ಈ ಮಕ್ಕಳ ಹಿತದೃಷ್ಟಿಯಿಂದ ಒಳಿತು. ಆಗ ಈ ಮಕ್ಕಳಿಗೆ ಬೇಕಾದ ಯೋಜನೆಯನ್ನು ಪ್ರಾಥಮಿಕ ತರಗತಿಯಿಂದಲೇ ಒದಗಿಸುವುದು ಸಾಧ್ಯವಾಗುತ್ತದೆ. ಇದು ಮುಖ್ಯಧಾರೆಯ ತರಗತಿ ಕೊಠಡಿಗಳಿಗೆ ಮಕ್ಕಳನ್ನು ಆದಷ್ಟು ಮಟ್ಟಿಗೆ ಹೊಂದಿಸಲು ಶಾಲೆಗಳಿಗೆ ಸಾಧ್ಯವಾಗುತ್ತದೆ. ಆಗ ವಿದ್ಯಾರ್ಥಿಗಳಿಗೆ ಪಠ್ಯಕ್ರಮ ಮತ್ತು ಸಾಮಾನ್ಯ ಶಿಕ್ಷಣದ ವಿಷಯ ಮತ್ತು ಸಕಾರಾತ್ಮಕವಾದ ಅತ್ಯುತ್ತಮ ಗೆಳೆತನ ಬೆಳೆಸುವುದು ಸಾಧ್ಯವಾಗುತ್ತದೆ. ಇದರಿಂದ ಅವರ ಕಲಿಕೆಗೆ ಹೆಚ್ಚು ಸಮೃದ್ಧವಾದ ಮತ್ತು ಸುರಕ್ಷಿತವಾದ ಅಡಿಪಾಯ ಒದಗುತ್ತದೆ.

ಕಲಿಕೆ ಎಂಬುವುದು ಪ್ರತ್ಯೇಕವಾಗಿಯೋ ಅಥವಾ ಭಾವನಾತ್ಮಕ ಆರೋಗ್ಯದ ಅಸ್ಥಿರತೆ ಇರುವಲ್ಲಾಗಲೀ ಸಂಭವಿಸುವಂಥದ್ದಲ್ಲ. ಮಕ್ಕಳು ತಮ್ಮ ದೌರ್ಬಲ್ಯಗಳನ್ನು ಮೆಟ್ಟಿ ನಿಲ್ಲಬೇಕಾದರೆ, ಅವರನ್ನು ಬುದ್ಧಿವಂತ, ಸುರಕ್ಷಿತ, ಮತ್ತು ಆತ್ಮವಿಶ್ವಾಸದ ವಯಸ್ಕರನ್ನಾಗಿ ಬೆಳೆಸಬೇಕಿದ್ದರೆ ಅವರನ್ನು ಭವಿಷ್ಯಕ್ಕಾಗಿ ರೂಪಿಸುವಂಥ ದೈನಂದಿನ ತರಗತಿಯ ವಾತಾವರಣವು ಬೇಕಾಗುತ್ತದೆ. ಇದೆಲ್ಲ ವಿಶೇಷ ವ್ಯವಸ್ಥೆಯ ನಾಲ್ಕು ಗೋಡೆಯ ಮಧ್ಯೆ ಸಾಧ್ಯವಾಗದು. ಹೀಗೆ ವಿವಿಧ ಬಗೆಯ ವಿಕಲತೆಗಳನ್ನು ಅವುಗಳ ವಿವಿಧ ಹಂತಗಳನ್ನು ಗುರುತಿಸುವಂತೆ ನಮ್ಮ ಅಧ್ಯಾಪಕರನ್ನು ಸಂವೇದನಾಶೀಲರನ್ನಾಗಿ ಮಾಡಬೇಕಾಗಿದೆ. ಜೊತೆಗೇ ತರಗತಿಯಲ್ಲಿ ಎಲ್ಲ ವಿದ್ಯಾರ್ಥಿಗಳ

ಸಮಾನ ಭಾಗವಹಿಸುವಿಕೆಯನ್ನು ಖಾತರಿಪಡಿಸಲು ಸಹಾಯಕ-ವಾಗುವ ಯೋಜನೆಗಳನ್ನು ರೂಪಿಸಬೇಕು. ರಾಷ್ಟ್ರೀಯ ಮುಕ್ತ ಶಾಲಾ ಸಂಸ್ಥೆ (National Institute of Open Schooling -NIOS) ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ವರವಾಗಿ ಪರಿಣಮಿಸಿದೆ.ಯಾಕೆಂದರೆ ಅದು ಮಕ್ಕಳ ಶೈಕ್ಷಣಿಕ ಗುರಿಗಳನ್ನು ಅವರದ್ದೇ ಆದ ರೀತಿಗಳಲ್ಲಿ ಯಾವುದೇ ಅಣಕವಿಲ್ಲದೆ ಮತ್ತು ಅನಗತ್ಯ ಒತ್ತಡ ಹಾಕದೇ ಸಂಪೂರ್ಣಗೊಳಿಸುವುದಕ್ಕೆ ಸಹಾಯ ಮಾಡುತ್ತಿದೆ. ನರ ನ್ಯೂನತೆ ಇರುವ ವಿದ್ಯಾರ್ಥಿಗಳಿಗೂ ಉತ್ತರಗಳನ್ನು ಮಕ್ಕಿ ಕಾ ಮಕ್ಕಿ ಬರೆಯುವುದನ್ನು ತಪ್ಪಿಸಲು ತೆರೆದ ಪುಸ್ತಕದ ಪರೀಕ್ಷೆಯನ್ನು ಪರಿಗಣಿಸುತ್ತಿರುವ ಕಾಲದಲ್ಲಿದ್ದೇವೆ. ಇಂಥದ್ದೇ ವ್ಯವಸ್ಥೆಯನ್ನು ನಾವು ವಿಶೇಷ ಅಗತ್ಯವುಳ್ಳ ವಿದ್ಯಾರ್ಥಿಗಳಿಗಾಗಿ ರೂಪಿಸಬೇಕಾಗಿದೆ. ಇದು ಅವರನ್ನು ಸ್ವತಂತ್ರ ಮತ್ತು ಘನತೆಯ ಬದುಕಿಗೆ ಸಿದ್ಧಗೊಳಿಸುವಲ್ಲಿ ಸಹಕಾರಿ ಆದೀತು. ಇಂತಹ ಬದುಕು ಅವರನ್ನು ಮುಖ್ಯಧಾರೆಯಲ್ಲಿ ಒಳಗೊಳ್ಳಿಸುವುದಕ್ಕೆ ಅತ್ಯಗತ್ಯ. ಪ್ರಸ್ತುತ ಪರಿಸ್ಥಿತಿಯು, ಬದ್ಧತೆ ಮತ್ತು ಸಮಗ್ರತೆಯ ಕೊರತೆಯಿಂದಾಗಿ ಆತಂಕದಿಂದ ಕೂಡಿದೆ. ಉದಾಹರಣೆಗೆ, ವಿದ್ಯಾರ್ಥಿಯ ವಿಕಲತೆಯ ಬಗ್ಗೆ ಸಂಪೂರ್ಣ ಜ್ಞಾನ ಇದ್ದರೂ, ಮಕ್ಕಳನ್ನು ಅನುತ್ತೀರ್ಣ-ಗೊಳಿಸುತ್ತಿದ್ದರೂ ವೈಯಕ್ತಿಕ ವಿದ್ಯಾರ್ಥಿಗಳಿಗಾಗಿ ಪಠ್ಯಕ್ರಮವನ್ನು ಪರಿಷ್ಕರಿಸಲು/ಮಾರ್ಪಡಿಸಲು ಶಾಲೆಗಳು ನಿರಾಕರಿಸುತ್ತವೆ. ಶಿಕ್ಷಕರು ತಮ್ಮ ಕಾರ್ಯ ನಿರ್ವಹಣೆಯ ಸಂದರ್ಭದಲ್ಲಿ ಬಹುಮಾಧ್ಯಮ ನಿರೂಪಣೆಗಳನ್ನು ಬಳಸಿಕೊಳ್ಳಬಹುದು. ಹೀಗಿದ್ದರೂ ಉನ್ನತ ಮಟ್ಟದ ಶಾಲೆಗಳು ಈಗ ಸ್ಮಾರ್ಟ್ ಬೋರ್ಡ್‌ಗಳನ್ನು ಅಂಗೀಕರಿಸಿದ್ದರೂ ಅವುಗಳನ್ನು ಬಳಸುವುದಕ್ಕೆ ತಮ್ಮ ಅಧ್ಯಾಪಕರಿಗೆ ಸಮಯ ಕೊಡುವುದಿಲ್ಲ. ಯಾಕೆಂದರೆ ಅಧ್ಯಾಪಕರು ತಮ್ಮ ಪಠ್ಯಕ್ರಮ ಪೂರ್ತಿಗೊಳಿಸುವ ಧಾವಂತದಲ್ಲಿ ಇರುತ್ತಾರೆ. ವಿಶೇಷ ಅಗತ್ಯವುಳ್ಳ ಮಕ್ಕಳ ವೈಯಕ್ತಿಕ ಅಗತ್ಯಗಳಿಗೆ ಬೇಕಾದ ಬೋಧನಾ-ಕಲಿಕಾ ಸಾಮಗ್ರಿಗಳನ್ನು ಸಿದ್ಧಗೊಳಿಸಲು ಮತ್ತು ಬಳಸುವುದರಲ್ಲಿ ಗರಿಷ್ಠ ಪ್ರಮಾಣದ ಅಧ್ಯಾಪಕ-ವಿದ್ಯಾರ್ಥಿ ಅನುಪಾತವು ಇನ್ನೊಂದು ಅಡಚಣೆಯಾಗಿ ನಿಲ್ಲುತ್ತದೆ.

**ನನ್ನ ಕೆಲವು ಅನುಭವಗಳು**

ಸ್ವಲೀನತೆ (Autism spectrum disorder -ASD) ಹೊಂದಿರುವ ನನ್ನ ಮಗನಿಗೆ 'ಸಾಮಾನ್ಯ' ಶಾಲೆಯ ಕೊನೆಯ ತಿಂಗಳ ಅವಧಿಯಲ್ಲಿ ನೆರಳಾಗುವ ಅವಕಾಶ ನನಗೆ ದೊರಕಿತು. ಆ ತರಗತಿಯಲ್ಲಿ ಇದ್ದ ಮಕ್ಕಳು ವಿವಿಧ ಕಲಿಕೆ, ಅವಗಾಹನೆ, ಗಮನಗಳ ಮಟ್ಟವನ್ನು ಹೊಂದಿದ್ದರು. ಅದರಲ್ಲೂ ಹತ್ತು ಮಂದಿ ವಿದ್ಯಾರ್ಥಿಗಳು ವಿವಿಧ ಸಮಸ್ಯೆಗಳಿಂದಾಗಿ ಕಲಿಕಾ ನ್ಯೂನತೆಯನ್ನು ಹೊಂದಿದ್ದರು. ಭಾವನಾತ್ಮಕ ಸಮಸ್ಯೆ ಹೊಂದಿದ್ದ ಹುಡುಗಿಯೊಬ್ಬಳಿಗೆ ಹೆಚ್ಚಿನ ತರಗತಿಗಳಲ್ಲಿ ತನ್ನ ಕೆಲಸ ಮುಗಿಸುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ. ಆದರೆ ಅದೇ ಹುಡುಗಿ ಅಬ್ಯಾಕಸ್ (Abacus) ತರಗತಿಯಲ್ಲಿ ಮಾತ್ರ ಅತ್ಯಂತ ಉತ್ಸಾಹದಿಂದ ಇರುತ್ತಿದ್ದಳು. ಅಲ್ಲಿ ಅಧ್ಯಾಪಕರು ಪ್ರಶ್ನೆಗಳನ್ನು ಸ್ಪಷ್ಟವಾಗಿ ಮತ್ತು ತಾಳ್ಮೆಯಿಂದ ಪುನರಾವರ್ತಿಸಿದಾಗ ಆಕೆ ಹೆಚ್ಚಿನ ಎಲ್ಲ ಪ್ರಶ್ನೆಗಳಿಗೆ ಸರಿಯಾದ ಉತ್ತರ ಕೊಡುತ್ತಿದ್ದಳು. ಅಧ್ಯಾಪಕರ ನಿರಂತರ ಪರಿಶ್ರಮ ಆಕೆಗೆ ಉತ್ತಮವಾಗಿ ನಿರ್ವಹಿಸುವುದಕ್ಕೆ ಸಹಾಯ ಮಾಡಿತು.

ಸಂಪೂರ್ಣ ಭಾಷಾ ಸಾಮರ್ಥ್ಯ ಇರುವ, ಆದರೆ ಇತರ ಕಲಿಕಾ ನ್ಯೂನತೆ ಇರುವ ವಿದ್ಯಾರ್ಥಿಗಳ ಪಾಲಕರು ವಿದ್ಯಾರ್ಥಿಯ ಮೌಲ್ಯಮಾಪನ ನಡೆಯಬೇಕು ಎಂಬ ಶಿಕ್ಷಕರ ಎಚ್ಚರಿಕೆಯನ್ನು ನಿರ್ಲಕ್ಷಿಸುತ್ತಾರೆ. ಅಂತಹ ಪ್ರಕರಣಗಳಲ್ಲಿ ಶಾಲೆ ಸಹಕಾರ ಮತ್ತು ಮಾರ್ಗದರ್ಶನವನ್ನು ನೀಡಬಲ್ಲುದು. ಶಾಲೆಯಲ್ಲಿರುವ ಅಭಿವೃದ್ಧಿ ತಜ್ಞರು ಮತ್ತು ವಿಶೇಷ ಶಿಕ್ಷಕರ ತಂಡ ತರಗತಿಯ ಒಳಗೆ ಮತ್ತು ಹೊರಗೆ ಅವರ ಮಗುವನ್ನು ಗಮನಿಸುವುದಕ್ಕೆ ಹೆತ್ತವರನ್ನು ಆಹ್ವಾನಿಸಬಹುದು ಮತ್ತು ಮಗು ನಿಜವಾಗಿಯೂ ಎಲ್ಲಿ ಕಷ್ಟಪಡುತ್ತಿದೆ ಎಂದು ನಿರ್ಧರಿಸಬಹುದು. ತರಗತಿ ಕೊಠಡಿಯ ಖಾಲಿ ಗೋಡೆಗಳು ಮಕ್ಕಳನ್ನು ನಿರುತ್ಸಾಹಿಗಳನ್ನಾಗಿಸುತ್ತವೆ. ಅವು ವಿದ್ಯಾರ್ಥಿಗಳ ಸೃಜನಕಲೆಗಳಿಂದ ತುಂಬಿಕೊಂಡಿರಬೇಕು. ನನ್ನ ಮಗ ವಾಹನಗಳ ಚಿತ್ರ ಮತ್ತು ವ್ಯಂಗ್ಯಚಿತ್ರದ ಪಾತ್ರಗಳನ್ನು ರಚಿಸುವುದನ್ನು, ಮೊಬೈಲ್ ಗೇಮ್‌ನ ಗ್ರಾಫಿಕ್ಸ್‌ಗಳ ಮರು-ಸೃಷ್ಟಿಯನ್ನು ಇಷ್ಟಪಡುತ್ತಾನೆ. ಪರೀಕ್ಷೆಯಲ್ಲಿ ಗಳಿಸಿದ ಅಂಕಗಳಿಗೆ ಮಾತ್ರ ಕೈ ಚಪ್ಪಾಳೆ ತಟ್ಟುವುದು, ಆ ಮೂಲಕ, ಅದನ್ನೇ ಶೈಕ್ಷಣಿಕ ಅತ್ಯುನ್ನತಿಯ ಮಾನದಂಡ ಎಂದು ಎಳೆಮನಸ್ಸುಗಳಲ್ಲಿ ಬಿಂಬಿಸುವುದರ ಬದಲು, ಇಂತಹ ಶೈಕ್ಷಣಿಕೇತರ ಸಾಧನೆಗಳನ್ನು ನಾವು ಕೊಂಡಾಡೋಣ. ಮಂಡಳಿಯ / ಬೋರ್ಡ್ ಪರೀಕ್ಷೆಯಲ್ಲಿ ಪಡೆದ ಅಂಕಗಳು ಅನಂತರದ ಬದುಕಿನಲ್ಲಿ ಯಶಸ್ಸು ಕೊಡುತ್ತದೆ ಎಂಬ ಯಾವ ಖಾತರಿಯೂ ಇಲ್ಲ ಎನ್ನುವುದು ಸದ್ಯದ ಜಗತ್ತಿನಲ್ಲಿ ಪದೇ ಪದೇ ನಮಗೆ ನೆನಪಾಗುತ್ತಿದೆ. ತಮ್ಮ ಪೂರ್ಣ ಶಾಲಾ ಜೀವನದ ಅಧ್ಯಯನದಲ್ಲಿ ಬಹಳ ಹಿಂದೆ ಇದ್ದವರು ಇಂದು ಯಶಸ್ವಿಯಾಗಿ ವಿಶಿಷ್ಟ ಉದ್ಯಮಗಳನ್ನು ಸೃಷ್ಟಿಸಿದ್ದಾರೆ.

ಇಂದಿನ ಶಾಲೆಗಳು ಮಕ್ಕಳಲ್ಲಿ ಕಲಿಕಾ ಪರಿಸರವನ್ನು ಉತ್ತೇಜಿಸುವುದಕ್ಕೆ ಬೇಕಾದ ಮೂಲ ಸೌಕರ್ಯ ಮತ್ತು ಸಂಪನ್ಮೂಲಗಳನ್ನು ಹೊಂದಿವೆ. ಇವುಗಳನ್ನು ಕ್ರಿಯಾಶೀಲವಾಗಿ ಬಳಸಲು ಸಣ್ಣ ಪ್ರಯತ್ನ ನಡೆಯಬೇಕಾಗಿದೆ. ಮತ್ತೊಂದು ಅವಲೋಕನವೆಂದರೆ ಶೈಕ್ಷಣಿಕ ಅವಧಿಯಲ್ಲಿ ಸಂಪೂರ್ಣ ಜಾಗ್ರತೆ ಮತ್ತು ಶ್ರದ್ಧೆಯಿಂದ ಇರುವ ಹಾಗೆ ಮತ್ತು ತಮ್ಮ ತಮ್ಮ ಕೆಲಸವನ್ನು ತಾವೇ ನಿರ್ವಹಿಸುವುದಕ್ಕೆ ಸಹಾಯಕವಾಗುವ ಹಾಗೆ ಮಕ್ಕಳ ಚಲನೆಯ ವಿರಾಮ, ದೈಹಿಕ ವ್ಯಾಯಾಮ ಮತ್ತು ಇತರ ಇಂದ್ರಿಯಕ್ಕೆ ಸಂಬಂಧಿಸಿದ ವಿರಾಮಗಳೆಲ್ಲವನ್ನೂ ಮಕ್ಕಳಿಗೆ ಒದಗಿಸುವ ರೀತಿಯಲ್ಲಿ ದೈನಂದಿನ ವೇಳಾಪಟ್ಟಿಯನ್ನು ಯೋಜಿಸಬೇಕು. ಉದಾಹರಣೆಗೆ ದೆಹಲಿಯ ಶಾಲೆಯೊಂದು ತನ್ನ ತರಗತಿಯನ್ನು ಪ್ರಾರಂಭಿಸುವ ಮೊದಲು ಶೂನ್ಯ ಅವಧಿಯಲ್ಲಿ ಮಕ್ಕಳನ್ನು ಸ್ಕೇಟಿಂಗ್‌ನಲ್ಲಿ ತೊಡಗಿಸಿಕೊಳ್ಳುತ್ತದೆ. ಏಳು ವರ್ಷದ ನನ್ನ ಮಗನಿಗೆ ತನ್ನ ಕಲಿಕಾ ತೊಡಕುಗಳು ಮತ್ತು ಇಂದ್ರಿಯಕ್ಕೆ (ಸ್ವಲೀನತೆಗೆ ಸಂಬಂಧಿಸಿದ ಕೆಲವು ಅಸ್ವಸ್ಥತೆಗಳು) ಸಂಬಂಧಿಸಿದ ಸಮಸ್ಯೆಗಳಿಂದಾಗಿ ಶಾಲಾ ಶೈಕ್ಷಣಿಕ ಪಠ್ಯಕ್ರಮದ ಜೊತೆಗೆ ಹೆಜ್ಜೆ ಹಾಕುವುದಕ್ಕೆ ಸಾಧ್ಯವಾಗುತ್ತಿಲ್ಲ. ಆದರೆ ಅವನ ಕಾಗುಣಿತ ಸ್ಮರಣಾ ಸಾಮರ್ಥ್ಯ, ಈಜು ಮತ್ತು ನೀರಿನಾಳದ ಕೌಶಲಗಳನ್ನು ಕಂಡು ಅವನ ಸಹಪಾಠಿಗಳು ಬೆರಗಾಗುತ್ತಾರೆ. ನನ್ನನ್ನು ಭೇಟಿಯಾದಾಗ ಅವರು ಸಾಕಷ್ಟು ಪ್ರಶ್ನೆಗಳನ್ನು ಕೇಳಿದರು: ಹೇರಂಬ್ ಇದನ್ನು ಏಕೆ ಮಾಡುತ್ತಾನೆ? ಅದನ್ನು ಏಕೆ ಮಾಡುತ್ತಾನೆ? ಈ ದಿನಗಳಲ್ಲಿ ಆತ ಏಕೆ ಪ್ರತಿದಿನ ಶಾಲೆಗೆ ಬರುತ್ತಿಲ್ಲ? (ಛಾಯಾ ಶಿಕ್ಷಕರಿಲ್ಲದೆ ಶಾಲೆ ಆತನಿಗೆ ಪ್ರವೇಶ ನೀಡಲಿಲ್ಲ?) ಇಲ್ಲಿ ಮಹತ್ವದ ಸವಾಲು ಎಂದರೆ ಉತ್ತಮ ಛಾಯಾ ಶಿಕ್ಷಕರನ್ನು (ಶೈಕ್ಷಣಿಕ ಸಹಾಯಕ) ಹುಡುಕುವುದೇ ಆಗಿತ್ತು. ಅಂತಹ ಶಿಕ್ಷಕರಿಗೆ ತರಬೇತಿ ನೀಡುವ ಯಾವುದೇ ಸಂಸ್ಥೆಗಳಿಲ್ಲ. ಒಳಗಿನ ಶಿಕ್ಷಕರನ್ನೇ ಈ ಕೆಲಸಕ್ಕೆ ಒದಗಿಸಲು ಅಥವಾ ಈ ಪಾತ್ರಕ್ಕೆ ಒಗ್ಗಿಕೊಳ್ಳುವಂತೆ ತನ್ನದೇ ಸಿಬ್ಬಂದಿಗೆ ಸಹಾಯ ನೀಡಲು ಶಾಲೆಗಳಿಗೆ ಯಾವುದೇ ಸಮಯ ಮತ್ತು ಪ್ರೇರಣೆಯೂ ಇಲ್ಲ. ವಿಶೇಷ ಅಗತ್ಯವುಳ್ಳ ಮಗುವಿನ ಪಾಲಕಳಾಗಿ ನನಗೆ ಕೆಲ ದಿನಗಳ ಕಾಲ ಕಠಿಣವಾಗಿತ್ತು ಮತ್ತು ನನ್ನ ಮಗು ಕೌಶಲ ಕಲಿಯುವ ಸಂದರ್ಭದಲ್ಲಿ ನಾನು ತೀಕ್ಷ್ಣನೋಟಗಳನ್ನು

ಎದುರಿಸಬೇಕಿತ್ತು; ಜನ ತಾಜಾ ವಿಚಾರಗಳನ್ನು ಬಳಸಲು, ತಮ್ಮ ವಿಧಾನಗಳನ್ನು ಬದಲಾಯಿಸಲು ಒಪ್ಪುವುದಿಲ್ಲ. ಮಗುವಿನ ಸುರಕ್ಷೆ ಮತ್ತು ಕ್ಷೇಮವನ್ನು ತನ್ನದೇ ಕೈಯಲ್ಲಿ ಇರಿಸಿಕೊಂಡು ಅಡಗಿಕೊಳ್ಳುತ್ತಿರುವಂತೆ ಭಾಸವಾಗುತ್ತದೆ. ಅದರ ಜೊತೆಗೆ ಜಗತ್ತಿನ ತೀರ್ಪಿನ ದೃಷ್ಟಿಯಿಂದಲೂ ತಪ್ಪಿಸಿಕೊಳ್ಳಬೇಕಾಗುತ್ತದೆ. ಆದರೆ ಯಾವತ್ತೂ ನಿಮ್ಮ ದುರ್ಬಲ ಮನಸ್ಸಿಗೆ ಅದನ್ನು ಬಿಡಬೇಡಿ. ಹಾಗೆ ಮಾಡಿದರೆ ನೀವು ನಿಮ್ಮ ಮಗುವಿಗೆ ಅನ್ಯಾಯ ಮಾಡಿದಷ್ಟೇ ಅಲ್ಲ, ಜೊತೆಗಿರುವ ಮಕ್ಕಳಿಗೂ ಅನ್ಯಾಯ ಮಾಡಿದಂತೆ. ನನಗೆ ಸಿಕ್ಕ ಪ್ರತೀ ಕಟು ಮಾತಿಗೂ ನಾನು ಸಾಕಷ್ಟು ಅನಿರೀಕ್ಷಿತ ಬೆಚ್ಚಗಿನ ಅನುಭವಗಳನ್ನೂ ಪಡೆದಿದ್ದೇನೆ. ಮಗು ತನ್ನ ಸಾಮರ್ಥ್ಯ ಪಡೆಯುವವರೆಗೆ ಸಹಾಯ ಮಾಡಲು ನನಗೆ ಇಂತಹ ಬೆಚ್ಚಗಿನ ಅನುಭವಗಳು ಧೈರ್ಯ ತುಂಬಿವೆ.

ವಿಶೇಷ ಅಗತ್ಯವುಳ್ಳ ಮಗುವಿಗೆ ಕಲಿಸುವ ಇಂತಹ ಅನುದಿನದ ಜಂಜಾಟದಲ್ಲಿ ಅತ್ಯಂತ ಪ್ರಮುಖವಾಗಿ ಆಕೆ ಅಥವಾ ಆತ ಮಗು ಎನ್ನುವುದನ್ನೇ ಮರೆತು ಬಿಡುತ್ತೇವೆ. ನಾನು ಈಗಲೂ ನೆನಪಿಸಿಕೊಳ್ಳುತ್ತೇನೆ. ನನ್ನ ಮಗನ ರೋಗ ನಿರ್ಣಯ (Diagnosis) ವರದಿ ಕೈಗಿತ್ತ ಮೇಲೆ, ನಂತರದ ಆರು ತಿಂಗಳವರೆಗೆ ನಾನು ಅವನ ಛಾಯಾಚಿತ್ರ ತೆಗೆಯಲು ಸಂಪೂರ್ಣ ಮರೆತೆ. ಅದಕ್ಕೂ ಮುನ್ನ ನಾನು ಆತನ ಪ್ರತಿ ನಗುವನ್ನೂ, ಚಲನೆಯನ್ನೂ ಇಂದಿನ ಸ್ಮಾರ್ಟ್‌ಫೋನ್‌ಗಳ ಕೃಪೆಯಿಂದ ಸೆರೆ ಹಿಡಿಯುತ್ತಿದ್ದೆ. ಚಿಕಿತ್ಸೆಗಾಗಿ ಮೂಲೆ ಮೂಲೆಗಳಿಗೆ ಅಲೆಯುತ್ತಿದ್ದಾಗಲೂ ಮುಕ್ತ ಗಾಳಿ ಮತ್ತು ಪರಿಸರದಲ್ಲಿ ಮಗುವಿಗೆ ಸಾಕಷ್ಟು ಸಮಯ ಕೊಡುವುದಕ್ಕೆ ಮರೆಯುತ್ತಿರಲಿಲ್ಲ. ಇದು ನನ್ನ ಮಗನಿಗೆ ಸಾಕಷ್ಟು ಪ್ರಮಾಣದಲ್ಲಿ ಸಹಾಯ ಮಾಡಿದೆ. ಅದು ಆತನ ಅನೇಕ ಇಂದ್ರಿಯ ಸಂಬಂಧಿ, ಸಮಸ್ಯೆಗಳನ್ನು, ನಿದ್ರೆಯ ಸಮಸ್ಯೆಗಳನ್ನು ನಿವಾರಿಸಿದೆ. ಜೊತೆಗೆ ಮನರಂಜನೆಯ ಕಲಿಕಾ ಅವಕಾಶಗಳನ್ನು ರೂಪಿಸಲು ಕೂಡ ಸಹಾಯ ಮಾಡಿದೆ.

ಈ ವಿಶೇಷ ಗುರುತು ಏನು ಎನ್ನುವುದು ನನಗೆ ಅರ್ಥವಾಗುತ್ತಿಲ್ಲ. ವಿಶೇಷವಾದದ್ದು ಮಗುವಿಗೆ ಬೇಕಾಗಿದೆ, ವಿಶೇಷ ಶಾಲೆ, ವಿಶೇಷ ವ್ಯವಸ್ಥೆ ಹೀಗೆ ಇವೆಲ್ಲ. ಮುಂದೆ ನಾವು ವಿಶೇಷ ಕಾಲೇಜುಗಳು, ಆಸ್ಪತ್ರೆಗಳು, ಬ್ಯಾಂಕ್‌ಗಳು, ಮಾಲ್‌ಗಳು ಬರಲಿವೆಯೇ? ಹೀಗೆ ನಾವು ಮುಂದುವರೆಯಲಿದ್ದೇವೆಯೇ? (ಶಿಕ್ಷಣ) ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯದ (Ministry of Human Resources Development-MHRD) ಹಸ್ತಕ್ಷೇಪ ಇದ್ದರೂ, ದೆಹಲಿ ಸರ್ಕಾರ ವಿಶೇಷ ಅಗತ್ಯವುಳ್ಳ ಮಕ್ಕಳಿಗಾಗಿ ಅಂತರ್ಜಾಲದ ಮೂಲಕ ದಾಖಲಾತಿ ಅಭಿಯಾನ ನಡೆಸುತ್ತಿದ್ದರೂ, ತಮ್ಮ ಸುತ್ತ–ಮುತ್ತಲಿನ ಇಂತಹ ಮಕ್ಕಳನ್ನು ಸೇರಿಸಿಕೊಳ್ಳುವಂತೆ ಶಾಲೆಗಳ ಮೇಲೆ ಒತ್ತಡ ಹೇರುತ್ತಿದ್ದರೂ, ಶಾಲೆಗಳಲ್ಲಿ ತಮ್ಮ ಮಕ್ಕಳಿಗೆ ಸೀಟು ಪಡೆಯುವುದಕ್ಕೆ ಪಾಲಕರಿಗೆ ಸಹಕಾರಿಯಾಗಿದ್ದರೂ, ಇದು ಮಕ್ಕಳ ಹಕ್ಕುಗಳಿಗಾಗಿ ಶಾಲಾ ಅಧಿಕಾರಿಗಳ ಜೊತೆಗಿನ ಹೋರಾಟದ ಒಂದು ಸುದೀರ್ಘ, ಭಯಾನಕ ಯಾತ್ರೆಯ ಕೇವಲ ಒಂದು ಆರಂಭ ಅಷ್ಟೇ. ಇಂದು ನಾವು ಈ ಹೋರಾಟದಿಂದ ನಾಚಿ ದೂರಸರಿದರೆ, ಭವಿಷ್ಯದಲ್ಲಿ ನಾವು ಒಳಗೊಳ್ಳುವ ಸಮಾಜದ ಕನಸು ಕಾಣುವುದನ್ನು ನಿಲ್ಲಿಸಬೇಕಾಗುತ್ತದೆ.

***References***


Sakhuja, S. (2004). Education for All and Learning Disabilities in India. Society for the Study of Peace and Conflict.

https://www.rehabcouncil.nic.in, Learning Disabilities, Rehabilitation Council of India.





**ಅನುಪಮಾ ರೈ** ಅವರು ಬಯೋಟೆಕ್ನಾಲಜಿಯಲ್ಲಿ ಸ್ನಾತಕೋತ್ತರ ಪದವೀಧರರು. ಟಿಇಆರ್‌ಐ, ಸಿಐಐ ಮತ್ತು ಕೆನಡಾದ ಐಡಿಆರ್‌ಸಿಯಂತಹ ಸಂಸ್ಥೆಗಳಲ್ಲಿ ದುಡಿದಿದ್ದಾರೆ. ಈಗ ಅವರು ತಮ್ಮ ಸುಂದರ ಮಗುವಿನ ಆರೈಕೆಯಲ್ಲಿದ್ದಾರೆ. ಅವನ ಹಕ್ಕುಗಳಿಗಾಗಿ ಧ್ವನಿ ಎತ್ತುತ್ತಿದ್ದಾರೆ. ಪ್ರತಿದಿನ ಈ ನಿಟ್ಟಿನಲ್ಲಿ ಜನರನ್ನು ಹೆಚ್ಚು ಸಂವೇದನಾಶೀಲರನ್ನಾಗಿ ಮಾಡುತ್ತಿದ್ದಾರೆ. ಅನುಪಮಾ ಅವರನ್ನು anupma04@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ಬಾಲಕೃಷ್ಣ ಹೊಸಂಗಡಿ** । ಪರಿಶೀಲನೆ: **ಲತಾ ಕೆ ಸಿ**

# ಸಮನ್ವಯತೆ, ವಿಶೇಷ ಅಗತ್ಯಗಳು ಹಾಗೂ ಚಿಂತನಶೀಲ ಶಿಕ್ಷಕರು

ಅನುರಾಧ ನಾಯ್ಡು

## ಪ್ರಸ್ತಾವನೆ

ತರಗತಿಯಲ್ಲಿನ ಪ್ರತಿಯೊಂದು ಮಗುವನ್ನೂ, ಭಾವನಾತ್ಮಕವಾಗಲಿ, ಆರೋಗ್ಯದ ವಿಷಯದಲ್ಲಾಗಲಿ, ಪುನಶ್ಚೇತನದ ಸಂದರ್ಭದಲ್ಲಾಗಲಿ, ಸ್ಪಂದಿಸಿ, ಸಂತೈಸುವುದರಲ್ಲಿ ಶಿಕ್ಷಕರೇ ಮೊದಲ ವ್ಯಕ್ತಿಗಳು. ಆಧುನಿಕ ತರಗತಿ ಕೊಠಡಿಯಲ್ಲಿ ಬಳಸುವ 'ವಿವಿಧತೆ' ಎಂಬುದರ ಅರ್ಥ ವ್ಯಾಪ್ತಿಯೊಳಗೆ ವಿಶೇಷ ಅಗತ್ಯವನ್ನು ಹೊಂದಿದ ಮಕ್ಕಳು, ವೈಕಲ್ಯವುಳ್ಳವರು, ವಲಸಿಗರ ಮಕ್ಕಳು, ಕಡುಬಡವರ ಮಕ್ಕಳು, ಏಕಾಂಗಿ ಪೋಷಕರ ಮಕ್ಕಳು, ದತ್ತು ಪಡೆದ ಮಕ್ಕಳು, ತೀವ್ರ ಕಾಯಿಲೆಯಲ್ಲಿರುವ ಪೋಷಕರ ಮಕ್ಕಳು ಹಾಗೂ ವಿಶೇಷ ಗಮನದ ಅಗತ್ಯವುಳ್ಳ ಇನ್ನೂ ಅನೇಕ ರೀತಿಯ ಮಕ್ಕಳು ಸೇರುತ್ತಾರೆ. ಇಂತಹ ಎಲ್ಲ ಬಗೆಯ ಮಕ್ಕಳನ್ನೂ ಒಳಗೊಳ್ಳಿಸಿಕೊಳ್ಳುವ ಬಹು ಆಯಾಮಗಳ ಪಾತ್ರಕ್ಕೆ ಶಿಕ್ಷಕರನ್ನು ಸಿದ್ಧಪಡಿಸುವ ಬಗ್ಗೆ ಸೇವಾಪೂರ್ವ ಶಿಕ್ಷಕ ತರಬೇತಿಯು ಗಮನ ವಹಿಸಬೇಕು.

## ಸಮನ್ವಯ ಮತ್ತು ವೈವಿಧ್ಯ

ಯುನೆಸ್ಕೋ ಪ್ರಕಾರ ಸಮನ್ವಯವೆಂದರೆ ಮಕ್ಕಳ ಹಾಜರಿ, ಭಾಗವಹಿಸುವಿಕೆ ಹಾಗೂ ಸಾಧನೆಗಳಿಗೆ ಮಿತಿಯನ್ನು ಹೇರುವ ಅಡೆತಡೆಗಳನ್ನು ನಿವಾರಿಸಲು ಮಕ್ಕಳಿಗೆ ನೆರವಾಗುವ ಒಂದು ಪ್ರಕ್ರಿಯೆ. ಯುನೆಸ್ಕೋದ ಪ್ರಕಾರ ಹೊರಭಾಗದಲ್ಲೇ ಉಳಿದು ಬಿಡುವ ಸಾಧ್ಯತೆಯಿರುವ ಮಕ್ಕಳೆಂದರೆ ತೀರಾ ಬಡಕುಟುಂಬದವರು, ವಿಶಿಷ್ಟ ಧಾರ್ಮಿಕ, ಸಾಂಸ್ಕೃತಿಕ ಅಥವಾ ಜನಾಂಗೀಯ ಗುಂಪಿನ ಮಕ್ಕಳು, ಆದಿವಾಸಿ ಸಮುದಾಯದ ಮಕ್ಕಳು, ಅಥವಾ ವೈಕಲ್ಯವುಳ್ಳ ವಿಶೇಷ ಅಗತ್ಯ ಬೇಕಾದ ಮಕ್ಕಳು. ಕಲಿಕೆಯಲ್ಲಿ ಮಕ್ಕಳ ಭಾಗವಹಿಸುವಿಕೆಯನ್ನು ತಡೆಯುವ ವಿಷಯಗಳು ಭೌತಿಕವಿರ-ಬಹುದು, ತಾಂತ್ರಿಕವಾಗಿರಬಹುದು, ಆರ್ಥಿಕವಾಗಿರಬಹುದು, ಅಥವಾ ದೃಷ್ಟಿಕೋನಕ್ಕೆ ಸಂಬಂಧಿಸಿದ್ದಾಗಿರಬಹುದು, ಇಲ್ಲವೇ ಮಕ್ಕಳನ್ನು ಶಾಲೆಯಲ್ಲಿ ಇರಿಸಿಕೊಳ್ಳಲು ಆಗದೇ ಇರುವ ಶಾಲೆಗಳ ಅಸಾಮರ್ಥ್ಯವೂ ಆಗಿರಬಹುದು. ಸಮನ್ವಯ ಶಿಕ್ಷಣವು ಮಾನವ ವೈವಿಧ್ಯತೆಗಳನ್ನು ಸ್ವೀಕರಿಸುವ ದೃಢವಾದ ಬದ್ಧತೆಯುಳ್ಳ ಒಂದು ಪ್ರಕ್ರಿಯೆ ಎಂದು ಐನ್ಸ್ಕೋ, ಹಾಗೂ ಬೂತ್ ಅವರು ವಿವರಿಸುತ್ತಾರೆ. ಅವರ ಪ್ರಕಾರ, ಶಾಲೆಗಳು ತಮ್ಮ ವಿದ್ಯಾರ್ಥಿಗಳ ವೈವಿಧ್ಯತೆಯನ್ನು ಮೆಚ್ಚಿಕೊಂಡಾಗ ಮಕ್ಕಳೊಳಗಿರುವ ಮೌಲ್ಯಗಳನ್ನೂ ಗುರುತಿಸಲು ಪ್ರಾರಂಭಿಸುತ್ತಾರೆ. ವಿದ್ಯಾರ್ಥಿಗಳ ವೈವಿಧ್ಯತೆಗೆ ಒತ್ತು ಕೊಡುವುದೆಂದರೆ, ಶಾಲೆಗಳು ವಿದ್ಯಾರ್ಥಿಗಳನ್ನು ಸಮ್ಮಿಶ್ರ ಕಲಿಕಾ ಗುಂಪುಗಳಲ್ಲಿ ಪರಸ್ಪರ ಸಹಕಾರದಿಂದ ಸಕ್ರಿಯವಾಗಿ ಒಗ್ಗೂಡಿ ಕಲಿಯುವುದಕ್ಕೆ ಅವಕಾಶ ಕೊಡುತ್ತವೆ ಎಂದೇ ಅರ್ಥ. ಎಲ್ಲಾ ಬಗೆಯ ವಿದ್ಯಾರ್ಥಿಗಳನ್ನೂ ಒಳಗೊಳಿಸಿಕೊಳ್ಳುವ ಶಾಲೆಗಳ ಈ ಪ್ರಕ್ರಿಯೆಯು ಇಡೀ ಸಮುದಾಯದ ಹಂತಕ್ಕೆ ವ್ಯಾಪಿಸಿ ತಾರತಮ್ಯದ ಎಲ್ಲಾ ವಿಧಾನಗಳನ್ನೂ ಮತ್ತು ಪ್ರತ್ಯೇಕತೆಗಳನ್ನೂ ಅಲ್ಲಗಳೆದಂತೆ ಆಗುತ್ತದೆ. (ಐನ್ಸ್ಕೋ, ಬೂತ್ ಹಾಗೂ ಡೈಸನ್, 2006). 'ಸಮನ್ವಯ ಶಿಕ್ಷಣ' ಎಂಬ ಈ ಪರಿಭಾಷೆ ಇತ್ತೀಚೆಗೆ ರೂಪುಗೊಂಡಿದ್ದು, ಈಗ ಸಾಮಾನ್ಯ ಶಾಲೆಗಳಲ್ಲಿಯೂ ಪ್ರಾರಂಭವಾಗಿರುವ ವಿಶೇಷ ಅಗತ್ಯದ ಶಿಕ್ಷಣಕ್ಕೆ ಸಮನಾಗಿದೆ. ಸಮಾನ ಹಕ್ಕು ಅವಕಾಶಗಳಿಗಾಗಿ ನಡೆದ ವಿಶೇಷ ಅಗತ್ಯವುಳ್ಳವರ ವ್ಯಾಪಕ ಆಂದೋಲನದ ಹಿನ್ನೆಲೆಯಲ್ಲಿ ಅಂತಹವರಿಗಾಗಿ ಪ್ರತ್ಯೇಕ ಶಾಲೆಗಳನ್ನು ನಡೆಸುವುದೂ ಸಮರ್ಪಕವಲ್ಲ ಎಂಬ ತಿಳುವಳಿಕೆ ಉಂಟಾಗಿ ಒಳಗೊಳ್ಳುವ ವ್ಯವಸ್ಥೆ ಜಾರಿಗೆ ಬಂದಿತು. ಈ ಹೊಸ ಅಗತ್ಯಕ್ಕೆ ಶಾಲೆಗಳು ಹೊಂದಿಕೊಳ್ಳಬೇಕೆಂಬ ಬೇಡಿಕೆ ಹುಟ್ಟಿಕೊಂಡು, ಅದಕ್ಕನುಸಾರವಾಗಿ ಶಿಕ್ಷಕರ ತರಬೇತಿಯಲ್ಲಿ ಬದಲಾವಣೆಯ ನಿರೀಕ್ಷೆಯನ್ನು ಹೆಚ್ಚಿಸಿದೆ. ಈಗ ಒಳಗೊಳ್ಳುವ ಶಿಕ್ಷಣವೆಂದರೆ ಕೇವಲ ವೈಕಲ್ಯದ ವಿಚಾರಕ್ಕೆ ಸೀಮಿತವಾಗದೆ ವಿವಿಧ ಸಾಂಸ್ಕೃತಿಕ, ಆರ್ಥಿಕ ಹಾಗೂ ಜನಾಂಗೀಯ ಹಿನ್ನೆಲೆಗಳುಳ್ಳ ಎಲ್ಲ ರೀತಿಯ ದುರ್ಬಲ ಗುಂಪುಗಳ ಮಕ್ಕಳನ್ನೂ ಒಳಗೊಳ್ಳುವಂಥದ್ದು ಎಂದು ಗುರುತಿಸಲಾಗಿದೆ. ಇಂತಹ ಒಂದು ಒಳಗೊಳ್ಳುವ ತರಗತಿಯಲ್ಲಿ ಶಿಕ್ಷಕರು ಆತ್ಮವಿಶ್ವಾಸದಿಂದ ಕಾರ್ಯನಿರ್ವಹಿಸಲು ಸಾಧ್ಯವಾಗುವಂತೆ ಸೇವಾಪೂರ್ವ ಶಿಕ್ಷಕರ ಶಿಕ್ಷಣ ತರಬೇತಿಗೆ ಹೊಸ ಪರಿಕಲ್ಪನೆಯನ್ನು ಒದಗಿಸುವುದು ಸಾಧ್ಯ. ಇಂತಹ ತರಬೇತಿಯು ಸೂಕ್ಷ್ಮ ಒಳನೋಟದಿಂದ ಅಭ್ಯರ್ಥಿಗಳಿಗೆ ಆತ್ಮಾವಲೋಕನಕ್ಕೆ ಅವಕಾಶ ಒದಗಿಸಿ ಕೆಲಸದ ಸಾಮರ್ಥ್ಯದ ಬಗ್ಗೆ ಆತ್ಮವಿಶ್ವಾಸವನ್ನೂ, ಸ್ಥೈರ್ಯವನ್ನೂ ಅಥವಾ ತಮ್ಮದೇ ಆದ ಪ್ರಭಾವದ ಬಗ್ಗೆ ನಂಬಿಕೆಯನ್ನು ಪಡೆಯುವುದಕ್ಕೆ ನೆರವಾಗಬೇಕು. ವೈಕಲ್ಯಗಳಿರುವ ಮಕ್ಕಳ ಸಹಿತ ವಿವಿಧ ಹಿನ್ನೆಲೆಯಿಂದ ಬರುವ ಮಕ್ಕಳೊಂದಿಗೆ ಹಾಗೂ ಅವರ ಕುಟುಂಬಗಳೊಂದಿಗೆ ಸಂವಹನ ಮಾಡುವ ಅವಕಾಶವು ಶಿಕ್ಷಕರಿಗೆ ತಮ್ಮ ಮನಸ್ಸನ್ನು ತೆರೆದು ಮಕ್ಕಳ ಜಗತ್ತಿನೊಳಗೆ ನೋಡಲು ಹಾಗೂ ತಮ್ಮ ನಂಬಿಕೆಗಳ ಪ್ರಪಂಚದಲ್ಲಿ ಕಟ್ಟಿಕೊಂಡ ಪೂರ್ವಾಗ್ರಹಗಳನ್ನು ಕತ್ತರಿಸಿಹಾಕಲು ಅನುವು ಮಾಡುತ್ತದೆ. ಶಿಕ್ಷಕರ ತರಬೇತಿಯಲ್ಲಿ ಆವಿಷ್ಕಾರವೇ ಕಲಿಕೆಯ ಹೃದಯವಾಗಬೇಕು; ವಿವಿಧ ಪ್ರದೇಶಗಳಲ್ಲಿ ವಿಶೇಷ ಅಗತ್ಯವುಳ್ಳವರ ಸೌಲಭ್ಯಗಳ ಕುರಿತಾದ ಹೋರಾಟಗಾರರ ಹಾಗೂ ಪ್ರತಿಪಾದಕರ ಜೊತೆಗೆ ಸಂವಾದಗಳನ್ನು ಏರ್ಪಡಿಸಬೇಕು; ಇದು ದೀರ್ಘಾವಧಿಯ ಪರಿಣಾಮ ಉಂಟು ಮಾಡುವುದಲ್ಲದೆ ಪ್ರಸ್ತುತ ಶಿಕ್ಷಣದಲ್ಲಿರುವ ನೈಜ ಸವಾಲುಗಳನ್ನು ಕಣ್ಣೆದುರು ನಿಲ್ಲಿಸುತ್ತದೆ.

ಇತ್ತೀಚಿನ ದಶಕಗಳಲ್ಲಿ ಅನೇಕ ಮಂದಿ ವಿಶೇಷ ಅಗತ್ಯವುಳ್ಳವರು ತಮ್ಮ ಕಾರ್ಯಗಳ ಮೂಲಕ ಸಮಾಜದಲ್ಲಿ ವೈಕಲ್ಯವುಳ್ಳವರನ್ನೂ ಒಳಪಡಿಸಿಕೊಳ್ಳುವ ಮನೋ-ಭಾವವನ್ನು ಸೃಷ್ಟಿಸುವ ಮೂಲಕ ಬದಲಾವಣೆಯ ಹರಿಕಾರರೆನಿಸಿ ಆದರ್ಶ ಮಾದರಿಗಳಾಗಿದ್ದಾರೆ. ಸಮಾಜದ ಮುಖ್ಯ ವಾಹಿನಿಯಲ್ಲಿ ಅರಿವಿನ ಸೇತುವೆಯನ್ನು ಕಟ್ಟಲು ವಿಶೇಷ ಅಗತ್ಯವುಳ್ಳವರ ಹಕ್ಕುಗಳ ಪ್ರತಿಪಾದಕರು ಮಾದರಿಯಾದ ಪ್ರಯತ್ನಗಳನ್ನು ನಡೆಸುತ್ತಿದ್ದಾರೆ. ಎರಡೂವರೆ ದಶಕಗಳಿಂದ ಈ ಹೋರಾಟದಲ್ಲಿ ಕಾರ್ಯ ಪ್ರವೃತ್ತರಾಗಿರುವ ಪ್ರಸಿದ್ಧ ಜಾವೇದ್ ಅಬಿದಿ ಅವರ ಅವಿರತ

ಪ್ರಯತ್ನಗಳ ಫಲವಾಗಿ ವಿಶೇಷ ಅಗತ್ಯವುಳ್ಳ ವ್ಯಕ್ತಿಗಳ ಹಕ್ಕುಗಳ ಕಾಯಿದೆ (2016) (Rights of Persons with Disability Act - 2016) ಅಂಗೀಕಾರವಾಯಿತು. ವಿಶೇಷ ಅಗತ್ಯವುಳ್ಳವರ ಹಕ್ಕುಗಳಿಗಾಗಿ ಹೋರಾಡುವ ಮತ್ತೊಬ್ಬ ಉಲ್ಲೇಖನೀಯ ವ್ಯಕ್ತಿ ಅಂಜಲಿ ಅಗರ್ವಾಲ್, ವಿಶೇಷ ಅಗತ್ಯವುಳ್ಳವರಿಗೆ ಸಮಾಜದಲ್ಲಿ ಹೆಚ್ಚಿನ ಸೌಲಭ್ಯಗಳಿಗಾಗಿ ಭಾರತ ಸರಕಾರದ ಮಟ್ಟದಲ್ಲಿ ಅವಿರತವಾಗಿ ಶ್ರಮಿಸಿದ್ದಾರೆ. ಇತ್ತೀಚೆಗೆ ಸ್ಮಿತಾ ಸದಾಶಿವನ್ ಅವರು ವಿಶೇಷ ಅಗತ್ಯವುಳ್ಳವರ ಮತದಾನದ ಹಕ್ಕಿಗೆ ಚ್ಯುತಿಯಾಗದಂತೆ, ಮತ್ತು ಅವರ ಮತಗಳನ್ನೂ ಪರಿಗಣಿಸುವಂತೆ ಭಾರತದ ಚುನಾವಣಾ ಆಯೋಗದೊಂದಿಗೆ ವ್ಯವಹರಿಸಿ ಯಶಸ್ವಿಯಾಗಿದ್ದಾರೆ. ಕೊನೆಯದಾಗಿ ಭಾವನಾ ಬೊಟ್ಟ ಅವರು ಅಂತರ್ಜಾಲದಲ್ಲಿ "ಕನೆಕ್ಟ್ ಸ್ಪೆಶಲ್" ('Connect Special') ಎಂಬ ವಾರ್ತಾ ಪತ್ರವೊಂದನ್ನು ಪ್ರಕಟಿಸುತ್ತಿದ್ದು ವೈಕಲ್ಯವುಳ್ಳವರ ಸೌಲಭ್ಯಗಳ ಪರ ಪ್ರತಿಪಾದಿಸುವವರಿಗೆ ಹೊಸ ವಿಚಾರಗಳನ್ನೂ ಆಲೋಚನೆಗಳನ್ನೂ ತಲುಪಿಸುತ್ತಿದ್ದಾರೆ.

ಈ ಆದರ್ಶಪ್ರಾಯ ಹೋರಾಟಗಾರರಿಂದ ಸೇವಾಪೂರ್ವ ಶಿಕ್ಷಕ ತರಬೇತಿ ಹೊಂದುತ್ತಿರುವವರು ಮಾತ್ರವಲ್ಲದೆ ಎಲ್ಲಾ ಶಿಕ್ಷಕರೂ ಅರಿಯಬೇಕಾದುದು ಇದೆ. ಶಿಕ್ಷಣವು ಎಲ್ಲವನ್ನೂ ವ್ಯಾಪಿಸುವ ಗುಣವನ್ನು ಹೊಂದಿರುವುದರಿಂದ ವಿಶೇಷ ಅಗತ್ಯಗಳನ್ನು ಹೊಂದಿರುವ ಜನರ ಜೀವನಾನುಭವಗಳಿಂದ ಸೇವಾಪೂರ್ವ ಶಿಕ್ಷಕರ ತರಬೇತಿಯನ್ನೂ ಸಮೃದ್ಧಗೊಳಿಸಲು ಸಾಧ್ಯವಿಲ್ಲವೇ?

**21ನೇ ಶತಮಾನದಲ್ಲಿ ಆತ್ಮಾವಲೋಕನ ಹಾಗೂ ಭೋಧನೆ:**

ಒಬ್ಬನು ಆಲೋಚಿಸುವ ಕುರಿತು ಯೋಚಿಸಿದಾಗ ಅವನು ತನ್ನ ಆಲೋಚನೆಯ ಬಗ್ಗೆ ಮಾತ್ರವಲ್ಲದೆ ಆಲೋಚಿಸುವ ಪ್ರಕ್ರಿಯೆಯ ಕುರಿತೂ ಅರಿವು ಹೊಂದುತ್ತಾನೆ/ಳೆ. ಡೆಕಾರ್ಟ್‌ನ ಪ್ರಖ್ಯಾತ ಉಲ್ಲೇಖ "ನಾನು ಯೋಚಿಸುತ್ತೇನೆ, ಆದ್ದರಿಂದಲೇ ನಾನು ಇದ್ದೇನೆ" (I think, therefore I am') ಎಂಬುವುದು ಆತ ತನ್ನ ಅಸ್ತಿತ್ವಕ್ಕೆ ತನ್ನ ಆಲೋಚನೆಯನ್ನೇ ಸಾಕ್ಷಿ ಎಂದು ಪರಿಗಣಿಸಿದ್ದನೆಂದು ಸೂಚಿಸುತ್ತದೆ. ಸ್ವಂತಿಕೆಯ ಕೇಂದ್ರ ಬಿಂದುವೇ ಈ ರೀತಿಯ ಚಿಂತನಶೀಲ ಆಲೋಚನೆ, ಮತ್ತು ಮನುಷ್ಯನನ್ನು ಮನುಷ್ಯತ್ವ ಉಳ್ಳವನನ್ನಾಗಿ ಮಾಡುವುದೂ ಇದೇ ಆಲೋಚನೆಯೇ. ಈ ಆಲೋಚನೆಯಲ್ಲಿರುವ ಮನುಷ್ಯತ್ವದ ಅಂಶವನ್ನು ತರಗತಿ ಕೊಠಡಿಯಲ್ಲಿ ಕೆಲಸಕ್ಕೆ ಉಪಯೋಗಿಸಬಹುದೇ? ಬಹು ವಿಧದ ವಿದ್ಯಾರ್ಥಿಗಳ ಅಪಾರ ಸಾಧ್ಯತೆಗಳುಳ್ಳ ಒಂದು ಇಸ್ಪೀಟು ಎಲೆಗಳ ಕಟ್ಟು ದೊರೆತ ಶಿಕ್ಷಕರು ತಮ್ಮ ಆಟದ ಗೆಲುವಿನ ಸಾಧ್ಯತೆಯನ್ನು ಆಕಸ್ಮಿಕವೆಂದು ಪರಿಗಣಿಸಬಾರದು.

ಇಂದು ಸೆಲ್‌ಫೋನ್‌ಗಳು ಹಾಗೂ ಅಂತರ್ಜಾಲ ತಂತ್ರಜ್ಞಾನದ ವ್ಯಾಪಕ ಬಳಕೆಯಿಂದಾಗಿ ತರಗತಿಯೇ ಕಲಿಯುವ ಜಾಗ ಮತ್ತು ಶಿಕ್ಷಕನು ಎಲ್ಲಾ ಜ್ಞಾನಗಳನ್ನೂ ಹೊಂದಿರುವ ನಡೆದಾಡುವ ಪುಸ್ತಕ ಭಂಡಾರವೆಂಬ ಕಲ್ಪನೆಗೆ ಸವಾಲು ಎದುರಾಗಿದೆ. ಒಂದು ಪುಟ್ಟ ಮಗುವು ಕೂಡಾ ಇಂದು ಸ್ಮಾರ್ಟ್‌ಫೋನ್‌ನ ಗುಂಡಿ ಒತ್ತಿ ತನಗೆ ಇಷ್ಟವಾದ ಯೂಟ್ಯೂಬ್‌ನ ವೀಡಿಯೋ ನೋಡಲು ಶಕ್ತವಾಗಿದೆ. ವಿದ್ಯಾರ್ಥಿಗಳು ಅಂತರ್ಜಾಲದಿಂದ ಮಾಹಿತಿಯನ್ನು ತಿಳಿಯುವಲ್ಲಿ ಹೆಚ್ಚು ಪ್ರವೀಣರಾಗುತ್ತಿದ್ದಂತೆ, ಡಿಜಿಟಲ್ ತಂತ್ರಜ್ಞಾನದ ಮೂಲಕ ಮನೆಯಲ್ಲೇ ಮಾಹಿತಿ ಸಂಚಯನವಾಗುತ್ತಿರುವುದರಿಂದ ಶಿಕ್ಷಕರು 'ವಿದ್ಯಾರ್ಥಿ ಕೇಂದ್ರಿತ ತರಗತಿ ಕೊಠಡಿಯು ಹಿಮ್ಮೊಗವಾಗಿದೆ' (student-centric flipped classroom) ಎಂದು ಮಾತನಾಡಿ–ಕೊಳ್ಳುತ್ತಿದ್ದಾರೆ. ಈ ಪ್ರವೃತ್ತಿಗಳು ಪ್ರಪಂಚ ಬದಲಾಗುತ್ತಿದ್ದು ಕಲಿಕೆಯಲ್ಲಿ ವೈವಿಧ್ಯತೆ ಉಂಟಾಗಿರುವ ಸೂಚನೆಯಾಗಿದೆ.

**ಮುಂದಿನ ದಾರಿ ಶಿಕ್ಷಕರ ಆತ್ಮಾವಲೋಕನವೇ?**

1990ರ ದಶಕದಲ್ಲಿ ಶಿಕ್ಷಕರು ತರಗತಿ ಕೊಠಡಿಯ ಕಾರ್ಯಕ್ರಮದ ಕುರಿತು ನಡೆಸಿದ ಸಂಶೋಧನೆಯು, ಶಿಕ್ಷಕ ತನ್ನ ಪಾತ್ರವನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕಿದ್ದರೆ ನಿರಂತರ ಆತ್ಮಾವಲೋಕನ ಹಾಗೂ ಚಿಂತನೆಯ ಮೂಲಕ ಉಂಟಾಗುವ ಆತ್ಮವಿಮರ್ಶೆ ಅಗತ್ಯ ಎಂಬುದನ್ನು ತೋರಿಸಿದೆ. ಬೋಧನೆಯ ಕುರಿತಾದ ಜ್ಞಾನವನ್ನು ರೂಪಿಸುವುದರಲ್ಲಿ ಶಿಕ್ಷಕರ ಪಾತ್ರ ಪ್ರಧಾನ ಎಂದು 1980ರ ದಶಕದಲ್ಲೇ ಐಸ್ನರ್ ಅವರು ಹೇಳಿದರು (ಐಸ್ನರ್ 1985). ಜ್ಞಾನದ ಸೃಷ್ಟಿಯಲ್ಲಿ ಪ್ರಧಾನ ಪಾತ್ರವಹಿಸುವ ಆತ್ಮಾವಲೋಕನವು ಕಾರ್ಯಮಗ್ನವಾಗಿರುವಾಗಿನ ಆಲೋಚನೆ ಹಾಗೂ ಕಾರ್ಯದ ಕುರಿತಾಗಿನ ಆಲೋಚನೆ ಇವೆರಡನ್ನೂ ಒಳಗೊಂಡಿದೆ. ಇದರಲ್ಲಿ ಮೊದಲನೆಯದರ ಬಗ್ಗೆ ಹೇಳುವುದಾದರೆ ಓರ್ವ ಕಾರ್ಯಪ್ರವೃತ್ತರಾಗಿದ್ದಾಗ ನಿರಂತರ ಆಲೋಚಿಸುತ್ತಾ ಕ್ರಿಯಾಶೀಲವಾಗಿರುವುದು. ಸಂಕ್ಷಿಪ್ತವಾಗಿ ಹೇಳುವುದಾದರೆ ಚಿಂತನೆಯು ಹೆಚ್ಚು ಸಮರ್ಥ ಕಾರ್ಯಮಗ್ನತೆಗೆ ಕಾರಣವಾಗುತ್ತದೆ. (ಶಾನ್, 1983). ಚಿಂತನಾತ್ಮಕ ಬೋಧನೆಯೆಂದರೆ ಶಿಕ್ಷಕರು ತಮ್ಮ ಪಾಠವನ್ನು, ಬೋಧನೆಯ ವಿಧಾನ ಹಾಗೂ ಅದರ ಫಲಿತಾಂಶವನ್ನು ವಿಶ್ಲೇಷಣೆಗೆ ಒಳಪಡಿಸಿ, ಅದರಿಂದ ಹೊರಬರುವ ಫಲಿತಾಂಶವನ್ನು ಹಾಗೂ ಒಳನೋಟವನ್ನು ವಿಶ್ಲೇಷಣೆಗೆ ಹಾಗೂ ಒಳನೋಟವನ್ನು ವಿದ್ಯಾರ್ಥಿಗೆ ಬೋಧನೆಯ ಅನುಭವವು ವೃದ್ಧಿಯಾಗುವಂತೆ ಉಪಯೋಗಿಸುವುದು. ಹಾಬ್ಸನ್ ಅವರು ಈ ಪ್ರಕ್ರಿಯೆಯನ್ನು "ತನ್ನದೇ ಪ್ರಯಾಣದ ಶಿಕ್ಷಕಿಯ ಕತೆ" ಎಂದು ವರ್ಣಿಸುತ್ತಾರೆ. ಇದನ್ನು "ಶಿಕ್ಷಕರಾಗಿ ಜೀವನದ ಬಗೆಗಿನ ಅನುಭವಾತ್ಮಕ ಒಳನೋಟ" ಎಂದೂ ಅವರು ಹೇಳುತ್ತಾರೆ. (ಬರ್ನಾರ್ಫೋರ್ಡ್, ಫಿಶರ್ ಮತ್ತು ಹಾಬ್ಸನ್ 2001). ಹೀಗಾಗಿ ಈ ಪ್ರಕ್ರಿಯೆಯಲ್ಲಿ ಶಿಕ್ಷಕರ ಆತ್ಮಾವಲೋಕನ ಅಥವಾ ಸ್ವವಿಮರ್ಶೆಯು ಆವರ್ತನಾ ಸ್ವರೂಪದ್ದಾಗಿದ್ದು ಪದೇಪದೇ ನಡೆಯುವಂತಹದ್ದಾಗಿದೆ. ತನ್ನನ್ನು ತಾನು ನಿರ್ಭಾವುಕತೆಯಿಂದ ಪರಿಶೀಲಿಸಿಕೊಳ್ಳಲು ಅವರು ಮತ್ತೆ ಮತ್ತೆ ಅಲ್ಲಿಗೇ ಬಂದು ಕಾರ್ಯಮಗ್ನರಾಗುತ್ತಾರೆ.

**ಸಮನ್ವಯ ಮತ್ತು ಆತ್ಮಾವಲೋಕನದ ಶಿಕ್ಷಕ/ಕಿ**

ಒಂದು ಸಮನ್ವಯ ತರಗತಿಯಲ್ಲಿರುವ ಆತ್ಮಾವಲೋಕನ ಮಾಡುವ ಪ್ರತಿಯೊಬ್ಬ ಶಿಕ್ಷಕ/ಕಿಯೂ ಕಲಿಕೆಗೆ ಸಹಾಯ ಮಾಡುವ, ಪುನಶ್ಚೇತನದ ಮಾರ್ಗೋಪಾಯಗಳನ್ನು ತಿಳಿಸಿಕೊಡುವ ಸ್ನೇಹಿತ/ತೆಯಾಗಿ, ಜೀವನದ ವಿದ್ಯೆಗಳನ್ನು ಕಲಿಸಿಕೊಡುವ ಮಾರ್ಗದರ್ಶಕ/ಕಿಯಾಗಿ ಹಾಗೂ ಉತ್ಸಾಹವನ್ನು ತುಂಬುವ ಪ್ರೇರಕ/ಕಿಯಾಗಿ ಕೆಲಸ ಮಾಡುತ್ತಾರೆ. ಸದಾಕಾಲ ಗಮನದ ಕೇಂದ್ರಬಿಂದುವಾಗಿ, ಅತ್ಯುನ್ನತ ಅಧಿಕೃತತೆ ಉಳ್ಳವರಾಗಿ, ಎಲ್ಲರೂ ಪರಿಹಾರಕ್ಕೆ ಎದುರು ನೋಡುವ ಆಕರ ಕೋಶವಾಗಿ, ಎಲ್ಲರನ್ನೂ ಒಳಗೊಳಿಸಿಕೊಂಡೇ ಮುನ್ನಡೆಯಬೇಕಾದ ಅವರ ನಿಜರೂಪವೇ ಬಾಹ್ಯದಲ್ಲೂ ಪ್ರತಿಬಿಂಬಿತವಾಗಿರಬೇಕಾಗುತ್ತದೆ. ಆತ/ಕೆ ವಿದ್ಯಾರ್ಥಿಯ ಬೆಳವಣಿಗೆಗೆ ದಾರಿಯನ್ನು ತೋರಿಸುವ ಆದರ್ಶ ವ್ಯಕ್ತಿ ಮಾತ್ರವಲ್ಲದೆ ತನ್ನ ಬೋಧನೆ ಹಾಗೂ ಮಾರ್ಗದರ್ಶನದ ಪರಿಧಿಯೊಳಗೆ ವಿವಿಧ ಹಿನ್ನೆಲೆಗಳಿಂದ ಬಂದ ಎಲ್ಲಾ ಮಕ್ಕಳನ್ನೂ ಒಳಪಡಿಸಿಕೊಳ್ಳುವ ನೈತಿಕ ಜವಾಬ್ದಾರಿಯನ್ನೂ ಹೊಂದಿದ್ದಾನೆ/ಳೆ.

ಇಲ್ಲಿ ಆಧುನಿಕ ಭಾರತದ ಒಂದು ಮಾದರಿ ನಗರ ಪ್ರದೇಶದ ಶಾಲೆಯಲ್ಲಿ ಕಲಿಯುತ್ತಿರುವ ವಿವಿಧ ಹಿನ್ನೆಲೆಗಳ ಪ್ರಾತಿನಿಧಿಕ ರೂಪದಲ್ಲಿ ಕಾಣಿಸುವ ಕೆಲವು ಮಕ್ಕಳ ಯಶೋಗಾಥೆಗಳಿವೆ. ಇವೆಲ್ಲವೂ ನಿಜ ಜೀವನದ ಕಥೆಗಳಾಗಿದ್ದು, ಆ ಮಕ್ಕಳಿಗೆ ತಮ್ಮ ಶಿಕ್ಷಕರಿಂದ ಮುಕ್ತ ಸ್ವಾಗತವನ್ನೂ ತಮ್ಮ ಮಕ್ಕಳಿಗೆ ಉಜ್ವಲ ಭವಿಷ್ಯ ರೂಪಿಸಬೇಕೆಂಬ ಬಯಕೆಯಿಂದ ಅವರ ಪೋಷಕರು ತೋರಿಸಿದ ಧೈರ್ಯವನ್ನೂ ಪ್ರಕಟಪಡಿಸುತ್ತವೆ.

ಈ ಮೇಲಿನ ಎಲ್ಲ ಮಕ್ಕಳ ಕತೆಗಳಲ್ಲಿಯೂ ಸೂಕ್ಷ್ಮವಾದ ಒಂದು ವಿಷಯವನ್ನು ಗಮನಿಸಬೇಕು ಮಗು, ಶಿಕ್ಷಕಿ ಹಾಗೂ ಪೋಷಕರು ಎಲ್ಲರೂ ಪರಸ್ಪರ ಸಹಕಾರದಿಂದ ಒಂದು ತಂಡವಾಗಿ ಕೆಲಸ ಮಾಡಿದರು. ಈ ಎಲ್ಲಾ ಮಕ್ಕಳ ಪೋಷಕರು ತಮ್ಮ ಮಕ್ಕಳ ಶಿಕ್ಷಕರ ಬಗ್ಗೆ ಪ್ರೀತಿ, ಅಭಿಮಾನ ಹಾಗೂ ಕೃತಜ್ಞತಾಭಾವದಿಂದ ಮಾತನಾಡಿದರು. ಮಗುವಿನ ಶ್ರೇಯೋಭಿವೃದ್ಧಿಯ ಪ್ರತಿಯೊಂದು ಹಂತದಲ್ಲಿಯೂ ಶಿಕ್ಷಕರ ಮಾರ್ಗದರ್ಶನ ಅಮೂಲ್ಯವಾಗಿತ್ತು ಎಂದು ಅವರು ಹೇಳುತ್ತಾರೆ. ಶಿಕ್ಷಕರು ಮಕ್ಕಳ ಬಗ್ಗೆ ಅಪಾರವಾದ ಕಾಳಜಿ ಮತ್ತು ಪ್ರೀತಿಯನ್ನೂ ಹೊಂದಿದ್ದರು. ಪೋಷಕರ ಮಾತುಗಳನ್ನು ಸಂಪೂರ್ಣವಾಗಿ ಕೇಳಿಸಿಕೊಂಡು ಅದಕ್ಕೆ ಸ್ಪಂದಿಸುವ ಭರವಸೆಯನ್ನು ನೀಡುತ್ತಿದ್ದರು. ಪ್ರತಿಯೊಂದು ಯಶಸ್ಸಿನ ಕತೆಗಳ ಹಿಂದೆ ಹೋರಾಟ ಹಾಗೂ ನಿರಾಸೆಯ ಕತೆಗಳೂ ಇವೆ. ಶಾಲೆಯ ಒಳಗೊಳ್ಳುವ ಪ್ರಯತ್ನ ವಿಫಲವಾದ ಉದಾಹರಣೆಯಾಗಿ ನಿಶಾಳ ಕಥೆಯೂ ಒಂದು. ಆರು ವರ್ಷದ ಆ ಹುಡುಗಿಯು ಸ್ವಲೀನತೆ/ತಂತನತೆ (ಆಟಿಸಂ) ಸಮಸ್ಯೆ ಹೊಂದಿದ್ದಾಳೆಂದು ಇತ್ತೀಚೆಗೆ ಪತ್ತೆಯಾಯಿತು. ಪೋಷಕರು ಅವಳನ್ನು ಸಮನ್ವಯ ಶಿಕ್ಷಣವನ್ನು ಅನುಸರಿಸುವಒಂದು ದುಬಾರಿ ಖಾಸಗಿ ಶಾಲೆಗೆ ಸೇರಿಸಿದರು. ಆದರೆ ಆ ಶಾಲೆಗೆ ಅವಳ ಬೇಕು–ಬೇಡಗಳನ್ನು ನಿಭಾಯಿಸುವುದಕ್ಕೆ ಸಾಧ್ಯವಾಗಲಿಲ್ಲ. ಅವಳಿಗೆ ಅವಳ ಪೋಷಕರು ಹಾಗೂ ಅಜ್ಜ–ಅಜ್ಜಿಯರ ಸಹಾಯ ಮತ್ತು ಬೆಂಬಲ ತುಂಬಾ ಇದ್ದರೂ ಸಹಾ ಶಾಲೆಯವರು ಅವಳನ್ನು ಅದೇ ಶಾಲೆಯಲ್ಲಿ ಮುಂದುವರಿಸಲು ಇಷ್ಟಪಡಲಿಲ್ಲ. ಅಧಿಕ ಬೆಂಬಲ ಹಾಗೂ ನೆರವಿನ ಅಗತ್ಯವಿರುವ ಇಂತಹ ಮಕ್ಕಳು ಒಡ್ಡುವ ಸವಾಲನ್ನು ಎದುರಿಸಲು ಇಂತಹ ಶಾಲೆಗಳು ಸಿದ್ಧವಿಲ್ಲದೆ ವಿಫಲವಾಗುತ್ತಿರುವುದು ವಿಷಾದಕರ.

**ಸೇವಾಪೂರ್ವ ಶಿಕ್ಷಕ ತರಬೇತಿಯಲ್ಲಿ ಸಮನ್ವಯ ಹಾಗೂ ಆತ್ಮಾವಲೋಕನ:**

ಶಿಕ್ಷಕರ ತರಬೇತಿ ಕಾರ್ಯಕ್ರಮದಲ್ಲಿ ಶಿಕ್ಷಕರ ಆತ್ಮಾವ–ಲೋಕನವನ್ನೂ ಆ ಕುರಿತಾದ ಸಂಶೋಧನೆಯನ್ನೂ ಅಳವಡಿಸುವ ಅಗತ್ಯವಿದೆಯೇ? ಪಠ್ಯಪುಸ್ತಕಗಳಲ್ಲಾಗಲಿ ಅಥವಾ ಶಿಕ್ಷಣದ ವ್ಯವಸ್ಥೆಯಲ್ಲಾಗಲಿ ಎಲ್ಲೂ ವಿವರಣೆಯಿಲ್ಲದ ಅನೇಕ ಹೊಸ ಸನ್ನಿವೇಶಗಳನ್ನು ನಿಭಾಯಿಸುವುದಕ್ಕೆ ನಾವು ನಮ್ಮ ಹೃದಯ ಮತ್ತು ಮನಸ್ಸುಗಳನ್ನು ತೆರೆಯುವುದು ಬೇಡವೇ?

ಶಿಕ್ಷಕರ ತರಬೇತಿಯ ಸಾಂಪ್ರದಾಯಿಕ ಪದ್ಧತಿಯಲ್ಲಿ ಸೇವಾಪೂರ್ವ ಶಿಕ್ಷಕರು ತಮ್ಮ ವಿದ್ಯಾರ್ಥಿಗಳಿಗೆ ವರ್ಗಾಯಿಸಲು ಅಗತ್ಯವುಳ್ಳ ಪಠ್ಯ ವಿಷಯದ ಜ್ಞಾನವನ್ನು ಪಡೆದುಕೊಳ್ಳುತ್ತಾರೆ. ಪಾಶ್ಚಾತ್ಯ ದೇಶಗಳಲ್ಲಿ ಇತ್ತೀಚೆಗೆ ತರಬೇತಿಯ ಉದ್ದೇಶವು ಶಿಕ್ಷಕರನ್ನು ಕಲಿಕೆಗೆ ಅನುಕೂಲವನ್ನು ಕಲ್ಪಿಸುವವರನ್ನಾಗಿ ಮಾಡುವುದು ಎಂದು ಪರಿಗಣಿಸುತ್ತಾರೆ. ಇದನ್ನು ರಚನಾತ್ಮಕ ವಿಧಾನ

ಆರು ವರ್ಷದ **ಸರೋಜ್** ಒಬ್ಬ ನೇಪಾಳಿ ವಲಸೆ ಕಾರ್ಮಿಕನ ಮಗ. ಅವನು ಆಗಷ್ಟೇ ಸರಕಾರಿ ಅನುದಾನಿತ ಶಾಲೆಯೊಂದರಲ್ಲಿ ಯುಕೆಜಿಗೆ ಸೇರಿದ್ದು ಇಂಗ್ಲಿಷ್, ತಮಿಳು ಹಾಗೂ ಹಿಂದಿ ಭಾಷೆಯನ್ನು ಓದಲು, ಬರೆಯಲು ಕಲಿಯುತ್ತಿದ್ದಾನೆ. ಸಾಮಾನ್ಯವಾಗಿ ಎಲ್ಲಾ ವಲಸೆ ಮಕ್ಕಳಿಗೆ ಇರುವಂಥ ಸಮಸ್ಯೆ ಅವನಿಗೂ ಇದೆ. ಅವನು ಕಲಿಯುತ್ತಿರುವ ಯಾವ ಭಾಷೆಯೂ ಅವನ ಮನೆಯಲ್ಲಿ ಆಡುವ ಭಾಷೆಯಲ್ಲ. ಅವನ ಮಾತೃ ಭಾಷೆ ನೇಪಾಳಿ. ಅವನ ಶಿಕ್ಷಕಿ ಆತನಿಗೆ ಇಷ್ಟವಾಗಿದ್ದಾರೆ; ಅವರ ಹೆಸರು ಹೇಳುವಾಗಲೆಲ್ಲ ಅವನ ಮುಖ ಸಂತೋಷದಿಂದ ಅರಳುತ್ತದೆ.

**ರಾಮ ಮತ್ತು ಅರ್ಜುನರು** ನಾಲ್ಕು ವರ್ಷದ ವಯಸ್ಸಿನ ಅವಳಿ–ಜವಳಿಗಳು. ಚಿಕ್ಕವರಿದ್ದಾಗಲೇ ಅವರನ್ನು ದತ್ತು ಪಡೆದ ಪೋಷಕರು ಈ ಮಕ್ಕಳನ್ನು ಖಾಸಗಿ ಶಾಲೆಯೊಂದಕ್ಕೆ ಸೇರಿಸಿದ್ದಾರೆ. ಇಬ್ಬರೂ ಬೇರೆಬೇರೆ ವಿಭಾಗಗಳಲ್ಲಿ ಇದ್ದಾರೆ. ಇಬ್ಬರು ಪೋಷಕರೂ ವೃತ್ತಿಯಲ್ಲಿದ್ದಾರೆ. ಇವರ ಕುಟುಂಬ ಸಬಲವೂ, ದೊಡ್ಡದೂ ಆಗಿದ್ದರೂ ಈ ಮಕ್ಕಳನ್ನು ನೋಡಿಕೊಳ್ಳುವ ಆಳುಗಳು ಆಗಿಂದಾಗ್ಗೆ ಬದಲಾಗುತ್ತಿರುತ್ತಾರೆ. ಇದರಿಂದಾಗಿ ಇವರೊಡನೆ ಹಾಗೂ ಪೋಷಕರ ಜೊತೆ ಅಕ್ಕರೆ–ಆತ್ಮೀಯತೆ ಪಡೆಯಲು ಈ ಮಕ್ಕಳು ಕಾತರಿಸುತ್ತಿರುತ್ತವೆ. ಇವರಿಗೆ ಭಾವನಾತ್ಮಕವಾಗಿ ನಿರಾಳತೆ ಒದಗಿಸುವ ನಿಟ್ಟಿನಲ್ಲಿ ಶಿಕ್ಷಕರು ಯಶಸ್ವಿಯಾಗಿ, ಮಹತ್ವದ ಪಾತ್ರ ವಹಿಸಿದ್ದಾರೆ.

“ಏಳು ವರ್ಷಗಳ **ಕೀರ್ತನಾ** ಹುಟ್ಟಿನಿಂದಲೇ ಮೆದುಳುವಾತ (ಸೆರೆಬ್ರಲ್ ಪಾಲ್ಸಿ)ಕ್ಕೆ ಒಳಗಾದಳು. ಅವಳು ಕೈಹಿಡಿದು ನಡೆಯಲು ಪ್ರಾರಂಭಿಸಿದ ಕೂಡಲೇ ತಾಯಿ ಅವಳನ್ನು ಒಂದನೇ ತರಗತಿಗೆ ಸೇರಿಸಿದರು. ಈ ಮಗುವಿಗೆ ಸರಿಯಾಗಿ ಮಾತನಾಡಲು ಆಗುತ್ತಿಲ್ಲವಾದರೂ, ಇದರಿಂದ ತರಗತಿಯ ಚಟುವಟಿಕೆಗಳಲ್ಲಿ ಭಾಗವಹಿಸಲು ಅಡ್ಡಿಯೇನೂ ಆಗಿಲ್ಲ. ಅವಳು ಶಿಕ್ಷಕರ ಪ್ರೋತ್ಸಾಹದಿಂದ ಚಿತ್ರಕಲೆ, ನಾಟಕ ಹಾಗೂ ನೃತ್ಯದಂತಹ ಪಠ್ಯೇತರ ಚಟುವಟಿಕೆಗಳಲ್ಲೂ ಭಾಗವಹಿಸುತ್ತಿದ್ದಾಳೆ. ಶಾಲೆಯ ವಾರ್ಷಿಕೋತ್ಸವದಲ್ಲಿ ಅವಳು ವೇದಿಕೆಯಲ್ಲಿ ತನ್ನ ತರಗತಿಯನ್ನು ಪ್ರತಿನಿಧಿಸಿದಳು. ಶಾಲೆಯಲ್ಲಿ ದೊರೆಯುತ್ತಿರುವ ಬೆಂಬಲವು ಅವಳ ಬೆಳವಣಿಗೆಗೆ ತುಂಬ ಸಹಾಯ ಮಾಡಿದೆ. ಆದರೆ ಅವಳಿಗೆ ಶಾರೀರಿಕ ಸಂಬಂಧಿ ಸಮಸ್ಯೆಗಳಿದ್ದು, ಶಾಲಾವಧಿಯ ನಂತರ ಚಿಕಿತ್ಸೆ ಹಾಗೂ ಪುನಶ್ಚೇತನಕ್ಕೆ ಸಂಬಂಧಿಸಿದ ಕಾರ್ಯಗಳನ್ನು ನಿರ್ವಹಿಸಬೇಕಾಗಿದೆ”.

ಆರು ವರ್ಷದ **ಸುಮಂತ್** ಒಬ್ಬ ಬಡಗಿಯ ಮಗ. ಅವನಿಗೆ ಮೂರು ವರ್ಷಗಳಿದ್ದಾಗ ತಾಯಿ ಸ್ತನ ಕ್ಯಾನ್ಸರ್‌ನ ಶಸ್ತ್ರಚಿಕಿತ್ಸೆಗೆ ಒಳಗಾದರು. ಈಗ ಅವರು ಗುಣಮುಖರಾಗಿದ್ದಾರೆ. ಕುಟುಂಬದ ಅಲ್ಪ ಆದಾಯ ತಾಯಿಯ ಶಸ್ತ್ರಚಿಕಿತ್ಸೆಗೆ ವ್ಯಯವಾಯಿತು. ಮಗುವಿಗೆ ನಾಲ್ಕು ವರ್ಷ ಇದ್ದಾಗ ವೈಕಲ್ಯವಿದ್ದ ಅವನ ತಂದೆಗೆ ಪಾರ್ಶ್ವವಾಯು ಬಾಧಿಸಿ ನೆನಪಿನ ಶಕ್ತಿ ಕುಂದಿತು. ಇದರಿಂದ ಶರೀರವೂ ಜರ್ಜರಿತವಾಗಿ ಯಾವುದೇ ದಿನಗೂಲಿಯನ್ನು ಮಾಡುವುದೂ ಅಸಾಧ್ಯವಾಯಿತು. ಸುಮಂತ್ ಈಗ ಸರಕಾರಿ ಶಾಲೆಯೊಂದರಲ್ಲಿ ಕಲಿಯುತ್ತಿದ್ದಾನೆ. ಆ ಶಾಲೆ ಅವನಿಗೆ ಸಂತೋಷ ಕೊಡುತ್ತಿದೆ. ಶಿಕ್ಷಕಿ ಒಳ್ಳೆಯವರು ಎಂದು ಅವನು ಹೇಳುತ್ತಾನೆ. ಶಿಕ್ಷಕಿಗೆ ಅವನ ಮನೆಯ ಸ್ಥಿತಿಗತಿಯ ಅರಿವಿದೆ. ಇಂತಹ ಶಿಕ್ಷಕಿಯನ್ನು ಪಡೆದ ಸುಮಂತ್ ಅದೃಷ್ಟಶಾಲಿಯೇ ಸರಿ.

(Constructivist approach) ಎಂದು ಕರೆಯುತ್ತಾರೆ. ಶಿಕ್ಷಕರು ಬೋಧನೆಯ ಬದಲಾಗಿ ಮಗುವಿನ ಕಲಿಕೆಯನ್ನು ಬೆಂಬಲಿಸುತ್ತಾರೆ; ಅಥವಾ ಹಂತಹಂತವಾಗಿ (Scaffolds) ಮಾರ್ಗದರ್ಶನ ನೀಡುವ ಮೂಲಕ ನೆರವಾಗುತ್ತಾರೆ.(ಸೇಲರ್ ಮತ್ತು ಸ್ಯಾಟಿಕ್ 1992). ವಿಭಿನ್ನ ತರಗತಿಗಳಲ್ಲಿಯೂ ಸಾರುವೆ (Scaffolding) ಮಾದರಿಯನ್ನು ಬಳಸಲಾಗುತ್ತಿದೆ. ಈ ತರಗತಿಯಲ್ಲಿ ಬೇರೆಬೇರೆ ಕಲಿಕೆ ಮಟ್ಟದ, ಬೇರೆ ಬೇರೆ ಸಾಮರ್ಥ್ಯಗಳ ಮಕ್ಕಳಿದ್ದರೂ, ಅವರೆಲ್ಲರ ಪಠ್ಯಕ್ರಮ ಒಂದೇ ತರಹದ್ದಾಗಿರುತ್ತದೆ. ಇಂತಹ ತರಗತಿಯಲ್ಲಿ ಮಕ್ಕಳಿಗೆ ಸಮನ್ವಯ ತತ್ವವನ್ನು ಕೂಡಾ ಅನುಸರಿಸುವ ಸಲುವಾಗಿ ಮಕ್ಕಳ ವಿವಿಧ ರೀತಿಯ ಕಲಿಕೆಯ ಸಾಮರ್ಥ್ಯಗಳಿಗೆ ತಕ್ಕಂತೆ ಕಲಿಸಲು ಪಾಠದ ಸಿದ್ಧತೆ ಹೇಗಿರಬೇಕು, ಕಲಿಸುವ ವಿಧಾನ ಹೇಗಿರಬೇಕು, ಮತ್ತು ಮೌಲ್ಯಮಾಪನ ಹೇಗಿರಬೇಕು ಎಂದು ಸೇವಾಪೂರ್ವ ಶಿಕ್ಷಕರು ಯೋಜನೆಯನ್ನು ಸಿದ್ಧಪಡಿಸುತ್ತಾರೆ. ಆದರೂ ಸೇವಾಪೂರ್ವ ತರಬೇತಿ ಶಿಕ್ಷಕ ಅಥವಾ ಇತರ ಯಾವುದೇ ಶಿಕ್ಷಕರು ತಮ್ಮ ನಂಬಿಕೆಯ ವ್ಯಾಪ್ತಿಯೊಳಗೆ ಬಾರದ ವಿಚಾರಗಳನ್ನು ಮಕ್ಕಳು ತಿಳಿಯಲು ಅವಕಾಶ ನೀಡುವರೆಂದು ನಿರೀಕ್ಷಿಸಲಾಗದು. (ಬಕರ್ ಮತ್ತು ಇತರರು, 2002). ಹೃದಯದ ಕಲಿಕೆಯು ಪಠ್ಯಪುಸ್ತಕಗಳ ವಿಷಯಗಳನ್ನು ಮೀರಿದ್ದಾಗಿದೆ. ದೃಷ್ಟಿಕೋನಗಳು, ಅಭಿಪ್ರಾಯಗಳು, ನಂಬಿಕೆಗಳು ಹಾಗೂ ಮೌಲ್ಯಗಳು ಮುಂತಾದವುಗಳನ್ನು ಹುಡುಕಿ ತಿಳಿದುಕೊಳ್ಳುವ ಬಯಕೆ ಈ ರೀತಿಯದ್ದಾಗಿದೆ. ಜಾಗೃತ ಪ್ರಜ್ಞೆಯ ಆಚೆಗೂ ವ್ಯಕ್ತಿಯನ್ನು ಕುಟುಂಬ ಹಾಗೂ ಸಮುದಾಯದ ರೂಢಿಗಳು ಹಾಗೂ ಸಾಂಸ್ಕೃತಿಕ ಮತ್ತು ಧಾರ್ಮಿಕ ಮೌಲ್ಯಗಳು ಪ್ರಭಾವಿಸುತ್ತವೆ. ಅನೇಕಬಾರಿ ಇಂತಹ ಮೌಲ್ಯಗಳು ಮತ್ತು ತತ್ವಗಳು ವ್ಯಕ್ತಿಯೊಳಗೆ ಸಂಘರ್ಷ ನಡೆಸುತ್ತಿರುತ್ತವೆ. ಆತ್ಮಾವಲೋಕನದ ವೇಳೆ ಈ ಮೌಲ್ಯಗಳೂ, ಆಲೋಚನೆಗಳೂ ಪ್ರತಿಫಲಿತವಾಗುತ್ತವೆ. ದೃಶ್ಯಕಲೆ, ಸಂಗೀತ, ನಾಟಕ ಮುಂತಾದ ಮಾಧ್ಯಮಗಳನ್ನು ಉಪಯೋಗಿಸುವುದರಿಂದ, ವಿಭಿನ್ನ ಸಾಂಸ್ಕೃತಿಕ ಗುಂಪಿನೊಂದಿಗೆ ಕೆಲಸ ಮಾಡಬೇಕಾದ ಸವಾಲುಗಳು, ಗೆಳೆಯರು ಹಾಗೂ ಸಹಪಾಠಿಗಳ ನಡುವಣ ಸಂತೋಷ, ಹೋರಾಟ, ಭಿನ್ನಾಭಿಪ್ರಾಯಗಳು ಹಾಗೂ ಸಾಮ್ಯತೆಗಳ ಕುರಿತಾದ ಚಿಂತನೆಗೆ ದಾರಿ ಮಾಡುತ್ತವೆ. ಹೀಗೆ ಮಾಡುವ ಮೂಲಕ ಯುವ ಸೇವಾಪೂರ್ವ ಶಿಕ್ಷಕರು ಗೋಚರಿಸುವ ಅಥವಾ ಅಗೋಚರ ವೈವಿಧ್ಯತೆಗಳನ್ನು ತಿಳಿದು, ಒಪ್ಪಿಕೊಂಡು ಗೌರವಿಸುವುದನ್ನು ಕಲಿಯುವುದು ಸಾಧ್ಯವಾಗುತ್ತದೆ.

ಒಂದು ತರಗತಿಯಲ್ಲಿ ಸಾಮಾನ್ಯ ವಿದ್ಯಾರ್ಥಿಗಳ ಜೊತೆಗೆ ವಿಶೇಷ ಅಗತ್ಯವುಳ್ಳ ವಿದ್ಯಾರ್ಥಿಗಳಿಗೂ ಕಲಿಸುವ ಆವಿಷ್ಕಾರದ ಕುರಿತು ಶಿಕ್ಷಕರು ಹೊಂದಿರುವ ನಂಬಿಕೆಗಳು ಹಾಗೂ ದೃಷ್ಟಿಕೋನಗಳ ಬಗ್ಗೆಯೂ ನಡೆದಿರುವ ಸಂಶೋಧನೆಗೆ ತುಂಬಾ ಮೌಲ್ಯವಿದೆ. ಇದರಿಂದ ಶಿಕ್ಷಕರ ತಯಾರಿ ಕಾರ್ಯಕ್ರಮಗಳಿಗೆ ಉಪಯೋಗವಾಗುವುದಲ್ಲದೆ ಶಾಲೆಗಳೂ ಸಹ ಪ್ರಸ್ತುತ ಸವಾಲುಗಳನ್ನು ಅರ್ಥಮಾಡಿಕೊಳ್ಳುವಂತಾಗಿ ಸೇವಾಪೂರ್ವ ಹಾಗೂ ಸೇವಾನಿರತ ಶಿಕ್ಷಕರ ತರಬೇತಿ ಮತ್ತು ಪುನರ್ಮನನ ಶಿಕ್ಷಣವನ್ನು ಸುಧಾರಿಸುವ ಮಾರ್ಗವನ್ನು ಕಂಡುಕೊಳ್ಳಲು ಸಹಾಯವಾಗುವುದು. ಶಿಕ್ಷಕರ ಕಾಳಜಿಗಳ ಬಗ್ಗೆ ಗಮನಹರಿಸಲು ಹಾಗೂ ವಿಶೇಷ ಅಗತ್ಯವುಳ್ಳ ವಿದ್ಯಾರ್ಥಿಗಳ ಕುರಿತು ಅವರಿಗಿರುವ ಋಣಾತ್ಮಕ ದೃಷ್ಟಿಕೋನವನ್ನು ಮತ್ತು ಸಮನ್ವಯ ಶಿಕ್ಷಣದ ಬಗೆಗಿನ ಅವರ ಮನೋಧರ್ಮವನ್ನು ಸರಿಪಡಿಸಲು ಸೇವಾಪೂರ್ವ ತರಬೇತಿಯೇ ಅತ್ಯುತ್ತಮ ಸಂದರ್ಭವೆಂದು ಹೆಚ್ಚುಹೆಚ್ಚಾಗಿ ಪ್ರೋತ್ಸಾಹಿಸಲಾಗುತ್ತಿದೆ. ವಿಶೇಷ ಅಗತ್ಯವುಳ್ಳ ವಿದ್ಯಾರ್ಥಿಗಳ ಜೊತೆ ಕೆಲಸ ಮಾಡುವುದು, ವಿಶೇಷ ಅಗತ್ಯವುಳ್ಳವರ ಸೌಲಭ್ಯಗಳನ್ನು ಪ್ರತಿಪಾದಿಸುವವರೊಡನೆ ಸಹಕರಿಸುವುದು, ಹಾಗೂ ವೈಕಲ್ಯವುಳ್ಳವರ ವಿಶೇಷ ಅಗತ್ಯಗಳನ್ನು ಅರಿತುಕೊಳ್ಳಲು, ವರ್ತನೆಗಳನ್ನು ಮೃದುಗೊಳಿಸಲು ಮತ್ತು ಸಮುದಾಯಗಳೊಡನೆ ಸಂವಹನ ನಡೆಸುವುದರ ಜೊತೆಗೆ ನವೀನ ಕಾರ್ಯಕ್ರಮಗಳ ಮೂಲಕ ಸೇವಾಪೂರ್ವ ಶಿಕ್ಷಕರನ್ನು ವಿಶೇಷ ಅಗತ್ಯವುಳ್ಳ ವಿದ್ಯಾರ್ಥಿಗಳೊಡನೆ ಸುಗಮವಾಗಿ ವ್ಯವಹರಿಸಲು ಸಿದ್ಧರಾಗುವಂತೆ ಪ್ರೋತ್ಸಾಹಿಸಲಾಗುತ್ತಿದೆ.

**ವಿದ್ಯಾರ್ಥಿಗಳ ಆತ್ಮಬಲ:**

ಮೇಲೆ ವಿವರಿಸಿದ ಮಕ್ಕಳ ಪ್ರಕರಣಗಳ ಪೈಕಿ ಮೊದಲ ನಾಲ್ವರ ವಿಷಯದಲ್ಲಿಯೂ ಶಾಲೆಯಲ್ಲಿ ಅವರಿಗೆ ಶಿಕ್ಷಕರ ಅಕ್ಕರೆ ಹಾಗೂ ಬೆಂಬಲ ದೊರೆತಿದೆ. ಪ್ರತಿಯೊಂದು ಮಗುವೂ 'ಶಿಕ್ಷಕಿ/ಕ ತನ್ನನ್ನು ತರಗತಿಯ ಒಬ್ಬ ಅಮೂಲ್ಯ ಸದಸ್ಯ ಎಂದು ಅಂಗೀಕರಿಸಿದ್ದಾರೆ' ಎಂಬ ತೃಪ್ತಿ ಸಮಾಧಾನಗಳ ಭಾವವನ್ನು ವ್ಯಕ್ತಪಡಿಸಿದೆ. ಈ ಶಿಕ್ಷಕರ ಮಾರ್ಗದರ್ಶನದಲ್ಲಿ ತಾನು ಯಶಸ್ಸು ಕಾಣುವೆನೆಂಬ ಭರವಸೆ ಆ ಪ್ರತಿಯೊಂದು ಮಗುವಿಗೂ ಇದೆ. ಪ್ರಪಂಚದಲ್ಲಿ ಒಬ್ಬ ವಿದ್ಯಾರ್ಥಿಯಾಗಿ ಆ ಪ್ರತಿಯೊಂದು ಮಗುವೂ ಆತ್ಮಬಲವನ್ನು ಪಡೆದಿದೆ. ಆದರೆ ಸ್ಥಿತಿ–ಗತಿಗಳು ಅಷ್ಟೊಂದು ಸರಳವಲ್ಲವೆಂದು ಆ ಐದನೇ ಮಗುವಿನ ಕತೆ ಹೇಳುತ್ತದೆ. ಆರೋಗ್ಯ ಮತ್ತು ಪುನಶ್ಚೇತನ ಸಂಬಂಧಿತ ಬೆಂಬಲ ಅಗತ್ಯವುಳ್ಳ ಮಕ್ಕಳಿಗೂ ಒಳಗೊಳ್ಳುವ ಸೌಲಭ್ಯದ ವ್ಯಾಪ್ತಿಯೊಳಗಡೆ ಅವಕಾಶ ಕೊಡುವುದನ್ನು ಶಿಕ್ಷಕರು ಪರಿಗಣಿಸಬೇಕೆಂದು ಐದನೇ ಮಗುವಿನ ಸ್ಥಿತಿಯು ಹೇಳುತ್ತಿದೆ. ಇಂತಹ ಮಕ್ಕಳ ವಿಷಯದಲ್ಲಿ ಮನೆಯಲ್ಲೇ ಕಲಿಸುವುದು ಸ್ವಾಗತಾರ್ಹವಾದ ಆಯ್ಕೆಯಲ್ಲ. ಯಾಕೆಂದರೆ ಆಗ ಆ ಮಗು ತನ್ನದೇ ವಯಸ್ಸಿನ ಮಕ್ಕಳ ಒಡನಾಟದಿಂದ ವಂಚಿತವಾಗುತ್ತದೆ. ಆತ್ಮಬಲವೆಂಬುದು ಆತ್ಮಗೌರವ ಅಥವಾ ಆತ್ಮಾಭಿಮಾನಕ್ಕಿಂತ ತುಂಬಾ ಭಿನ್ನವಾದದ್ದು. ಗೆಲ್ಲುವ ಸಾಮರ್ಥ್ಯ ತನಗಿದೆ ಎಂಬ ವಿಶ್ವಾಸದಲ್ಲಿ ನಂಬಿಕೆಯೇ ಆತ್ಮಬಲ. ಇದು ತನ್ನ ಕುರಿತೇ ತನ್ನ ತೀರ್ಮಾನ ಅಥವಾ ಮೌಲ್ಯಮಾಪನಕ್ಕೆ ಸಂಬಂಧಪಟ್ಟಿದೆ. ಆತ್ಮಬಲವು ಯಾವುದೇ ಕಾರ್ಯದಲ್ಲಿ ವ್ಯಕ್ತಿಯನ್ನು ಗೆಲುವಿನತ್ತ ಪ್ರಚೋದಿಸಿ ಪ್ರೇರೇಪಿಸುತ್ತದೆ. ಪರಿಣಾಮವಾಗಿ ವ್ಯಕ್ತಿಗೆ ತನ್ನ ಬಗ್ಗೆಯೇ ಇರುವ ಅಭಿಪ್ರಾಯಗಳು ಬದಲಾಗುತ್ತ ಸಾಗುತ್ತದೆ.

ನಿರ್ದಿಷ್ಟ ಸನ್ನಿವೇಶದಲ್ಲಿ ತನ್ನ ಕಾರ್ಯದ ಪರಿಣಾಮ ಏನು ಎಂಬುದರ ಬಗ್ಗೆ ವ್ಯಕ್ತಿಗೆ ಇರುವ ನಂಬಿಕೆಯೇ 'ಆತ್ಮಬಲ' ಎಂದು ವ್ಯಾಖ್ಯಾನಿಸಬಹುದಾಗಿದೆ. ಒಂದು ಕಾರ್ಯವನ್ನು 'ನಾನು ಮಾಡಬಲ್ಲೆ' ಎಂಬ ಆತ್ಮಬಲವಿದ್ದರೆ ಆ ಕಾರ್ಯ ಸಾಧನೆಗೆ ಹೆಚ್ಚಿನ ಪ್ರೇರಣೆ ದೊರೆಯುತ್ತದೆ.

ನಮ್ಮ ಆತ್ಮಬಲ ಜಾಸ್ತಿಯಿರುವ ಕ್ಷೇತ್ರದಲ್ಲಿ ಅಥವಾ ಕಾರ್ಯದಲ್ಲಿ ಆಯಾ ಕ್ಷೇತ್ರದ ಆದರ್ಶಪ್ರಾಯ ವ್ಯಕ್ತಿಯನ್ನು ಅನುಕರಿಸುವ ಸಾಧ್ಯತೆ ಜಾಸ್ತಿ ಇರುತ್ತದೆ. ಆತ್ಮಬಲವು ಜ್ಞಾನದಿಂದ ಪ್ರೇರಿತವಾಗುವ ಒಂದು ಆಲೋಚನಾ ವಿನ್ಯಾಸವಾಗಿದೆ. ಅದು ವಂಶವಾಹಿಯಿಂದ ಬರುವಂತಹದ್ದಲ್ಲ. ಅನುಕರಿಸುವ ಸಾಮರ್ಥ್ಯವು ಬಾಲ್ಯದಿಂದಲೇ ಪ್ರಾರಂಭಗೊಂಡು ಬದುಕಿನುದ್ದಕ್ಕೂ ಮುಂದುವರೆಯುತ್ತದೆ. ಬಂಡೂರರ ಪ್ರಕಾರ ಆತ್ಮಬಲವು ಬಾಲ್ಯದಲ್ಲಿ ಆದರ್ಶ–ಪ್ರಾಯರಾದ ಮಾದರಿ ವ್ಯಕ್ತಿಗಳನ್ನು ನೋಡುವ ಮೂಲಕ ಮತ್ತು ಸ್ವಂತ ಧನಾತ್ಮಕ ಯಶಸ್ಸಿನ ಅನುಭವದ ಮೂಲಕ ಮಕ್ಕಳಲ್ಲಿ ಬೆಳೆಯುತ್ತದೆ. (ಬಂಡೂರ 1977). ಆದ್ದರಿಂದ ಅಧಿಕ ಆತ್ಮಬಲವನ್ನು ಮತ್ತು ಮನೋಸ್ಥೈರ್ಯವನ್ನು ಹೊಂದಿದ್ದು, ತನ್ನ ಕಾರ್ಯದ ಪರಿಣಾಮಗಳನ್ನು ಅಭಿವೃದ್ಧಿಪಡಿಸುವ ಮತ್ತು ಅವುಗಳ ಮೇಲೆ ನಂಬಿಕೆ ಹೊಂದಿರುವ ಹೆಚ್ಚಿನ ಶಿಕ್ಷಕರು ತಮ್ಮ ಯಶಸ್ಸಿನ ಕುರಿತು ನಂಬುವ ಆತ್ಮವಿಶ್ವಾಸದ ವಿದ್ಯಾರ್ಥಿಗಳನ್ನು ತಯಾರು ಮಾಡುತ್ತಾರೆ. (ಲಾ ಮತ್ತು ಇತರರು 2010). ವಿದ್ಯಾರ್ಥಿಗಳ ಜೀವನದಲ್ಲಿ ಶಿಕ್ಷಕರ ಪ್ರವೇಶವು ಅವರ ಆತ್ಮಗೌರವ, ಆತ್ಮವಿಶ್ವಾಸ

ಹಾಗೂ ಮಾನಸಿಕ ನೆಮ್ಮದಿಯ ಭಾವವನ್ನು ಹೆಚ್ಚಿಸುತ್ತದೆ ಎಂದು ಆತ್ಮಬಲದ ಕುರಿತು ನಡೆಸಿದ ಸಂಶೋಧನೆಗಳು ತೋರಿಸಿವೆ. ಆತ್ಮಗೌರವವೆಂಬುವುದು ಒಬ್ಬನು ತನ್ನ ಬಗ್ಗೆಯೇ ಹೊಂದಿರುವ ಅಭಿಪ್ರಾಯವಾಗಿದೆ. ಆತ್ಮಗೌರವವೆಂಬುವುದು ಸಾಮಾನ್ಯವಾಗಿ ಸ್ಥಿರವಾದ ಭಾವವಾಗಿದ್ದರೂ ಸೋಲು–ಗೆಲುವುಗಳು ಅದರ ಮೇಲೆ ಪರಿಣಾಮ ಬೀರುತ್ತವೆ. ವಯಸ್ಕರಾದವರು ಕೂಡಾ ಸಾಧನೆ ಮಾಡಿದಾಗ ಹಿಗ್ಗುವುದು, ಸೋಲು ಬಂದಾಗ ಕುಗ್ಗುವುದು ಸಾಮಾನ್ಯ ಸಂಗತಿಯಾಗಿದೆ. ಹೀಗಿರುವಾಗ ಒಂದು ಮಗುವನ್ನು ಗುಂಪಿನಿಂದ ದೂರ ಇರಿಸಿದರೆ, ಕಳಂಕ ಹಚ್ಚಿದರೆ, ನಿರ್ಲಕ್ಷ್ಯಕ್ಕೆ ಒಳಪಡಿಸಿದರೆ ಅಥವಾ ನಿಂದನೆಗೆ ಗುರಿಪಡಿಸಿದರೆ ಅಂತಹ ಮಗುವಿಗೆ ಆಗುವಂತಹ ನೋವು ಹಾಗೂ ಮಾನಸಿಕ ಆಘಾತ ಅದರ ಆತ್ಮಗೌರವವನ್ನು ಎಷ್ಟು ಕುಗ್ಗಿಸಬಹುದೆಂದು ನಾವು ಯೋಚಿಸಬಹುದು.

**ಉಪಸಂಹಾರ:**

ಸಮನ್ವಯ ಶಿಕ್ಷಣದಲ್ಲಿ ಪಾತ್ರವಹಿಸಲು ಅಗತ್ಯವಿರುವ ಆತ್ಮಬಲವನ್ನು ನೀಡಿ ತರಬೇತಿ ಹೊಂದುತ್ತಿರುವ ಭಾವಿ ಶಿಕ್ಷಕರನ್ನು ತಯಾರು ಮಾಡುವಲ್ಲಿ ಸೇವಾಪೂರ್ವ ಶಿಕ್ಷಕ ತರಬೇತಿಯು ಮಹತ್ವದ ಪಾತ್ರವನ್ನು ವಹಿಸಬಲ್ಲುದು. ನುರಿತ ಶಿಕ್ಷಕ ತರಬೇತಿದಾರರ ಹಾಗೂ ತಜ್ಞರ ಮಾರ್ಗದರ್ಶನದಲ್ಲಿ, ಬೆಂಬಲಿಸುವ ಮೌಲ್ಯಗಳನ್ನು ಹಾಗೂ ನಂಬಿಕೆಯ ಪದ್ಧತಿಯನ್ನು ಸೃಜನಶೀಲ ಕಲೆಗಳ ಮೂಲಕ ಶೋಧಿಸಿದಾಗ ಆಳವಾದ ಆಲೋಚನೆಗೂ, ಚಿಂತನೆಗೂ ಅವಕಾಶ ಉಂಟಾಗುತ್ತದೆ. ಅಲ್ಲದೆ, ತಾವೇ ವಿಶೇಷ ಅಗತ್ಯವುಳ್ಳವರೂ ಆಗಿರುವ ಸ್ವ–ಪ್ರತಿಪಾದಕರ ಜೊತೆಗಿನ ಸಂವಹನದಿಂದ ಪರಸ್ಪರ ಸಂಬಂಧ, ಸ್ನೇಹಾಚಾರಗಳನ್ನು ಬೆಳೆಸುವ ಮೂಲಕ, ಭಯ ಮತ್ತು ಅಜ್ಞಾನದಿಂದಲೂ ಸೃಷ್ಟಿಯಾದ ದೃಷ್ಟಿ–ಕೋನ ಸಂಬಂಧಿಯಾದ ಅಡೆ–ತಡೆಗಳು ನಿವಾರಣೆಯಾಗುತ್ತವೆ. ಸಮನ್ವಯ ಶಿಕ್ಷಣ ಕಾರ್ಯಕರ್ತರಿಗೆ ಅಗತ್ಯವುಳ್ಳ ಶೋಧಕ ಮನೋಭಾವವನ್ನು ಆತ್ಮಾವಲೋಕನವು ಒದಗಿಸುತ್ತದೆ. ಈ ರೀತಿಯ ಸಮನ್ವಯ ಶಿಕ್ಷಣ ತರಬೇತಿಯ ಶಿಕ್ಷಕರು, ಕಲಿಕೆಗೆ ಅನುಕೂಲ ಒದಗಿಸುವವರು, ಪ್ರೇರಕರು ಹಾಗೂ ಪುನಶ್ಚೇತನ ಮಾರ್ಗದರ್ಶಕರು ಮುಂತಾದ ಎಲ್ಲಾ ಪಾತ್ರಗಳನ್ನು ಒಬ್ಬರೇ ನಿರ್ವಹಿಸಬೇಕಾದುದರಿಂದ ಸೇವಾಪೂರ್ವ ಶಿಕ್ಷಕ ತರಬೇತಿಯು ಪಠ್ಯವಿಷಯ ಜ್ಞಾನಕ್ಕಿಂತ ಮುಂದಕ್ಕೆ ಹೋಗಬೇಕು; ಆತ್ಮಬಲವನ್ನು ತಂದುಕೊಡಬಲ್ಲ ಸಾಮರ್ಥ್ಯವನ್ನು ಅಭ್ಯರ್ಥಿಗಳಲಿ ರೂಪಿಸಬಲ್ಲ ತರಬೇತಿಗಳನ್ನು ಅದು ಒಳಗೊಳ್ಳಬೇಕಿದೆ ಸಾಮಾನ್ಯ ತರಗತಿಗಳಲ್ಲಿ ಅತ್ಯಧಿಕ ಬೆಂಬಲದ ಅಗತ್ಯವುಳ್ಳ ಮಕ್ಕಳನ್ನು ಸೇರಿಸಿಕೊಳ್ಳಲು ಆತ್ಮಾವಲೋಕನದ ಪ್ರಕ್ರಿಯೆಯ ಮೂಲಕ ಅವಕಾಶ ನೀಡುವುದು ಅತ್ಯಗತ್ಯವಾಗಿದೆ. ಉತ್ತಮ ಆತ್ಮಬಲವುಳ್ಳವರು ತಾವು ಮಾಡುವ ಕೆಲಸದಲ್ಲಿ ಗಾಢವಾದ ಆಸಕ್ತಿಯನ್ನು ಮತ್ತು ಬದ್ಧತೆಯನ್ನೂ ಬೆಳೆಸಿಕೊಳ್ಳುತ್ತಾರೆ; ಅವರು ಸವಾಲುಗಳಿಗೆ ಅಂಜಿ ಹಿಂದೆ ಸರಿಯುವ ಸಾಧ್ಯತೆ ತುಂಬಾ ಕಡಿಮೆ; ಜೊತೆಗೆ ಸೋಲುಗಳಿಂದಲೂ ಬಹು ಬೇಗ ಚೇತರಿಸಿಕೊಳ್ಳುತ್ತಾರೆ ಎಂದು ಬಂಡೂರ ಪ್ರತಿಪಾದಿಸುತ್ತಾರೆ. ಗುಣನಡತೆ ಬದಲಾವಣೆಯಲ್ಲಿಯೂ ಆತ್ಮಬಲವು ಮಹತ್ವದ ಪಾತ್ರವನ್ನು ವಹಿಸುತ್ತದೆ.

***References***


Ainscow, M.Booth, T. and Dyson, A. (2006). *Improving Schools, Developing Inclusion*, First Edition. London: Routledge.

Bakker, J.P., Aloia, G.F. and Aloia, S.F. (2002). *Preparing Teachers for All Students* in F.E. Obiakor, P.A. Grant and E.A.Dooley (eds). Educating All Learners: Refocusing on the Comprehensive Support Model, Springfield, IL: Charles C. Thomas.

Bandura, A. (1977). *Self- efficacy: toward a unifying theory of behavioural change*. Psychol Rev 84:191-215.

Burnaford, G., Fischer, J. and Hobson, D. (2001) *Teachers Doing Research, The Power of Action through Inquiry*, Second Edition, New Jersey: Lawrence Erlbaum Associates Inc.

Eisner E.W. (1985). *The Educational Imagination: On the Design and Evaluation of School Programs* (4th Edition) New York: Macmillan.

Forlin C, and Ming-Gon J.L. Ed. (2008) *Reform, Inclusion and Teacher Education*, Routledge.

Fuchs W.W. *Examining Teachers' Perceived Barriers Associated with Inclusion*, SRATE Journal Winter 2009-2010, Vol. 19, 1. https://files.eric.ed.gov/fulltext/EJ948685.pdf

Law A. Halkiopoulos C. and Brayan-Zaykov C. (2010). *Psychology*, Malaysia: Pearson Education Ltd.

Sailor, W. and Skrtic, T.M. (1996). *School/Community Partnerships and Educational Reform*, Remedial and Special Education, 17.

Schon, D. (1983). *The Reflective Practitioner*, New York: Basic Books.

Snyder C.R., Lopez S.J., and Pedrotti J.T. (2011) *Positive Psychology*, Second Edition, Sage Publications India Pvt Ltd.

UNESCO (2017) *A Guide for Ensuring Inclusion and Equity in Education*. https://unesdoc.unesco.org/ark:/48223/pf0000248254/PDF/248254eng.pdf.multi.nameddest=305_17%20Ensuring%20Inclusion_int_21_28_en.indd%3A.178893%3A656





**ಅನುರಾಧ ನಾಯ್ಡು** ಅವರು ಹಾಂಗ್‌ಕಾಂಗ್‌ನಲ್ಲಿ 0–6 ವಯೋಮಾನದ ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಆರಂಭಿಕ ಮಧ್ಯವರ್ತಿಕಾರರಾಗಿ (Early Interventionist)) ಕೆಲಸ ಮಾಡಿದರು. ಆರಂಭಿಕ ಶಿಕ್ಷಣ ಕೇಂದ್ರದ ಆಶ್ರಯದಲ್ಲಿ ಹಾಂಗ್‌ಕಾಂಗ್ ಸರಕಾರದ ನೆರವಿನಿಂದ ಚೀನೀಯೇತರ ಭಾಷಿಕ ಮಕ್ಕಳಿಗಾಗಿ ಸೇವೆ ಸಲ್ಲಿಸಿದರು. ಅನುರಾಧ ಅವರು 20 ವರ್ಷಗಳ ಹಿಂದೆ ಚೆನ್ನೈನ ವಿದ್ಯಾಸಾಗರ್‌ನಲ್ಲಿ ವಿಶೇಷ ಶಿಕ್ಷಕಿಯಾಗಿ ತರಬೇತಿ ಪಡೆದರು. ಮತ್ತು ಅಲ್ಲಿ Transdisciplinary ವಿಧಾನವನ್ನು ಪರಿಚಯಿಸಿದರು. ಅವರು ವಿದ್ಯಾರ್ಥಿಗಳಿಗೆ ಚಿಕಿತ್ಸೆ, ಶಿಕ್ಷಣ ಹಾಗೂ ಪರ್ಯಾಯ ಸಂಪರ್ಕ ವಿಧಾನಗಳಿಂದ ಕೂಡಿದ ಉಲ್ಲಾಸಭರಿತ ಶಿಕ್ಷಣವನ್ನು ನಿರಂತರವಾಗಿ ಒದಗಿಸುತ್ತ ಅನುಭವ ಪಡೆದಿದ್ದಾರೆ. ಸದ್ಯ ಅವರು ವಿದ್ಯಾಸಾಗರ್‌ನ ಬಿ.ಎಡ್.ತರಗತಿಗೆ ಅರೆಕಾಲಿಕ ಉದ್ಯೋಗಿಯಾಗಿ ಮನಶ್ಶಾಸ್ತ್ರವನ್ನು ಕಲಿಸುತ್ತಿದ್ದಾರೆ; ಅಲ್ಲದೆ ಚೆನ್ನೈನ ಮಹಿಳಾ ಕ್ರಿಶ್ಚಿಯನ್ ಕಾಲೇಜಿನ ಮನಶ್ಶಾಸ್ತ್ರ ವಿಭಾಗದಲ್ಲಿ ಪ್ರಾಧ್ಯಾಪಕಿಯಾಗಿದ್ದಾರೆ. ಅವರನ್ನು anuradha.naidu@gmail.com ನಲ್ಲಿ ಸಂಪರ್ಕಿಸಬಹುದು.



ಅನುವಾದ: **ಜಿ.ಕೆ. ಮಧ್ಯಸ್ಥ** । ಪರಿಶೀಲನೆ: **ಲತಾ ಕೆ ಸಿ**

# ಕುಟುಂಬದ ಅತ್ಯವಶ್ಯ ಭಾಗೀದಾರಿಕೆ
## ಡೌನ್ ಸಿಂಡ್ರೋಮ್ ಬಾಧಿತ ಮಗಳ ಪಾಲನೆ ಪೋಷಣೆ

ಫಲ್ಗುಣಿ ದೋಶಿ

ಕಂಪ್ಯೂಟರ್ ಸೈನ್ಸ್ ಕಲಿತು, ಬಹುರಾಷ್ಟ್ರೀಯ ಕಂಪೆನಿಯೊಂದರಲ್ಲಿ ಒಂದು ನೌಕರಿ ಪಡೆದು, ಎತ್ತರದ, ಕಪ್ಪಗಿನ, ಚೆಲುವಾದ ಮತ್ತು ಕಾಳಜಿವಹಿಸುವ ವ್ಯಕ್ತಿಯ ಜೊತೆ ಮದುವೆಯಾಗಿ, ತುಂಬಾ ಪ್ರೀತಿಸುವ ಕುಟುಂಬ ಮತ್ತು ಮುದ್ದಾದ ಓರ್ವ ಮಗಳು ಹೀಗೆ ನನ್ನ ಬದುಕು ನಾನೇ ಎಳೆದ ನಯವಾದ ಸರಳ ರೇಖೆಯಂತೆ ಸಾಗುತ್ತಿತ್ತು.

ನಾನು ಎರಡನೇ ಬಾರಿ ತಾಯಿಯಾಗುವ ಸಂಭ್ರಮದಲ್ಲಿದ್ದಾಗ ಮಗುವಿನ ಲಿಂಗ ಪತ್ತೆ ಮಾಡುವ ಸೋನೊಗ್ರಫಿ ಪರೀಕ್ಷೆ (Sonography test) ಮಾಡಿಸದಿರುವ ನಮ್ಮ ನಿರ್ಧಾರಕ್ಕೆ ಮನೆಯವರೆಲ್ಲರೂ ಸಮ್ಮತಿಸಿದರು. ನಮ್ಮ ಬದುಕಿಗೆ ಬರುವ ಮಗು ಗಂಡಾಗಲಿ ಹೆಣ್ಣಾಗಲಿ ಅದನ್ನು ಸಂತೋಷದಿಂದ ಸ್ವೀಕರಿಸಿ ಉತ್ತಮ ರೀತಿಯಲ್ಲಿ ಬೆಳೆಸೋಣವೆಂದುಕೊಂಡೆವು. ಆ ದಿನಗಳಲ್ಲಿ ಗಂಡು ಮಗುವೇ ಆಗಬೇಕು ಎಂಬ ಹಳೆಕಾಲದ ಚಿಂತನೆಯಂತೆ ಸೋನೊಗ್ರಫಿ ಮೂಲಕ ಭ್ರೂಣ ಲಿಂಗ ಪತ್ತೆ ಮಾಡುವುದು ಸರ್ವೇ ಸಾಮಾನ್ಯವಾಗಿದ್ದುದರಿಂದ ನಾನು ಇದನ್ನು ಹೇಳಲೇಬೇಕು. ಹೀಗೆ ಬರೆಯುತ್ತಿರುವಾಗಲೂ ನನಗೆ ಸಿಟ್ಟನ್ನು ನಿಯಂತ್ರಿಸಲಾಗುತ್ತಿಲ್ಲ. ಸ್ವಂತ ಮನಸ್ಸಿನಿಂದಲೋ, ಕೌಟುಂಬಿಕ ಒತ್ತಡಕ್ಕೆ ಕಟ್ಟುಬಿದ್ದೋ ತಮ್ಮದೇ ಜೀವದ ಕುಡಿಯನ್ನು ನಾಶ ಮಾಡುವವರು ಎಂತಹ ತಾಯಂದಿರು? ಇರಲಿ.

ಸ್ತುತಿ ನನ್ನ ಬದುಕಿಗೆ ಬಂದ ದಿನ, ದೇವರು ನನ್ನನ್ನು ನಯವಾದ ಸರಳ ರೇಖೆಯಿಂದ ಗೊತ್ತು ಗುರಿಯಿಲ್ಲದ ದಾರಿಯೊಂದಕ್ಕೆ ಎತ್ತಿಹಾಕಿದ, ಅದೊಂದು ಸಹಜ ಪ್ರಸವ ಆದ ಕಾರಣ ವೈದ್ಯರು ಮತ್ತು ದಾದಿಯ ನಡುವಿನ ಸಂಭಾಷಣೆಯು ನನಗೆ ಸ್ಪಷ್ಟವಾಗಿ ಕೇಳಿಸುತ್ತಿತ್ತು. ಸ್ತುತಿಯ ಮೊದಲ ಅಳು ಕೇಳುತ್ತಿದ್ದಂತೆ, "ನೋಡಿ ಡಾಕ್ಟರ್, ಇವಳು ದೇವತೆಯಂತೆ ಕಾಣುತ್ತಿದ್ದಾಳೆ ಅವಳ ಕಣ್ಣು ನೋಡಿ, ಈ ಮಗು ಏನೋ ವಿಭಿನ್ನವಾಗಿದೆ' ಎಂದು ನರ್ಸ್ ಹೇಳಿದಾಗ, ನನಗೆ ಹೆಣ್ಣುಮಗು ಜನಿಸಿದೆ ಮತ್ತು ಅವಳು ದೇವತೆಯಂತೆ ಮುದ್ದಾಗಿದ್ದಾಳೆ ಎಂದು ತಿಳಿದುಕೊಂಡೆ. ಇವೆಲ್ಲಾ ನಿನ್ನೆಯಷ್ಟೇ ನಡೆದಿದೆಯೇನೋ ಎಂಬಂತೆ ನನ್ನ ಮನಸ್ಸಿನಲ್ಲಿ ಒಂದು ಚಿತ್ರದಂತೆ ಅಚ್ಚೊತ್ತಿದೆ. ಎರಡನೇ ದಿನ ರೌಂಡ್ಸ್‌ಗೆ ಬಂದ ಮಕ್ಕಳ ತಜ್ಞರು ನನ್ನ ಸ್ತ್ರೀರೋಗ ತಜ್ಞರ (Gynaecologist) ಜೊತೆ ಏನೋ ಚರ್ಚಿಸುತ್ತಿದ್ದರು. ಅದೇನೆಂದು ನನಗೆ ಅರ್ಥವಾಗಲಿಲ್ಲ. ಕೊನೆಗೆ ಅವರನ್ನೇ ವಿಚಾರಿಸಿದಾಗ, ಮಗು ಮಂಗೋಲ್[1] (Mongol) ಆಗಿರುವ ಸಾಧ್ಯತೆ ಇದೆ ಎಂಬ ಅನುಮಾನವಿದ್ದು, ಅದಕ್ಕಾಗಿ ಕೆಲವು ನಿರ್ದಿಷ್ಟ ಪರೀಕ್ಷೆಗಳನ್ನು ಮಾಡಿಸಬೇಕಾಗಿದೆ ಎಂದರು. ನಾನು ವಿಜ್ಞಾನದ ವಿದ್ಯಾರ್ಥಿಯಾಗಿದ್ದರಿಂದ ಅವರು ಡೌನ್‌ಸಿಂಡ್ರೋಮ್ ಬಗ್ಗೆ ಮಾತನಾಡುತ್ತಿದ್ದಾರೆಂದು ನನಗೆ ಅರ್ಥವಾಯಿತು. ಸ್ತುತಿಯ ರಕ್ತ ಪರೀಕ್ಷೆಯಾಯಿತು. ವರದಿ ಬರಲು ಒಂದು ತಿಂಗಳು ಕಾಯಬೇಕಾಗಿತ್ತು. ವೈದ್ಯರು ಸ್ತುತಿಯ ಸಮಸ್ಯೆಯನ್ನು ಸರಿಯಾಗಿ ಅರ್ಥಮಾಡಿಕೊಂಡಿಲ್ಲವೇನೋ, ಎಲ್ಲೋ ಏನೋ ಸಮಸ್ಯೆಯಾಗಿರಬೇಕು, ದೇವರು ನನಗೆ ಹಾಗೆಲ್ಲ ಅನ್ಯಾಯ ಮಾಡಲಾರ... ಹೀಗೆ ಆ ಇಡೀ ಒಂದು ತಿಂಗಳು ನನ್ನನ್ನು ನಾನೇ ಸಮಾಧಾನಪಡಿಸಿಕೊಳ್ಳುತ್ತಿದ್ದೆ. ಎಲ್ಲರ ಜೊತೆಗೂ ನಾನು ಚೆನ್ನಾಗಿಯೇ ವರ್ತಿಸಿದ್ದೇನೆ, ನಾನು ಯಾರಿಗೂ ತೊಂದರೆ ಕೊಟ್ಟವಳಲ್ಲ. ಸ್ತುತಿಯ ವರದಿ ನಾರ್ಮಲ್ ಬಂದರೆ ದಿನಾಲೂ ಗಾಯತ್ರಿ ಮಂತ್ರ ಪಠಿಸುವುದಾಗಿ ದೇವರಿಗೆ ಲಂಚದ ಆಮಿಷವನ್ನೂ ಒಡ್ಡಿದೆ.

ಅಂತಿಮವಾಗಿ ವರದಿ ಬಂದಾಗ ವೈದ್ಯರ ಅನುಮಾನವೇ ನಿಜವಾಗಿತ್ತು. ಸ್ತುತಿ ಟ್ರಿಸೊಮಿ 21ಯೊಂದಿಗೆ (Trisomy 21) ಹುಟ್ಟಿದ್ದಳು. ನನಗೆ ಕಣ್ಣೀರು ನಿಯಂತ್ರಿಸಲಾಗಲಿಲ್ಲ. ಅದು ಅತ್ಯಂತ ನೋವಿನ ಕ್ಷಣವಾಗಿತ್ತು. ಆದರೆ ತಕ್ಷಣವೇ, ನಾವಿದನ್ನು ತಿಳಿದಾದ ಮೇಲೆ ಮುಂದೇನು ಎಂದು ಚಿಂತಿತಳಾದೆ. ನಾನು ಮಗುವಾಗಿರುವಾಗಲೇ ತಾಯಿಯನ್ನು ಕಳೆದುಕೊಂಡಿದ್ದೆ. ಹಾಗಾಗಿ ಯಾವುದೇ ಸಮಸ್ಯೆಗಳಿಗೆ ಸ್ವತಃ ಪರಿಹಾರ ಕಂಡುಕೊಳ್ಳುವುದು ನನಗೆ ರೂಢಿಯಾಗಿತ್ತು. ಅದು ಈ ಸಂದರ್ಭದಲ್ಲಿ ನನಗೆ ಸಹಾಯವಾಯಿತು. ನಾನು ಮಾಡಿದ ಮೊದಲ ಕೆಲಸವೆಂದರೆ, ವಂಶವಾಹಿ ವಿಜ್ಞಾನದಲ್ಲಿ ಪರಿಣಿತರಾಗಿದ್ದ / ಜೀನ್ ತಜ್ಞರನ್ನು (Geneticist) ಭೇಟಿ ಮಾಡಿ ಡೌನ್‌ಸಿಂಡ್ರೋಮ್‌ಗೆ ಕಾರಣ, ಪರಿಹಾರ, ಆ ಮಕ್ಕಳ ಸಾಮರ್ಥ್ಯ ಮತ್ತು ದೌರ್ಬಲ್ಯಗಳೇನು ಎಂದು ತಿಳಿದುಕೊಳ್ಳುವ ಪ್ರಯತ್ನ ಮಾಡಿದ್ದು. ಗಾಢ ಬಣ್ಣ, ಖುಷಿಯ ವಾತಾವರಣ ಮತ್ತು ಸತತವಾಗಿ ಮಾತನಾಡಿಸುತ್ತಾ ಇರುವುದರಿಂದ ಸ್ತುತಿಗೆ ತುಂಬಾ ಅನುಕೂಲವಾಗುತ್ತದೆ ಎಂದು ಅವರು ತಿಳಿಸಿದರು. ಡೌನ್ ಸಿಂಡ್ರೋಮ್ ಇರುವ ಮಕ್ಕಳ ಮಾಂಸಖಂಡಗಳು ದುರ್ಬಲವಾಗಿರುವ ಕಾರಣ ಆ ನಿಟ್ಟಿನಲ್ಲಿ ಹೆಚ್ಚಿನ ಗಮನ ಕೊಡುವುದು ಅವಶ್ಯ, ತಾಳ್ಮೆಯಿಂದ ಎಲ್ಲವನ್ನೂ ಕಲಿಯಬಹುದು ಎಂದರು. ಅದಾದ ಬಳಿಕ, ವಿಶೇಷ ಮಕ್ಕಳ ಕೇಂದ್ರವೊಂದಕ್ಕೆ ನಾನು ಭೇಟಿ ನೀಡಿದೆ. ಅಲ್ಲಿ ನನ್ನನ್ನು ನಾನು ನಿಯಂತ್ರಿಸಿಕೊಳ್ಳಲಾಗಲಿಲ್ಲ. ಎಷ್ಟೊಂದು ಮಕ್ಕಳು.... ಪ್ರತಿಯೊಬ್ಬರದೂ ವಿಭಿನ್ನ ಸಮಸ್ಯೆ ಮತ್ತು ಅವರ ತಾಯಂದಿರ ಯಾತನೆಯ ಮುಖಗಳು... ನನ್ನನ್ನು ನಾನು ಹೇಗೋ ಸಂಭಾಳಿಸಿಕೊಂಡೆ. ಸ್ತುತಿಯನ್ನು ಶಕ್ತಿಮೀರಿ ಬೆಳೆಸಬೇಕು ಮತ್ತು ಒಂದು ಉತ್ತಮ ಬದುಕು ಕಟ್ಟಿಕೊಡಲು ಪ್ರಯತ್ನಿಸಬೇಕು ಎಂಬ ದೃಢನಿಶ್ಚಯಕ್ಕೆ ಬಂದೆ.

ಸ್ತುತಿಗೆ ಆರು ತಿಂಗಳಾದಾಗ ಫಿಸಿಯೋಥೆರಪಿ ಆರಂಭಿಸಲಾಯಿತು. ಅವಳ ಬೆಳವಣಿಗೆಗೆ ಅದು ಅವಶ್ಯ ಎಂದು ಥೆರಪಿಸ್ಟ್‌ಗಳಿಂದ ತಿಳಿದುಕೊಂಡೆ. ಹಾಗಾಗಿ ಮನೆಯಲ್ಲೇ ಚಿಕಿತ್ಸೆ ಮುಂದುವರಿಸಲಾಯಿತು. ನನ್ನ ವೃತ್ತಿ ಬದುಕಿಗಾಗಿ ಕಲಿತಿದ್ದ ಕಂಪ್ಯೂಟರ್ ಶಿಕ್ಷಣ ಈಗ ಬಹಳಷ್ಟು ಪ್ರಯೋಜನಕ್ಕೆ ಬಂತು. ಡೌನ್ ಸಿಂಡ್ರೋಮ್ ಬಗ್ಗೆ ತಿಳಿದುಕೊಂಡು, 'ಮಿಷನ್ ಸ್ತುತಿ' ಕೈಗೆತ್ತಿಕೊಳ್ಳಲು ಅದು ನೆರವಾಯಿತು. ನನ್ನ ಬದುಕಿನಲ್ಲಿಯೂ ಕೆಲವೊಂದು ಬದಲಾವಣೆಗಳಾದವು. ನಾನು ನೌಕರಿಗೆ ರಾಜೀನಾಮೆ ನೀಡಿ ನನ್ನೆಲ್ಲಾ ಸಮಯ, ಜ್ಞಾನ ಮತ್ತು

ಶಕ್ತಿಯನ್ನು ನನ್ನ ಮಕ್ಕಳನ್ನು ಬೆಳೆಸಲಿಕ್ಕೆಂದೇ ಮೀಸಲಿಟ್ಟೆ. ನಾನೆಷ್ಟು ಅದೃಷ್ಟಶಾಲಿ ಅಂದರೆ ಎಲ್ಲೇ ಹೋದರೂ ಒಳ್ಳೆಯ ಜನರೇ ಸಿಗುತ್ತಿದ್ದರು–ಶಿಕ್ಷಕರು, ಥೆರಪಿಸ್ಟ್‌ಗಳು, ಅಕ್ಕಪಕ್ಕದವರು, ಸಂಬಂಧಿಗಳು ಮತ್ತು ಕುಟುಂಬ ಎಲ್ಲವೂ...

ಸ್ತುತಿಗೆ ಈಗ 17ರ ಹರೆಯ. ಬಹಳ ಚುರುಕಿನ ಮತ್ತು ಶಾಂತ ಸ್ವಭಾವದ ಹುಡುಗಿ. ಹತ್ತನೇ ತರಗತಿಯ ಪರೀಕ್ಷೆ ಬರೆದು ಉತ್ತೀರ್ಣಳಾಗಿದ್ದಾಳೆ, ಕಂಪ್ಯೂಟರ್, ಮೊಬೈಲ್, ಗ್ಯಾಡ್ಜೆಟ್ ಮುಂತಾದವುಗಳನ್ನು ಸುಲಲಿತವಾಗಿ ಬಳಸುತ್ತಾಳೆ. ಅವಳು ಸಾಕಷ್ಟು ಮನೆಗೆಲಸಗಳನ್ನೂ ಮಾಡುತ್ತಾಳೆ. ನಾನು ಅವಳಿಗೆ ಬೆಂಬಲವಾಗಿರುವ ಬದಲು ಅವಳೇ ಈಗ ನನಗೆ ಬೆಂಬಲವಾಗಿದ್ದಾಳೆ, ಈ ಹಾದಿಯಲ್ಲಿ ಸಾಗುತ್ತಾ ನಾನು ಎಷ್ಟೊಂದು ಸಂಗತಿಗಳನ್ನು ಕಲಿತಿದ್ದೇನೆ. ನಾನು ಸ್ತುತಿಯನ್ನು ಬೇರೆಯವರೊಂದಿಗೆ ಹೋಲಿಸುವುದಿಲ್ಲ, ಬದಲಾಗಿ ಅವಳನ್ನು ಅವಳೊಂದಿಗೇ ಹೋಲಿಸುತ್ತೇನೆ. ಯಾವುದಾದರೂ ಕೆಲಸ ಮಾಡುವಾಗ ಹಿಂದಿಗಿಂತ ಸ್ವಲ್ಪ ಪ್ರಗತಿ ಕಂಡುಬಂದರೂ ನನಗೆ ಖುಷಿಯಾಗುತ್ತದೆ. ಒಬ್ಬ ಥೆರಪಿಸ್ಟ್ ನಮಗೆ ನೆರವಾಗಬಹುದು, ಆದರೆ ಪಟ್ಟು ಬಿಡದೆ ಪ್ರಯತ್ನ ಮುಂದುವರಿಸಬೇಕಾದವರು ನಾವು. ಅವಳ ಶಿಕ್ಷಕರು ಆಟದ ಚಿಕಿತ್ಸೆ (Play therapy), ಮಾತಿನ ಚಿಕಿತ್ಸೆ (Speech therapy) ಮತ್ತು ಕಲಿಕೆಯಲ್ಲಿ ಸಹಾಯ ಮಾಡುತ್ತಿದ್ದರೂ ಅವಳಿಗೆ ಅತ್ಯವಶ್ಯವಾಗಿದ್ದ ಪ್ರತಿಯೊಂದು ಕೆಲಸವನ್ನೂ ಎಡೆಬಿಡದೆ ಮಾಡುವುದನ್ನೇ ಅಭ್ಯಾಸ ಮಾಡಿಕೊಂಡೆ.

ಅಷ್ಟು ಮಾತ್ರವಲ್ಲ, ಇಡೀ ಕುಟುಂಬವೇ ಈ ಪ್ರಕ್ರಿಯೆಯಲ್ಲಿ ಕೈಜೋಡಿಸಿದಾಗ ಧನಾತ್ಮಕ ಫಲಿತಾಂಶವನ್ನು ಸ್ಪಷ್ಟವಾಗಿ ಕಾಣಲು ಸಾಧ್ಯ. ಸಾಮಾನ್ಯ ವ್ಯಕ್ತಿಯೊಬ್ಬ ಕಲಿಯುವ ಎಲ್ಲಾ ವಿಷಯಗಳನ್ನು ಸ್ತುತಿಯೂ ಕಲಿಯಬಲ್ಲಳು. ಕಲಿಯುವ ಅವಧಿ ಮಾತ್ರ ಸ್ವಲ್ಪ ಜಾಸ್ತಿಯಾದೀತು, ಇಲ್ಲವೇ ಕಲಿಯುವ ವಿಧಾನ ಸ್ವಲ್ಪ ಬದಲಾದೀತು ಅಷ್ಟೇ. ಈ ಅವಧಿಯಲ್ಲಿ ನಾನು ಅರ್ಥ ಮಾಡಿಕೊಂಡಿದ್ದೇನೆಂದರೆ, ಪವಾಡಗಳು ರಾತ್ರಿ ಬೆಳಗಾಗುವುದರ ಒಳಗೆ ಘಟಿಸುವುದಿಲ್ಲ. ಇದು ಜೀವನ. ಹಾಗಾಗಿ ಪ್ರತಿಯೊಬ್ಬರ ಜೀವನದಲ್ಲಿಯೂ ಹೋರಾಟ ಎಂಬುದು ನಿರಂತರ. ನಮಗೆ ಒಳ್ಳೆಯ ಫಲಿತಾಂಶ ಬೇಕೆಂದರೆ ನಾವು ಖುಷಿಯಾಗಿರಬೇಕು ಮತ್ತು ಪ್ರಯತ್ನವನ್ನು ಕೈಬಿಡಬಾರದು. ನನಗೆ ದೊಡ್ಡ ಖುಷಿಯೇನೆಂದರೆ, ನನ್ನ ಕುಟುಂಬ ಪ್ರತಿ ಹೆಜ್ಜೆಯಲ್ಲಿಯೂ ನನ್ನ ಜೊತೆ ನಿಂತು ಅಗತ್ಯವಿದ್ದಾಗಲೆಲ್ಲ ಬೆಂಬಲ, ಪ್ರೋತ್ಸಾಹ ನೀಡಿತು. ಈಗಲೂ ನಾನು ಗೊತ್ತಿಲ್ಲದ ದಾರಿಯಲ್ಲಿ ಸಾಗುತ್ತಲೇ ಇದ್ದೇನೆ, ಸಾಕಷ್ಟು ಹಂತಗಳನ್ನು ದಾಟಿ ಬಂದಿದ್ದೇನೆ, ದಾಟುವುದು ಇನ್ನೂ ಬಾಕಿ ಇದೆ, ಇನ್ನೂ ಎದುರಿಸಬೇಕಾದವು ಹಲವು. ಆದರೆ ಪಯಣದಲ್ಲಿ ಗುರಿ ಮುಟ್ಟುವುದಷ್ಟೇ ಖುಷಿ ಅಲ್ಲ, ಬದುಕು ನಮ್ಮನ್ನು ಕೊಂಡೊಯ್ಯುವ ಹಾದಿಯಲ್ಲಿ ಸಾಗಿ ಗುರಿ ಮುಟ್ಟುವುದು ಮುಖ್ಯ.



[1] ಇದು ಡೌನ್ ಸಿಂಡ್ರೋಮ್ ಕುರಿತಾಗಿ ಈ ಹಿಂದೆ ಬಳಸುತ್ತಿದ್ದ, ಈಗ ಒಪ್ಪಿಕೊಳ್ಳಲಾಗದ ಒಂದು ಹಳೆಯ ಪದ



**ಫಲ್ಗುಣಿ ದೋಶಿ**
ಸ್ತುತಿ ದೋಶಿಯ ತಾಯಿ

ಅನುವಾದ: **ರೋಹಿಣಿ ಮುಂಡಾಜೆ** । ಪರಿಶೀಲನೆ: **ನಾಗಮಣಿ ಎಸ್ ಎನ್**

# ಅಗೋಚರ ವೈಕಲ್ಯಗಳು

ಅರ್ಪಿತಾ ಯಾದವ್

ನಿಮಗೆ 'ತಾರೆ ಜಮೀನ್ ಪರ್' ಚಿತ್ರ ನೋಡಿದ್ದು ನೆನಪಿದೆಯೇ? ಆ ಚಲನ ಚಿತ್ರವು ಕಲಿಕೆಯಲ್ಲಿ ಕಂಡುಬರುವ ವೈಕಲ್ಯಗಳ ಬಗ್ಗೆ ಜನರಲ್ಲಿ ಅರಿವು ಮೂಡಿಸಿತು. ಹಾಗೆಯೇ ಅದು ನನಗೆ ಏನನ್ನಾದರೂ ಮಾಡಬೇಕೆಂಬ ಸ್ಫೂರ್ತಿ ನೀಡಿತು. ಹಲವಾರು ವರ್ಷಗಳಿಂದ ವಿಶೇಷ ಶಿಕ್ಷಣ ಶಿಕ್ಷಕಿಯಾಗಿ ಕೆಲಸ ಮಾಡಿದ ನಾನು ನಿರ್ದಿಷ್ಟ ಕಲಿಕಾ ವೈಕಲ್ಯಗಳ (Specifc Learning Disabilities, SLD) ಬಗ್ಗೆ ಗಮನಹರಿಸಲು ನಿರ್ಧರಿಸಿದೆ. ಕಲಿಕೆಯಲ್ಲಿ ಅಶಕ್ತತೆ ಹೊಂದಿರುವ ಮಕ್ಕಳೊಂದಿಗೆ ಕೆಲಸ ಮಾಡಿದ ನಾನು, ಅಂತಹ ಮಕ್ಕಳನ್ನು ಸ್ವತಂತ್ರರಾಗಿ ಮಾಡಲು ಮತ್ತು ಅವರು ತಾವೇ 'ಖುದ್ದಾಗಿ ಬದುಕನ್ನು ಎದುರಿಸುವುದನ್ನು' ಕಲಿಯಲು ನೆರವು ನೀಡುವ ಕಾರ್ಯದಲ್ಲಿ ನನ್ನ ಅನುಭವವನ್ನು ಬಳಸಲು ಪ್ರಯತ್ನಿಸಿದೆ. ನಿರ್ದಿಷ್ಟವಾದ ಕಲಿಕಾ ವೈಕಲ್ಯಗಳು ಭಾವನಾತ್ಮಕ ತೊಂದರೆಗಳಲ್ಲ, ಬೌದ್ಧಿಕ ಅಶಕ್ತತೆಗಳಲ್ಲ ಅಥವಾ ಇಂದ್ರಿಯ ಸಂಬಂಧಿ ಸಂವೇದನಾಶೀಲತೆಯ (Sensory Impairments) ದೌರ್ಬಲ್ಯಗಳಲ್ಲ. ಅವು ಪೋಷಕರ ಅಸಮರ್ಪಕ ಪಾಲನೆ ಅಥವಾ ಶೈಕ್ಷಣಿಕ ಅವಕಾಶದ ಕೊರತೆಗಳಿಂದಾಗಲೀ ಉಂಟಾದವುಗಳಲ್ಲ. ಈಗ ನಾವು ನಿರ್ದಿಷ್ಟವಾದ ಕಲಿಕಾ ವೈಕಲ್ಯಗಳು ಮತ್ತು ಅವುಗಳಿಗೆ ಸಂಬಂಧಿಸಿದ ಕೆಲವು ಅಂಶಗಳು ಯಾವುವು ಎಂಬುದನ್ನು ಅರ್ಥಮಾಡಿಕೊಳ್ಳೋಣ.

- ಇದು ಒಬ್ಬ ವ್ಯಕ್ತಿಯ ಮೆದುಳಿನ ನರಜಾಲಗಳ ('Wired') ರಚನೆಯಲ್ಲಿ ಕಂಡುಬರುವ ವ್ಯತ್ಯಾಸದಿಂದ ಉಂಟಾಗುವ ಒಂದು ನರ ದೋಷ (Neurological disorder).
- ನಿರ್ದಿಷ್ಟವಾದ ಕಲಿಕಾ ವೈಕಲ್ಯಗಳನ್ನು ಹೊಂದಿರುವ ಮಕ್ಕಳು ಚುರುಕಾಗಿರುತ್ತಾರೆ ಅಥವಾ ತಮ್ಮ ಓರಗೆಯವರಿಗಿಂತ ಚುರುಕಾಗಿರುತ್ತಾರೆ. ಆದರೆ ಅವರಿಗೆ ಓದಲು, ಬರೆಯಲು, ಕಾಗುಣಿತ ಮತ್ತು ತರ್ಕ, ಜ್ಞಾಪಕಶಕ್ತಿ ಮತ್ತು / ಅಥವಾ ಮಾಹಿತಿ ಸಂಯೋಜನೆಯಲ್ಲಿ ತೊಂದರೆಯಿರುತ್ತದೆ. ಅವರು ತಾವಾಗಿಯೇ ಕಲಿಯಲು ಅಥವಾ ಅವರಿಗೆ ಸಾಂಪ್ರದಾಯಿಕ (ಔಪಚಾರಿಕ) ರೀತಿಯಲ್ಲಿ ಕಲಿಸಿದರೆ ಕಲಿಯಲು ಕಷ್ಟವಾಗುತ್ತದೆ.
- ನಿರ್ದಿಷ್ಟವಾದ ಕಲಿಕಾ ವೈಕಲ್ಯಗಳನ್ನು ಹೊಂದಿರುವ ಮಕ್ಕಳನ್ನು ಗುಣಪಡಿಸಲು ಅಥವಾ ಸರಿಪಡಿಸಲು ಸಾಧ್ಯವಿಲ್ಲ. ಆದರೂ ಸೂಕ್ತ ಸಮಯದಲ್ಲಿ ಮಧ್ಯಪ್ರವೇಶ ಮತ್ತು ಸರಿಯಾದ ಬೆಂಬಲದ ಮೂಲಕ ಈ ಮಕ್ಕಳು ಶಾಲೆಯಲ್ಲಿ ಚೆನ್ನಾಗಿ ಕಲಿಯಬಲ್ಲರು ಮತ್ತು ತಮ್ಮ ವೃತ್ತಿಜೀವನದಲ್ಲಿ ಯಶಸ್ವಿಯಾಗಿ ಮುಂದುವರಿಯಬಲ್ಲರು.

ಸ್ಥೂಲವಾಗಿ ಹೇಳುವುದಾದರೆ, ಈ ವೈಕಲ್ಯಗಳು ಒಂದು ಅಥವಾ ಹೆಚ್ಚು ಮೂಲ ಮಾನಸಿಕ ಪ್ರಕ್ರಿಯೆಗಳನ್ನು ಒಳಗೊಂಡಿವೆ:

1. ಆಲಿಸುವ (Auditory) ಮತ್ತು ನೋಡುವ ಗ್ರಹಿಕೆ (Visual perception) (ಒಳಹರಿವು)
2. ಅನುಕ್ರಮ ವಿಚಾರ, ಅಮೂರ್ತ ಗ್ರಹಿಕೆ ಮತ್ತು ಸಂಘಟನೆ (ಸಮಗ್ರೀಕರಣ)
3. ಕಾರ್ಯನಿರ್ವಹಣೆ, ಅಲ್ಪಾವಧಿ ಮತ್ತು ದೀರ್ಘಾವಧಿ ಸ್ಮರಣೆ (ಜ್ಞಾಪಕಶಕ್ತಿ)
4. ಅಭಿವ್ಯಕ್ತಿಸುವ ಭಾಷೆ (ಹೊರಹರಿವು) ಮತ್ತು
5. ಸೂಕ್ಷ್ಮ ಮತ್ತು ಸ್ಥೂಲ ಚಲನಾ ಕೌಶಲಗಳು (Fine and Gross motor skills)

**ಗುಣಲಕ್ಷಣಗಳು**

- ಓದುವಿಕೆಯ ಮಟ್ಟ
- ಓದಿದ ವಿಷಯದ ಗ್ರಹಿಕೆ ಮತ್ತು ಸ್ಮರಣೆಯಲ್ಲಿ ತೊಂದರೆ–ಯಾಗುವುದು.
- ಒಂದೇ ರೀತಿ ಕಾಣುವ, ಕೇಳುವ ಶಬ್ದ ಅಥವಾ ಪದಗಳನ್ನು ಅರಿಯುವಲ್ಲಿ ಗೊಂದಲವಾಗುವುದು
- ವಾಕ್ಯ ರಚಿಸಲು ಕಷ್ಟವಾಗುವುದು ಮತ್ತು ತೀವ್ರ ವ್ಯಾಕರಣ ದೋಷ
- ನಿಧಾನ ಬರವಣಿಗೆಯ ಮಟ್ಟ ಮತ್ತು ದೊಡ್ಡದಾಗಿ ಬರೆಯುವುದು
- ಪದೇಪದೇ ಕಾಗುಣಿತ ದೋಷಗಳು ಕಾಣಿಸಿಕೊಳ್ಳುವುದು
- ಆಲೋಚನಾ ಶಕ್ತಿ ಮತ್ತು ಅಮೂರ್ತ ಪರಿಕಲ್ಪನೆಗಳನ್ನು ಗ್ರಹಿಸುವಲ್ಲಿ ತೊಂದರೆಯಾಗುವುದು
- ಗಣಿತದ ನಿಯಮಗಳನ್ನು ನೆನಪಿಡುವುದಕ್ಕೆ ತೊಂದರೆಯಾಗುವುದು
- ಅಂಕಗಣಿತದ ಕಾರ್ಯ ವಿಧಾನಗಳನ್ನು ನೆನಪಿಟ್ಟುಕೊಳ್ಳಲು ಕಷ್ಟಪಡುವುದು
- ಒಂದು ಪಠ್ಯದಲ್ಲಿನ ಪ್ರಮುಖ ವಿಚಾರವನ್ನು ಮತ್ತು ಮುಖ್ಯಾಂಶಗಳನ್ನು ಗ್ರಹಿಸುವುದರಲ್ಲಿ ಕಷ್ಟವಾಗುವುದು
- ಅಕ್ಷರಗಳನ್ನು ಮತ್ತು ಗಣಿತ ಚಿಹ್ನೆಗಳನ್ನು ತಿರುಗು–ಮುರುಗಾಗಿ ಬರೆಯುವುದು
- ಟಿಪ್ಪಣಿ ಮತ್ತು ಸಾರಾಂಶ ಬರೆಯುವುದರಲ್ಲಿ ಹಿಂದೆ ಬೀಳುವುದು
- ಸೂಚನೆಗಳನ್ನು ಪಾಲಿಸುವಲ್ಲಿ ತೊಂದರೆಯಾಗುವುದು
- ದುರ್ಬಲ ಸಮಯ ನಿರ್ವಹಣೆ ಮತ್ತು ಸಂಯೋಜನೆ
- ಓದು ಪ್ರಾರಂಭಿಸಲು ಮತ್ತು ಮುಂದುವರೆಸಲು ಕಷ್ಟವಾಗುವುದು

- ನಿಗದಿತ ಸಮಯದೊಳಗೆ ಕೊಟ್ಟ ಕೆಲಸ ಮಾಡಲು ಅಥವಾ ನಿಗದಿತ ಜವಾಬ್ದಾರಿಗಳನ್ನು ಪೂರ್ಣಗೊಳಿಸಲು ಅಸಮರ್ಥರಾಗುವುದು.

**ನಿರ್ದಿಷ್ಟ ಕಲಿಕಾ ವೈಕಲ್ಯತೆ ವಿಧಗಳು**

### ಶ್ರವಣೇಂದ್ರಿಯ ಸಂಸ್ಕರಣಾ ದೋಷ

ಶ್ರವಣೇಂದ್ರಿಯ ಸಂಸ್ಕರಣಾ ದೋಷ (Auditory Processing Disorder-APD) ಎಂಬುವುದು ಕಿವಿಯ ಮೂಲಕ ಹಾದುಹೋಗುವ ಶಬ್ದಗಳು ಮೆದುಳಿನಲ್ಲಿ ಸಂಸ್ಕರಣೆಗೊಳ್ಳುವ ಕ್ರಿಯೆಯ ಮೇಲೆ ಪ್ರತಿಕೂಲ ಪರಿಣಾಮ ಬೀರುವ ಒಂದು ಪರಿಸ್ಥಿತಿ. ಈ ಶ್ರವಣೇಂದ್ರಿಯ ಸಂಸ್ಕರಣಾ ದೋಷ ಹೊಂದಿರುವ ವ್ಯಕ್ತಿಗಳು ಜೋರಾಗಿ ಹೇಳಿದರೂ, ಸ್ಪಷ್ಟವಾಗಿ ಕೇಳಿಸುವಂತಿದ್ದರೂ ಪದಗಳ ಅಥವಾ ಶಬ್ದಗಳ ನಡುವಿನ ಸೂಕ್ಷ್ಮ ವ್ಯತ್ಯಾಸಗಳನ್ನು ಗುರುತಿಸಲು ವಿಫಲರಾಗುತ್ತಾರೆ. ಅವರಿಗೆ ಶಬ್ದಗಳು ಎಲ್ಲಿಂದ ಬರುತ್ತಿವೆ ಎಂದು ಹೇಳಲು, ಶಬ್ದಗಳ ಕ್ರಮವನ್ನು ಅರ್ಥಮಾಡಿಕೊಳ್ಳಲು ಕಷ್ಟಕರ–ವಾಗುತ್ತದೆ. ಹಿನ್ನೆಲೆಯ ಶಬ್ದಗಳನ್ನು ಅರ್ಥ ಮಾಡಿಕೊಳ್ಳಲು ಕೂಡ ಆಗುವುದಿಲ್ಲ. ಉದಾಹರಣೆಗೆ, ಒಂದು ಮಗು ನಿಶ್ಶಬ್ದ ಸ್ಥಳದಲ್ಲಿ ತಾನೇ ಓದಬಹುದು. ಆದರೆ ಒಂದು ಸೂಚನೆಯನ್ನು ಪಾಲಿಸಲು, ಶಾಲೆಯಲ್ಲಿ ಪಾಠವನ್ನು ಅರ್ಥಮಾಡಿಕೊಳ್ಳಲು ಕೂಡ ಕಷ್ಟಪಡುವುದು.

**ಶ್ರವಣೇಂದ್ರಿಯ ಸಂಸ್ಕರಣಾ ದೋಷದ ವಿಧಗಳು**

- 'ಆಡಿಟರಿ ಫಿಗರ್ ಗ್ರೌಂಡ್' ಅಂದರೆ ಹಿನ್ನೆಲೆಯಲ್ಲಿ ಯಾವುದೇ ಶಬ್ದವಿದ್ದರೆ ಅದರತ್ತ ಗಮನಹರಿಸಲು ಮಗುವಿಗೆ ಸಾಧ್ಯವಾಗದ ಸ್ಥಿತಿ. ಗಲಾಟೆಯಿರುವ, ಗಜಿಬಿಜಿಯಿರುವ ತರಗತಿ ಕೊಠಡಿಗಳಲ್ಲಿ ಕಲಿಯುವುದಕ್ಕೆ ಬಹಳ ಕಷ್ಟಪಡುವುದು. ಈ ಪರಿಸ್ಥಿತಿಯಿಂದ ಅಂತಹ ಮಕ್ಕಳಿಗೆ ಬಹಳ ನಿರಾಶೆಯುಂಟಾಗುವುದು.
- ಆಡಿಟರಿ ಮೆಮೊರಿ ಅಥವಾ ಶ್ರವಣೇಂದ್ರಿಯ ಸ್ಮರಣೆ: ಸೂಚನೆಗಳು, ಪಟ್ಟಿಗಳು ಅಥವಾ ಓದುವ ಸಾಮಗ್ರಿಗಳು (ಪಠ್ಯಪುಸ್ತಕಗಳು) ಮುಂತಾದ ಮಾಹಿತಿಗಳನ್ನು ನೆನಪಿಟ್ಟುಕೊಳ್ಳುವಲ್ಲಿ ತೊಂದರೆ. ಅದು ತಕ್ಷಣದ್ದಾಗಿರ–ಬಹುದು (ನನಗೆ ಈಗ ನೆನಪಿಲ್ಲ) ಅಥವಾ ಅನಂತರದ್ದಿರ–ಬಹುದು (ಆನಂತರ ನನಗೆ ನೆನಪಿರುವುದಿಲ್ಲ).
- ಶ್ರವಣೇಂದ್ರಿಯ ವಿವೇಚನೆ (Auditory discrimination): ಕೇಳಿಸಿಕೊಳ್ಳಲು ಒಂದೇ ರೀತಿ ಇರುವ ಪದಗಳು ಅಥವಾ ಶಬ್ದಗಳ ನಡುವಿನ ವ್ಯತ್ಯಾಸ ತಿಳಿಯುವಲ್ಲಿ ತೊಂದರೆ. (ಚ ಅಂದರೆ ಶ, ಕೋಟು ಎಂದರೆ ಬೋಟು ಎಂದು ಮಗುವು ಆ ಪದ ಅಥವಾ ಅಕ್ಷರವನ್ನು ಭಾವಿಸುತ್ತದೆ).
- ಶ್ರವಣ ನಿಗಾ (Auditory attention) ಎಂದರೆ ಮಗುವಿಗೆ ಒಂದು ಕೆಲಸವನ್ನು ಮುಗಿಸಲು ಮನಸ್ಸು ಅಥವಾ ನಿಗಾ ಇಡುವಲ್ಲಿ ತೊಂದರೆ. ತರಗತಿಯಲ್ಲಿ ಸಾಕಷ್ಟು ಸಮಯ ಮನಸ್ಸಿಟ್ಟು ಕೇಳಿಸಿಕೊಳ್ಳಲು ಅಥವಾ ಕೊಟ್ಟ ಕೆಲಸ ಮಾಡಲು ಸಾಮರ್ಥ್ಯವಿರುವುದಿಲ್ಲ.
- ಶ್ರವಣೇಂದ್ರಿಯ ಸಂಲಗ್ನ (Auditory cohesion): ಸಂಭಾಷಣೆಗಳಿಂದ ನಿರ್ಣಯಕ್ಕೆ ಬರಲು ಇರುವ ಅಸಾಮರ್ಥ್ಯ, ಒಗಟುಗಳನ್ನು ಅರ್ಥ ಮಾಡಿಕೊಳ್ಳುವುದು ಅಥವಾ ಮೌಖಿಕವಾಗಿ ಗಣಿತದ ಸಮಸ್ಯೆಗಳನ್ನು ಗ್ರಹಿಸುವುದು, ಇವೆಲ್ಲಕ್ಕೂ ಶ್ರವಣೇಂದ್ರಿಯ ಸಂಸ್ಕರಣ ಮತ್ತು ಭಾಷಾ ಕೌಶಲ ಅಗತ್ಯ.

**ಮಗುವಿಗೆ ನೆರವು**

- ಸಾಧ್ಯವಾದಾಗಲೆಲ್ಲಾ ಹಿನ್ನೆಲೆ ಶಬ್ದವನ್ನು ಕಡಿಮೆ ಮಾಡುವುದು ಮತ್ತು ನೀವು ಮಾತನಾಡುವಾಗ ಮಗು ನಿಮ್ಮನ್ನು ನೋಡುವಂತೆ ಮಾಡುವುದು.
- ಸರಳವಾದ ಅರ್ಥಮಾಡಿಕೊಳ್ಳಲು ಸಾಧ್ಯವಾಗುವ ವಾಕ್ಯಗಳನ್ನು ಬಳಸುವುದು ಮತ್ತು ನಿಧಾನವಾಗಿ ಅಥವಾ ಮೆಲ್ಲನೆ ಮೃದುವಾಗಿ ಮಾತನಾಡುವುದು.
- ಸೂಚನೆಗಳನ್ನು ಮತ್ತೆ ಪುನರುಚ್ಚರಿಸಲು ಮಗುವಿಗೆ ಹೇಳುವುದು. ಅವುಗಳನ್ನು ಕೊಟ್ಟ ಕೆಲಸ ಮುಗಿಯುವವರೆಗೆ ಮತ್ತೆಮತ್ತೆ ಜೋರಾಗಿ ಹೇಳಲು ಸೂಚಿಸುವುದು (ಮಗುವು ನಿಮಗೆ ಹೇಳುವುದು ಅಥವಾ ತನಗೆ ತಾನೇ ಹೇಳಿಕೊಳ್ಳುವುದು).
- ಕೊಟ್ಟ ಸೂಚನೆಗಳನ್ನು ಪಾಲಿಸಲು ಟಿಪ್ಪಣಿಗಳನ್ನು ಬರೆಯುವುದು, ನಿಗದಿತ ಸಮಯದ ಬಗ್ಗೆ ಎಚ್ಚರಿಸಲು ಕೈ ಗಡಿಯಾರವನ್ನು ಧರಿಸುವುದು, ಕ್ರಮಬದ್ಧವಾದ ದಿನಚರಿ ಇಟ್ಟುಕೊಳ್ಳಲು ನೆರವಾಗುವುದು.
- ಕೇಳಿಸಿಕೊಳ್ಳಲೇಬೇಕಾದ ಸಂದರ್ಭದಲ್ಲಿ ಮಗುವನ್ನು ಶಬ್ದವಿಲ್ಲದ ಸ್ಥಳಕ್ಕೆ ಕಳುಹಿಸುವುದು. ಮನೆಯಲ್ಲಿ ಓದಲು ಶಾಂತವಾದ ಸ್ಥಳವಿರುವಂತೆ ನೋಡಿಕೊಳ್ಳುವುದು. ಶಾಲೆಯಲ್ಲಿ ಮುಂದಿನ ಸಾಲಿನಲ್ಲಿ ಅಥವಾ ಹಿಂಬದಿಗೆ ಕಿಟಕಿಯಿರುವ ಕಡೆಕೂರಿಸುವುದು.
- ಶ್ರವಣೇಂದ್ರಿಯ ಸಂಸ್ಕರಣಾ ದೋಷವುಳ್ಳ ಮಕ್ಕಳ ಕಲಿಕೆಗೆ ನೆರವು ನೀಡಲು ವಿಶೇಷವಾಗಿ ವಿನ್ಯಾಸಗೊಳಿಸಿರುವ ಟೇಪ್ ರೆಕಾರ್ಡರ್‌ಗಳು, ಆನ್‌ಲೈನ್ ಟಿಪ್ಪಣಿಗಳಂತಹ ಪಠ್ಯ ಸಾಧನಗಳನ್ನು ಬಳಸುವುದು.
- ಕೊಠಡಿ ಮತ್ತು ಡೆಸ್ಕನ್ನು ಅಚ್ಚುಕಟ್ಟಾಗಿ ಇಟ್ಟುಕೊಳ್ಳುವಂತಹ ಮತ್ತು ನಿಯಮಿತವಾದ, ಕಾರ್ಯಸಾಧ್ಯವಾಗುವಂತಹ ಕೆಲಸಗಳನ್ನು ಕೊಡುವುದು.

### ಸಂಖ್ಯಾದೋಷ (Dyscalculia)

ಡಿಸ್ಕಾಲ್ಕುಲಿಯಾ ಎಂಬುವುದು ಒಂದು ನಿರ್ದಿಷ್ಟ ಕಲಿಕಾ ಅಸಾಮರ್ಥ್ಯವಾಗಿದೆ. ಸಂಖ್ಯೆಗಳನ್ನು ಅರ್ಥಮಾಡಿಕೊಳ್ಳಲು ಮತ್ತು ಗಣಿತದ ನಿಯಮಗಳನ್ನು ಕಲಿಯಲು ವ್ಯಕ್ತಿಯಲ್ಲಿರುವ ಅಸಾಮರ್ಥ್ಯವಾಗಿದೆ. ಈ ರೀತಿಯ ನಿರ್ದಿಷ್ಟ ಕಲಿಕಾ ತೊಂದರೆ ಹೊಂದಿರುವ ವ್ಯಕ್ತಿಗಳು ಚಿಹ್ನೆಗಳನ್ನು ಗ್ರಹಿಸುವುದರಲ್ಲಿ ಹಿಂದಿರುತ್ತಾರೆ. ಬಾಯಿಪಾಠ ಮಾಡುವುದು ಮತ್ತು ಸಂಖ್ಯೆಗಳನ್ನು ಆಯೋಜಿಸುವುದು ಅವರಿಗೆ ಕಷ್ಟವಾಗುತ್ತದೆ. ಅವರು ಸಮಯ ಎಷ್ಟೆಂದು ಹೇಳಲು ಅಥವಾ ಎಣಿಸಲು ಕಷ್ಟಪಡುತ್ತಾರೆ.

**ಡಿಸ್ಕಾಲ್ಕುಲಿಯಾದ ವಿಧಗಳು**

- ಮೌಖಿಕ ಡಿಸ್ಕಾಲ್ಕುಲಿಯಾದಲ್ಲಿ ಮಗುವಿಗೆ ಸಂಖ್ಯೆಗಳನ್ನು ಓದಲು ಅಥವಾ ಬರೆಯಲು ಬರುತ್ತದೆ. ಆದರೆ ಅದೇ ಸಂಖ್ಯೆಗಳನ್ನು ಮಾತಿನಲ್ಲಿ ಹೇಳಿದಾಗ ಅವುಗಳನ್ನು ಅರ್ಥ–ಮಾಡಿಕೊಳ್ಳಲು / ಗುರುತಿಸಲು ಕಷ್ಟವಾಗುತ್ತದೆ.
- ಪ್ರಾಕ್ಟೊಗ್ನೋಸ್ಟಿಕ್ ಡಿಸ್ಕಾಲ್ಕುಲಿಯಾ: ಮಗುವಿಗೆ ಗಣಿತದ ಪರಿಕಲ್ಪನೆಗಳನ್ನು ಅರ್ಥ ಮಾಡಿಕೊಳ್ಳಲು ಕಷ್ಟವಾಗುತ್ತದೆ.

ಉದಾ, ಎರಡು ವಸ್ತುಗಳನ್ನು ಹೋಲಿಸಿ ನೋಡುವುದು (ದೊಡ್ಡದು, ಚಿಕ್ಕದು).

- ಲೆಕ್ಸಿಕಲ್ ಡಿಸ್ಕಾಲ್ಕುಲಿಯಾದಲ್ಲಿ ಮಗುವು ಅಂಕಿಗಳನ್ನು ಮತ್ತು ಗಣಿತ ಚಿಹ್ನೆಗಳನ್ನು (+,–ಸೇರಿದಂತೆ) ಓದಲು ಕಷ್ಟಪಡುವುದು.
- ಗ್ರಾಫಿಕಲ್ ಡಿಸ್ಕಾಲ್ಕುಲಿಯಾ ಅಥವಾ ಚಿತ್ರಾತ್ಮಕ ದೋಷ: ಮಗುವು ಪರಿಕಲ್ಪನೆಗಳನ್ನು ಸರಿಯಾಗಿ ಅರ್ಥ–ಮಾಡಿಕೊಂಡರೂ ಓದಲು, ಬರೆಯಲು ಮತ್ತು ಸರಿಯಾದ ಚಿಹ್ನೆಗಳನ್ನು ಬಳಸಲು ಮಗುವು ಕಷ್ಟಪಡುವುದು.
- ಐಡಿಯಾಗ್ನೋಸ್ಟಿಕಲ್ ಡಿಸ್ಕಾಲ್ಕುಲಿಯಾ: ಮಗುವು ಗಣಿತದ ಚಿಹ್ನೆಗಳನ್ನು ಮತ್ತು ಅವುಗಳ ಸಂಬಂಧಗಳನ್ನು ಅರಿತು ಹೊಂದಿಸುವಲ್ಲಿ ಅಥವಾ ಜೋಡಿಸುವಲ್ಲಿ ಕಷ್ಟಪಡುವುದು.

ಆಪರೇಷನಲ್ ಡಿಸ್ಕಾಲ್ಕುಲಿಯಾ: ಅಂಕಗಣಿತದ ಲೆಕ್ಕಗಳನ್ನು ಮಾಡುವುದರಲ್ಲಿ ಮಗುವಿಗೆ ಕಷ್ಟವಾಗುವುದು.

**ಮಗುವಿಗೆ ನೆರವು**

- ಅಡುಗೆ ಮಾಡುವುದು: ಪೋಷಕರು ಮತ್ತು ಮಗು ಒಟ್ಟಿಗೆ ಸೇರಿ ಅಡುಗೆ ಮಾಡಲು ಒಂದು ತಿನಿಸನ್ನು ಆಯ್ಕೆ ಮಾಡುವುದು. ಅದಕ್ಕೆ ಬೇಕಾಗುವ ಪದಾರ್ಥಗಳನ್ನು ಪಟ್ಟಿ ಮಾಡಿ ಅದನ್ನು ಒದಗಿಸುವ ಜವಾಬ್ದಾರಿಯನ್ನು ಮಗುವಿಗೆ ನೀಡುವುದು. ಉದಾಹರಣೆಗೆ, 1 ಕೆಜಿ ಹೂಕೋಸು, 3 ಕ್ಯಾರೆಟ್, 2 ಈರುಳ್ಳಿ, 6 ತುಂಡು ದೊಣ್ಣೆ ಮೆಣಸಿನಕಾಯಿ ಅಥವಾ ತರಕಾರಿಗಳನ್ನು 5 ಭಾಗಗಳಾಗಿ ಕತ್ತರಿಸುವಂತೆ ಹೇಳುವುದು.
- ಗಡಿಯಾರದೊಂದಿಗೆ ಆಟವಾಡುವುದು: ಒಂದು ನಿರ್ದಿಷ್ಟ ಸಮಯವಾದಾಗ ಬಂದು ಹೇಳಬೇಕೆಂಬ ಕೆಲಸವನ್ನು ಮಗುವಿಗೆ ಕೊಡುವುದು. ನಂತರ ಅದನ್ನು ಎಷ್ಟು ಜವಾಬ್ದಾರಿಯಿಂದ ನಿರ್ವಹಿಸಿರುವೆ ಎಂದು ಹೇಳುತ್ತಾ ನೀನೀಗ ದೊಡ್ಡವನಾಗಿದ್ದೀಯ / ದೊಡ್ಡವಳಾಗಿದ್ದೀಯ ಎಂದು ಹೊಗಳುವುದು.
- ಅಂಗಡಿಗೆ ಹೋಗುವುದು ಅಥವಾ ಶಾಪಿಂಗ್ ಮಾಡುವುದು: ಮಗು ತಾನೇ ಖುದ್ದಾಗಿ ಅಂಗಡಿಗೆ ಹೋಗಿ ವಸ್ತುಗಳನ್ನು ಖರೀದಿಸಿ ತರುವ ಜವಾಬ್ದಾರಿಯನ್ನು ನೀಡುವುದು. ಪರ್ಸಿನಲ್ಲಿರುವ ಹಣವನ್ನು ಎಣಿಸಿದಾಗ ಮಗುವಿಗೆ ಸ್ವಲ್ಪಮಟ್ಟಿಗೆ ಸಂಖ್ಯೆಗಳ ಪರಿಕಲ್ಪನೆಗಳು ಬರಲು ಸಹಾಯವಾಗುವುದು.
- ಎಣಿಸುವುದು: ರಸ್ತೆಯಲ್ಲಿ ಕಾಣುವ ಕಾರುಗಳನ್ನು ಎಣಿಸುವುದು, ರಸ್ತೆಯಲ್ಲಿ ಹೋಗುವ ಜನರನ್ನು ಎಣಿಸುವುದು, ಬಿಳಿ ಶೂ ಧರಿಸಿದವರನ್ನು ಎಣಿಸುವುದು. ಮೆಟ್ಟಲು ಹತ್ತುವಾಗ ಮೆಟ್ಟಿಲುಗಳ ಸಂಖ್ಯೆಯನ್ನು ಎಣಿಸುವುದು.
- ಟೆಲಿಫೋನ್ ನಂಬರನ್ನು ನೆನಪಿಟ್ಟುಕೊಳ್ಳುವುದು: ತನ್ನ ಅಜ್ಜಿಯ ಫೋನಿನ ಮೊದಲ ಮೂರು ಅಂಕಿಗಳನ್ನು ಮಗು ಮತ್ತು ಮಿಕ್ಕದ್ದನ್ನು ದೊಡ್ಡವರು ನೆನಪಿನಲ್ಲಿಟ್ಟು–ಕೊಳ್ಳುವುದು. ನಂತರ ಇಬ್ಬರೂ ಒಟ್ಟಿಗೆ ಸೇರಿ ಅಜ್ಜಿಗೆ ಫೋನ್ ಮಾಡಿ ವಿಚಾರಿಸುವುದು. ಇದನ್ನು ಚೆನ್ನಾಗಿ ಮಾಡಿದರೆ ಸಂಭ್ರಮಿಸುವುದು.
- ಅಂಗಡಿಗಳು: ಮಗುವು ಅಂಗಡಿಯಲ್ಲಿ ಅಥವಾ ಶಾಲೆಯಲ್ಲಿ ಅಂಗಡಿ ನಡೆಸುವುದು. ಅಲ್ಲಿ ಮನೆಯ ಅಥವಾ ಶಾಲೆಯ ಕೆಲವು ವಸ್ತುಗಳನ್ನು ಮಾರಾಟಕ್ಕಿಡುವುದು. ಪ್ರತಿಯೊಂದಕ್ಕೂ 'ದರಪಟ್ಟಿ' ಅಂಟಿಸುವುದು. ಶಾಲೆಯಲ್ಲಿ ಶಿಕ್ಷಕರು ಮತ್ತು ಶಾಲಾ ಗೆಳೆಯರು, ಹಾಗೆಯೇ ಮನೆಯಲ್ಲಿ ಪೋಷಕರು ಮತ್ತು ಇತರ ಕುಟುಂಬದ ಸದಸ್ಯರು ಗ್ರಾಹಕರಾಗುವುದು. ಈ ಆಟದ ಮೂಲಕ ಪ್ರಮಾಣ, ಕೂಡುವ ಮತ್ತು ಕಳೆಯುವ ಲೆಕ್ಕ ಮತ್ತು ಹಣವನ್ನು ನಿಭಾಯಿಸುವುದನ್ನು ಮಗು ಕಲಿಯುತ್ತದೆ. ಇದು ಗಣಿತವನ್ನು ಕಲಿಯಲು ಉತ್ತಮ ಅಭ್ಯಾಸವಾಗುತ್ತದೆ.

### ಬರಹ ದೋಷ (Dysgraphia)

ಡಿಸ್‌ಗ್ರಾಫಿಯಾ ಎನ್ನುವುದು ಒಬ್ಬ ವ್ಯಕ್ತಿಯ ಕೈಬರಹ ಸಾಮರ್ಥ್ಯ ಮತ್ತು ಸೂಕ್ಷ್ಮ ಚಲನಾ ಕೌಶಲದ ಒಂದು ಕಲಿಕಾ ಅಸಾಮರ್ಥ್ಯ–ವಾಗಿದೆ. ಅಸ್ಪಷ್ಟವಾಗಿ ಬರೆಯುವುದು, ಪದಗಳ ಮಧ್ಯೆ ಸಮವಾಗಿ ಅಂತರವಿಲ್ಲದಿರುವುದು. ಪುಸ್ತಕದಲ್ಲಿ ಬರೆಯುವಾಗ ಸರಿಯಾಗಿ ಸ್ಥಳ ಬಿಡದಿರುವುದು. ಪದಗಳ ಮಧ್ಯೆ ಸರಿಯಾಗಿ ಅಂತರವಿಲ್ಲದೆ ಬರಹ ಅಸ್ತವ್ಯಸ್ತವಾಗಿರುವುದು. ವಿಪರೀತವಾಗಿ ಕಾಗುಣಿತ ದೋಷಗಳು, ಬರಹದ ರಚನೆಯಲ್ಲಿ ತೊಂದರೆ ಮತ್ತು ಏಕಕಾಲದಲ್ಲಿ ಯೋಚಿಸಿ ಬರೆಯಲು ಕಷ್ಟವಾಗುವುದು, ಇತ್ಯಾದಿ ದೋಷಗಳು ಕಂಡು–ಬರುತ್ತವೆ.

**ಗುಣಲಕ್ಷಣಗಳು**

- ಅಕ್ಷರಗಳ ಗಾತ್ರ ಮತ್ತು ಆಕಾರ ಸಮನಾಗಿ ಇಲ್ಲದಿರುವುದು, ಅಕ್ಷರಗಳನ್ನು ಪೂರ್ತಿಮಾಡದಿರುವುದು, ಇಂಗ್ಲಿಷ್ ಭಾಷೆಗೆ ಸಂಬಂಧಿಸಿದಂತೆ ದೊಡ್ಡ ಅಕ್ಷರ ಮತ್ತು ಚಿಕ್ಕ ಅಕ್ಷರಗಳೆರಡನ್ನೂ ಒಟ್ಟೊಟ್ಟಾಗಿ ಬರೆಯುವುದು. ಕೈಹಿಡಿತ ಸರಿಯಾಗಿರದ ಕಾರಣ ಅಕ್ಷರಗಳು ಸೊಟ್ಟಗಾಗಿರುವುದು.
- ಬರೆಯುವ ಕೆಲಸವನ್ನು ಪೂರ್ತಿ ಮಾಡಲು ನಿರಾಕರಿಸುವುದು ಅಥವಾ ಹಿಂಜರಿಕೆ. ನಿಧಾನವಾಗಿ ಬರೆಯುವುದರಿಂದ ಅಥವಾ ಬರೆಯಲು ಸಾಧ್ಯವಾಗದೆ ನಿರಾಶೆಯಿಂದ ಅಳುವುದು ಮತ್ತು ಮಾನಸಿಕ ಒತ್ತಡ ಉಂಟಾಗುವುದು. ಬರೆಯುವಾಗ ತನ್ನಷ್ಟಕ್ಕೆ ತಾನು ಮಾತನಾಡುವುದು.

**ಡಿಸ್‌ಗ್ರಾಫಿಯಾದ ವಿಧಗಳು**

ಡಿಸ್ಲೆಕ್ಸಿಕ್ ಡಿಸ್‌ಗ್ರಾಫಿಯಾ ಎಂಬ ದೋಷದಲ್ಲಿ ಮಗುವು ತಾನೇ ಆಲೋಚಿಸಿ ಬರೆಯುವ ಬರಹವು ಅಸ್ಪಷ್ಟವಾಗಿರುವುದು ಅಥವಾ ಗಜಿಬಿಜಿಯಾಗಿ ಕಾಣುವುದು. ಆದರೆ ನಕಲು ಮಾಡಿದ ಬರಹ ಚೆನ್ನಾಗಿರುತ್ತದೆ. ಅಲ್ಲೂ ಕಾಗುಣಿತ ಸರಿಯಾಗಿರುವುದಿಲ್ಲ.

- ಮೋಟಾರು ಡಿಸ್‌ಗ್ರಾಫಿಯಾ ದೋಷವು ಸೂಕ್ಷ್ಮಚಲನಾ ಕೌಶಲ ದೋಷದಿಂದ (Fine motor Skills) ಉಂಟಾಗುವುದು. ಮಗುವಿನ ಕೈ ಚಲನಾ ಸಾಮರ್ಥ್ಯದಲ್ಲಿ ಕುಂದು ಕಾಣುವುದು. ಹಾಗೆಯೇ ಸ್ನಾಯು ಚಲನೆಯಲ್ಲಿ ದೋಷವಿರುವುದು. ಇದರೊಂದಿಗೆ ಅನಿರ್ದಿಷ್ಟ ರೀತಿಯ ಚಲನಾ (ಮೋಟಾರ್) ಅಸಾಮರ್ಥ್ಯತೆ ಇರಬಹುದು ಅಥವಾ ಇಲ್ಲದಿರಬಹುದು. ಸಾಮಾನ್ಯವಾಗಿ ಮಗುವಿನ ಬರವಣಿಗೆ ಅಸ್ಪಷ್ಟವಾಗಿರುವುದು. ನೋಡಿಕೊಂಡು ನಕಲು ಮಾಡಲು ಮತ್ತು ಒಂದು ಚಿಕ್ಕ ಪ್ಯಾರಾ ಬರೆಯಲು ಬಹಳ ಶ್ರಮವಹಿಸಬೇಕಾಗುವುದು.
- ಸ್ಪೇಷಿಯಲ್ ಡಿಸ್‌ಗ್ರಾಫಿಯಾ: ಬರವಣಿಗೆಯ ವೇಳೆ ಪದಗಳ ನಡುವೆ ಜಾಗ ಬಿಡುವುದನ್ನು ಅರ್ಥೈಸುವಲ್ಲಿ ತೊಂದರೆ.ಹಾಳೆಯ ಗೆರೆಗಳ ಮೇಲೆ ಬರೆಯಲು ಮತ್ತು ಪದಗಳ ಮಧ್ಯೆ ಜಾಗ ಬಿಡಲು ಕಷ್ಟವಾಗುವುದು.
- ಫೋನಾಲಾಜಿಕಲ್ ಡಿಸ್‌ಗ್ರಾಫಿಯಾ: ಬರಹ ಮತ್ತು ಕಾಗುಣಿತಗಳಲ್ಲಿ ಅಡಚಣೆಗಳು ಕಾಣುವುದು. ಪರಿಚಯವಿಲ್ಲದ ಪದಗಳ ಕಾಗುಣಿತ, ಪದಗಳಲ್ಲದ ಸಂಕೇತಗಳನ್ನು ಬರೆಯುವುದರಲ್ಲಿ ಕಷ್ಟವಿರುವುದು. ಧ್ವನಿಗೆ ಹೊಂದದ

ಪದಗಳನ್ನು (ಅನಿಯುಮಿತ) ಬರೆಯುವಾಗ ತೊಂದರೆಯಿರುವುದು.

- ಲೆಕ್ಸಿಕಲ್ ಡಿಸ್‌ಗ್ರಾಫಿಯಾ: ಮಗುವಿಗೆ ಕಾಗುಣಿತ ಬರುತ್ತದೆ. ಆದರೆ ಒಂದು ಪದದ ಧ್ವನಿ ಮತ್ತು ಅಕ್ಷರ ವಿನ್ಯಾಸಗಳ ನಡುವೆ ಹೊಂದಾಣಿಕೆಯಿಲ್ಲದಿದ್ದರೆ ಆ ಪದಗಳನ್ನು ತಪ್ಪಾಗಿ ಬರೆಯುತ್ತದೆ. ಉಚ್ಚರಿಸುವ ಅಕ್ಷರಗಳಂತೆ ಪದಗಳು ಇಲ್ಲದ ಭಾಷೆಗಳಲ್ಲಿ ಸಾಮಾನ್ಯವಾಗಿ ಈ ದೋಷವು ಹೆಚ್ಚು ಕಾಣುವುದು. ಉದಾಹರಣೆಗೆ, ಧ್ವನಿ ರೂಪದ ಭಾಷೆಯಾಗಿರುವ ಭಾರತೀಯ ಭಾಷೆಗಳಿಗಿಂತ ಇಂಗ್ಲಿಷ್ ಮತ್ತು ಫ್ರೆಂಚ್ ಭಾಷೆಗಳಲ್ಲಿ ಈ ದೋಷಕಾಣುವುದು. ಅಂದರೆ ಅಕ್ಷರಗಳ ಉಚ್ಚಾರ ಮತ್ತು ಪದಗಳು ಒಂದೇ ರೀತಿಯಾಗಿದ್ದರೆ ಮಗುವಿಗೆ ಬರೆಯುವುದು ಸುಲಭವಾಗುವುದು.

**ಒಬ್ಬ ವಿದ್ಯಾರ್ಥಿ ಹೀಗೆ ಹೇಳುತ್ತಾನೆ:**
ಬರೆಯುವುದೆಂದರೆ ಖಂಡಿತವಾಗಿ ಎಲ್ಲಕ್ಕಿಂತ ಬಹಳ ಕಷ್ಟವಾದ ಕೆಲಸ. ಪೂರ್ಣ ವಿರಾಮಗಳು ಮತ್ತು ದೊಡ್ಡ ಅಕ್ಷರಗಳಂತಹ (ಇಂಗ್ಲಿಷಿನಲ್ಲಿ) ಅಗತ್ಯವಿರುವ ಎಲ್ಲವನ್ನೂ ನೆನಪಿಟ್ಟು–ಕೊಳ್ಳುವುದು ತುಂಬಾ ಕಷ್ಟ. ಕತೆಯ ಮೇಲೆ ಗಮನವಿದ್ದಾಗ ಪದಗಳನ್ನು ಹೇಗೆ ಉಚ್ಚರಿಸಬೇಕೆಂದು ಯೋಚಿಸುವುದು ನನಗೆ ಅಸಾಧ್ಯ. ಹಾಗೆಯೇ ನಾನು ಯಾವುದರ ಬಗ್ಗೆ ಬರೆಯುತ್ತಿದ್ದೇನೆ ಎಂದು ನೆನಪಿಟ್ಟುಕೊಳ್ಳುವುದು ತುಂಬಾ ಕಷ್ಟ... ಕೆಲವೇ ವಾಕ್ಯಗಳಲ್ಲಿ ಬರೆಯುವುದು ಸುಲಭ ಎಂದು ನಾನು ಭಾವಿಸುತ್ತೇನೆ. ಆಗ ನನ್ನ ಕೈಗೆ ಹೆಚ್ಚು ನೋವಾಗುವುದಿಲ್ಲ. ನನ್ನ ಹಿಂದಿನ ಶಾಲೆಯಲ್ಲಿ ಶಿಕ್ಷಕರು ನನ್ನನ್ನು ದೂರುತ್ತಿದ್ದರು. ಆದರೆ ನಾನು ಬಹಳ ಸಣ್ಣ ಕಥೆಗಳನ್ನು ಬರೆಯುತ್ತಾ ಹೋದೆ. ಅವರಿಗೆ ನನ್ನ ಕಷ್ಟ ಏನೆಂದು ಗೊತ್ತಿಲ್ಲ, ಬರೆಯಲು ಹೆಣಗಾಡುವುದು ಹೇಗೆ ಎಂದು ಅರ್ಥವಾಗುವುದಿಲ್ಲ. ನಾನು ಎಷ್ಟೇ ಕಷ್ಟ ಪಟ್ಟರೂ ಕಾಗದ ಜಾರುತ್ತದೆ. ಇಡಿ ಹಾಳೆ ಅವ್ಯವಸ್ಥೆ ಮತ್ತು ತಪ್ಪುಗಳಿಂದ ಕೂಡಿರುತ್ತದೆ ಏಕೆಂಬುದರ ಬಗ್ಗೆ ಅವರಿಗೆ ಅರ್ಥವಾಗುವುದೇ ಇಲ್ಲ. ನನ್ನ ಬರಹ ಯಾವಾಗಲೂ ಗೋಜಲಾಗಿರುತ್ತದೆ ಎನ್ನುತ್ತಾರೆ. ನಾನು ಎಷ್ಟು ಕಷ್ಟಪಟ್ಟು ಬರೆಯಲು ಪ್ರಯತ್ನಿಸುತ್ತೇನೆ ಎಂದು ಅವರಿಗೆ ಅರ್ಥಮಾಡಿಕೊಳ್ಳಲು ಸಾಧ್ಯವಾಗುವುದೇ ಇಲ್ಲ. ನಾನು ಎಷ್ಟೇ ಎಚ್ಚರಿಕೆಯಿಂದ ಬರೆಯಲು ಪ್ರಯತ್ನಿಸಿದರೂ ನನ್ನ ಬರಹ ಇತರ ಮಕ್ಕಳಂತಿರುವುದಿಲ್ಲ. ಪದಗಳು ಹೇಗೆ ಕಾಣಬೇಕೆಂದು ನಾನು ಬಯಸುತ್ತೇನೋ ಆ ರೀತಿ ಬರುವುದೇ ಇಲ್ಲ.

ಈ ವಿದ್ಯಾರ್ಥಿ ಬಹಳ ಪ್ರತಿಭಾವಂತ. ಅವನು ಅತ್ಯಧಿಕ ಬುದ್ಧಿಮತ್ತೆ ಹೊಂದಿದ್ದಾನೆ. ಅವನ ಮೌಖಿಕ ಮತ್ತು ಓದುವ ಸಾಮರ್ಥ್ಯ ಅತ್ಯುತ್ತಮವಾಗಿದೆ.ಈತ ಬರೆಯಲು ಬಹಳ ಕಷ್ಟಪಡುತ್ತಾನಾದರೂ, ಅತ್ಯುತ್ತಮ ಕಂಪ್ಯೂಟರ್ ತಿಳವಳಿಕೆ ಹೊಂದಿದ್ದಾನೆ.

**ಮಗುವಿಗೆ ನೆರವು**

- ಅಕ್ಷರಗಳನ್ನು ಮುಟ್ಟಿನೋಡುವುದು: ಅಕ್ಷರಗಳನ್ನು ನೋಡುವುದರ ಬದಲು ಅದನ್ನು ಮುಟ್ಟಿ ಅದರ ಸ್ಪರ್ಶ ಭಾವ ಉಂಟಾಗಲು ಹೆಚ್ಚು ಗಮನಹರಿಸುವುದು. ಮಗುವಿನ ಬೆನ್ನಿನ ಮೇಲೆ ಅಥವಾ ಅಂಗೈಯಲ್ಲಿ ಅಕ್ಷರವನ್ನು ಒತ್ತಿ ಬರೆದು ಅಕ್ಷರ ಹೇಗಿದೆಯೆಂಬ ಅನುಭವ ಉಂಟುಮಾಡುವುದು ಮತ್ತು ಅದನ್ನು ಕಾಗದದ ಮೇಲೆ ಮಗುವಿಗೆ ಬರೆಯಲು ಆಗುತ್ತದೆಯೇ ಎಂದು ಪರೀಕ್ಷಿಸುವುದು.
- ದೊಡ್ಡದಾಗಿ ಬರೆಯುವುದು: ಅಕ್ಷರಗಳು ಹೇಗೆ ರೂಪುಗೊಳ್ಳುತ್ತವೆಂಬುದು ನೆನಪಿರದ ಕಾರಣ ಡಿಸ್–ಗ್ರಾಫಿಯಾ ಉಂಟಾಗುವುದು. ಬಹುವಿಧದ ಸಂವೇದನಾ ಸಾಮಗ್ರಿ (Multi-sensory Materials) ಬಳಸಿ ದೊಡ್ಡ ಅಕ್ಷರಗಳನ್ನು ರಚಿಸಿದರೆ ಮಗುವಿಗೆ ನೆರವಾಗುವುದು.
- ಜೇಡಿಮಣ್ಣನ್ನು ಬಳಸುವುದು: ಜೇಡಿಮಣ್ಣಿನಲ್ಲಿ ಸುರುಳಿಗಳನ್ನು ಮಾಡಿ ಅಕ್ಷರಗಳನ್ನು ರಚಿಸುವುದು. ಇದು ಕೈಬಲ ಮತ್ತು ಸೂಕ್ಷ್ಮ ಚಲನಾ (ಮೋಟಾರ್) ಕೌಶಲವನ್ನು (Fine motor skills) ಹೆಚ್ಚಿಸುವುದು. ಇದರ ಜೊತೆಗೆ ಆಕಾರಗಳು ನೆನಪಿನಲ್ಲಿ ಉಳಿಯುವುದು.
- ಒಂದು ಪದದ ಮೊದಲ ಅಕ್ಷರದಿಂದ ಪದಗಳನ್ನು ರಚಿಸುವುದು: ಉದಾಹರಣೆಗೆ, ಇಂಗ್ಲಿಷಿನ POWER ಎಂಬ ಪದವನ್ನು ತೆಗೆದುಕೊಳ್ಳೋಣ.

P (ಪಿ)–ಪ್ರಿಪೇರ್, ಎಲ್ಲಾ ಆಲೋಚನೆಗಳ ಪಟ್ಟಿ ಮಾಡುವುದು
O(ಒ)–ಆರ್ಗನೈಸ್, ಆಯೋಜಿಸುವುದು ಮತ್ತು ಜೋಡಿಸುವುದು
W(ಡಬ್ಲ್ಯು)–ರೈಟ್, ಕರಡನ್ನು ಬರೆಯುವುದು
E(ಇ)–ಎಡಿಟ್, ದೋಷಗಳನ್ನು ಹುಡುಕುವುದು ಮತ್ತು ತಿದ್ದುಪಡಿ ಮಾಡುವುದು
R(ಆರ್)– ರಿವೈಸ್, ಅಂತಿಮ ಕರಡನ್ನು ಬರೆಯುವುದು.

ಹಿರಿಯ ಮಕ್ಕಳಲ್ಲಿ ಈ ಅಭ್ಯಾಸವು ಬಹಳ ಪರಿಣಾಮಕಾರಿ–ಯಾಗುವುದು ಮತ್ತು ಅವರು ಅದನ್ನು ಸುಲಭವಾಗಿ ಕಲಿಯುವರು. ಇದೇ ತಂತ್ರ ಬಳಸಿ ತರಗತಿಯ ಇತರ ವಿದ್ಯಾರ್ಥಿಗಳು ಕೂಡಾ ನೆರವಾಗುವುದು.

ಡಿಸ್ಲೆಕ್ಸಿಯಾ ಎಂಬುದು ಓದಲು ಮತ್ತು ಇದಕ್ಕೆ ಸಂಬಂಧಿಸಿ–ದಂತಹ ಭಾಷಾ ಸಂಸ್ಕರಣಾ ಕೌಶಲದ ಮೇಲೆ ಪರಿಣಾಮ ಬೀರುವ ಒಂದು ನಿರ್ದಿಷ್ಟ ಕಲಿಕಾ ದೋಷವಾಗಿದೆ. ಮಗುವಿಗೆ ಸಲೀಸಾಗಿ ಓದಲು ಕಷ್ಟವಾಗುವುದು. ಇದಲ್ಲದೆ ನಿಯಮ ವಿಘಟನೆ (ಡಿಕೋಡಿಂಗ್), ಗ್ರಹಿಕೆ ಅಥವಾ ಧಾರಣಶಕ್ತಿ, ವಿಷಯಗಳನ್ನು ನೆನಪಿಸಿಕೊಳ್ಳುವುದು ಅಥವಾ ಸ್ಮರಣೆ, ಬರಹ, ಕಾಗುಣಿತಗಳಲ್ಲಿ ಕಷ್ಟವಾಗುವುದು. ಕೆಲವೊಮ್ಮೆ ಮಾತನಾಡಲು ಕೂಡ ಮಗುವು ಕಷ್ಟಪಡುವುದು.ಈ ದೋಷವು ಬೇರೆಬೇರೆ ಪ್ರಮಾಣದಲ್ಲಿ ಮಕ್ಕಳಲ್ಲಿ ಕಾಣಿಸಿಕೊಳ್ಳಬಹುದು. ಜೊತೆಗೆ ಕೆಲವರಿಗೆ ಇದಕ್ಕೆ ಸಂಬಂಧಿಸಿದ ಇತರೆ ವೈಕಲ್ಯಗಳು (Co-morbidities) ಕಾಣಿಸಿಕೊಳ್ಳಬಹುದು.

**ಗುಣಲಕ್ಷಣಗಳು**

- ಮಗುವು ಬಹಳ ಬುದ್ಧಿಶಾಲಿಯಾಗಿ ಚುರುಕಾಗಿದ್ದು ತನ್ನ ವಿಚಾರವನ್ನು ಸ್ಪಷ್ಟವಾಗಿ ಹೇಳುವಂತೆ ಕಾಣಿಸಬಹುದು. ಆದರೆ ತರಗತಿಯಲ್ಲಿ ಓದಲು, ಬರೆಯಲು, ಪದಗಳನ್ನು ಉಚ್ಚರಿಸಲು ಅಥವಾ ಕಾಗುಣಿತಗಳಲ್ಲಿ ಅಸಾಮರ್ಥ್ಯತೆಯನ್ನು ಹೊಂದಿರುವುದು. ಹೀಗಾಗಿ ಆ ಮಕ್ಕಳನ್ನು ಸೋಮಾರಿ, ಅಸಡ್ಡೆ ತೋರಿಸುವ, ಕಷ್ಟಪಟ್ಟು ಓದದ ಮಗು ಎಂದು ಹೆಸರಿಸುವುದು ತೀರಾ ಸಾಮಾನ್ಯ.
- ಮಗುವು ಹೆಚ್ಚು ಬುದ್ಧಿಮತ್ತೆ (IQ) ಹೊಂದಿರುತ್ತದೆ. ಆದರೆ ಶಾಲೆಯಲ್ಲಿ ಪರೀಕ್ಷೆಗಳನ್ನು ಇಷ್ಟಪಡುವುದಿಲ್ಲ. ಕಲೆ, ನಾಟಕ, ಕ್ರೀಡೆ, ವಿನ್ಯಾಸ ರಚನೆ, ವ್ಯವಹಾರ ಮುಂತಾದ ವೈವಿಧ್ಯಮಯ

ಪ್ರತಿಭೆಗಳನ್ನು ಹೊಂದಿದ್ದರೂ ಮಗುವಿನಲ್ಲಿ ಆತ್ಮಾಭಿಮಾನ ಕಡಿಮೆಯಿರುವುದು ಅಥವಾ ಕೀಳರಿಮೆ ಕಂಡುಬರುವುದು.

- ಏಕಾಗ್ರತೆಯಲ್ಲಿ ಕುಂದು ಕಾಣುವುದು. ಅಂದರೆ ಒಂದು ವಿಷಯದಲ್ಲಿ ಗಮನವಿಡುವುದರಲ್ಲಿ ಕಷ್ಟವಿರುವುದು. ಮಗುವು ಅತಿ ಚುರುಕಾದ ವ್ಯಕ್ತಿಯಾಗಿ (Hyperactive) ಅಥವಾ ಕನಸುಗಾರನಾಗಿ ಕಾಣಬಹುದು.
- ಪ್ರದರ್ಶನಗಳು, ಪ್ರಯೋಗಗಳು, ಅವಲೋಕನ ಮತ್ತು ದೃಶ್ಯ ಸಾಧನಗಳು ಹಾಗೆಯೇ ಸ್ವಂತ ಅನುಭವ ಅಥವಾ ಅಭ್ಯಾಸದ ಮೂಲಕ ಮಗುವು ಚೆನ್ನಾಗಿ ಕಲಿಯುವುದು .
- ಆಕಾರದಲ್ಲಿ ಹೋಲುವ ಅಕ್ಷರಗಳ ವ್ಯತ್ಯಾಸಗಳನ್ನು ಗುರುತಿಸುವುದರಲ್ಲಿ ಗೊಂದಲವಿರುವುದು. ಉದಾಹರಣೆಗೆ, ಇಂಗ್ಲಿಷಿನ d, p, q, g ಎಂಬ ಅಕ್ಷರಗಳ ವ್ಯತ್ಯಾಸಗಳನ್ನು ಅರಿಯಲು ಕಷ್ಟವಾಗುವುದು. ಮಗುವಿಗೆ bird ಎಂಬ ಪದವು drib ಆಗಿ ಕಾಣಬಹುದು.
- ಪ್ರಮುಖವಾಗಿ ಇಂಗ್ಲಿಷಿನಲ್ಲಿ ಅಕ್ಷರಗಳು ಮತ್ತು ಅವುಗಳ ಉಚ್ಚಾರಣಾ ಶಬ್ದಗಳು ಸಂಬಂಧಿಸಿರದ ಕಾರಣ ಗಟ್ಟಿಯಾಗಿ ಓದಿದರೆ ಮಗುವಿಗೆ ತೀವ್ರ ಮಾನಸಿಕ ಒತ್ತಡ ಉಂಟಾಗುವುದು. ಹೀಗಾಗಿ ಒಂದೇ ಸಾಲನ್ನು ಅಥವಾ ಪ್ಯಾರಾವನ್ನು ಮತ್ತೆಮತ್ತೆ ಓದುವುದು ಕಂಡುಬರುವುದು.

**ಡಿಸ್ಲೆಕ್ಸಿಯಾ ವಿಧಗಳು**

ಧ್ವನಿ ಜ್ಞಾನ ದೋಷ: ಮಗುವಿಗೆ ಪದಗಳಲ್ಲಿರುವ ಧ್ವನಿ(ಶಬ್ದ)ಗಳನ್ನು ಬೇರ್ಪಡಿಸಲು ಮತ್ತು ಆ ಧ್ವನಿಗಳನ್ನು ಬರಹದ ಚಿಹ್ನೆಗಳೊಂದಿಗೆ ಹೊಂದಿಸಲು ಕಷ್ಟವಿರುವುದು. ಧ್ವನಿ ಸಂಸ್ಕರಣೆಯ ಸಮಸ್ಯೆಯಿಂದಾಗಿ ಪದಗಳ ವಿಘಟನೆ ಅಥವಾ ಡಿಕೋಡ್ ಮಾಡಲು ಕಷ್ಟವಾಗುವುದು.

- ಮೇಲ್ಮೈ ದೋಷ: ಮಗುವು ಹೊಸ ಪದಗಳನ್ನು ಉಚ್ಚರಿಸಬಹುದು, ಆದರೆ ಸಾಮಾನ್ಯ ಪದಗಳನ್ನು ನೋಡಿ ಗುರುತಿಸುವುದರಲ್ಲಿ ಕಷ್ಟಪಡುವುದು. ಕಾಗುಣಿತ ಬೇರೆಯಾಗಿ ಉಚ್ಚಾರಣೆ ಭಿನ್ನವಾದಾಗ ಕಷ್ಟವಾಗುವುದು. ಉದಾಹರಣೆಗೆ, ಇಂಗ್ಲಿಷಿನಲ್ಲಿ weight ಎಂಬ ಪದವನ್ನು ವೇಟ್ ಎಂದು ಉಚ್ಚರಿಸಲಾಗುವುದು. ಇಲ್ಲಿ g ಅಕ್ಷರವನ್ನು ಉಚ್ಚರಿಸುವುದಿಲ್ಲ. ಹಾಗೆಯೇ debt ಎಂಬ ಪದವನ್ನು ಡೆಟ್ ಎಂದು ಉಚ್ಚರಿಸಲಾಗುವುದು. ಇಲ್ಲಿ b ಅಕ್ಷರವನ್ನು ಉಚ್ಚರಿಸುವುದಿಲ್ಲ. ಇಂತಹ ಪದಗಳನ್ನು ಉಚ್ಚರಿಸಲು ಮಗುವಿಗೆ ಕಷ್ಟವಾಗುವುದು.
- ತ್ವರಿತ ಉಚ್ಚಾರಣಾ ದೋಷ: ಡಿಸ್ಲೆಕ್ಸಿಯಾ ಇರುವ ಅನೇಕ ಮಕ್ಕಳಿಗೆ ಅಕ್ಷರಗಳು, ಸಂಖ್ಯೆಗಳು ಮತ್ತು ಬಣ್ಣಗಳನ್ನು ನೋಡುತ್ತಾ ಹೆಸರುಗಳನ್ನು ವೇಗವಾಗಿ ಹೇಳಲು ತೊಂದರೆಯಾಗುವುದು.

**ಮಗುವಿಗೆ ನೆರವು**

- ಓದುವುದು: ಮಗುವಿನ ಮುಂದೆ ಏರುಧ್ವನಿಯಲ್ಲಿ ಓದುವುದು. ಮಗುವು ಏನು ಓದಲು ಇಷ್ಟಪಡುತ್ತದೆಯೋ ಅದನ್ನು ಓದಲು ಬಿಡುವುದು. ಒಂದು ಚಿಕ್ಕ ಪ್ಯಾರಾವನ್ನು ಹಲವು ಬಾರಿ ಓದಲು ಹೇಳುವುದು. ಇಂತಹ ಅಭ್ಯಾಸಗಳಿಗೆ ಪ್ರೋತ್ಸಾಹ ನೀಡುವುದು.
- ಶಬ್ದಭಂಡಾರ ಹೆಚ್ಚಿಸುವುದು: ತಾನು ಪ್ರತಿದಿನ ಕಲಿತ ಹೊಸ ಪದವನ್ನು ಪೋಷಕರಿಗೆ ಅಥವಾ ಶಿಕ್ಷಕರಿಗೆ ಹೇಳಬೇಕೆಂದು ಮಗುವಿಗೆ ಸೂಚಿಸುವುದು. ಆ ಪದದ ಅರ್ಥದ ಬಗ್ಗೆ ಮಾತನಾಡುವುದು. ಅದನ್ನು ಶಬ್ದಕೋಶದಲ್ಲಿ ಹುಡುಕುವುದು. ಆ ಪದವನ್ನು ಬಳಸಿ ವಾಕ್ಯಗಳನ್ನು ರಚಿಸುವಂತೆ ಮಾಡುವುದು.
- ಆಟಗಳು: ಒಂದು ಪದದಲ್ಲಿ ಎಷ್ಟು ಉಚ್ಚಾರ ಅಕ್ಷರಗಳು ಇವೆಯೆಂದು ತಿಳಿಯಲು ಚಪ್ಪಾಳೆ ತಟ್ಟಿ ಹೇಳಿಕೊಡುವುದು. ಒಂದು ಪದದ ಶಬ್ದಗಳನ್ನು ಬೇರೆ ಮಾಡುವುದು. ನಂತರ ಅವುಗಳನ್ನು ಒಟ್ಟಿಗೆ ಸೇರಿಸಿ ಹೇಳುವುದು. ಹಾಡುಗಳು, ಕವನಗಳು ಮತ್ತು ನರ್ಸರಿ ಪ್ರಾಸಪದಗಳ ಬಗ್ಗೆ ಗಮನಹರಿಸುವಂತೆ ಮಾಡುವುದು. ಇದನ್ನು ಇನ್ನೂ ಚೆನ್ನಾಗಿ ಹೇಳಿಕೊಡಲು ಆಪ್ಸ್ (Apps), ಕಲಿಕಾ ಆಟಗಳ ವೆಬ್‌ಸೈಟ್‌ಗಳು ಮತ್ತು ಡಿಜಿಟಲ್ ಕಲಿಕಾ ಆಟಗಳ ಕಂಪ್ಯೂಟರ್ ಸಂಪನ್ಮೂಲಗಳನ್ನು ಬಳಸುವುದು.
- ಪಠ್ಯ ಅಭ್ಯಾಸದ ಮುಂಚಿನ ಕಲಿಕೆಗೆ ಅಥವಾ ಪೂರ್ವ ಭೋದನೆಗೆ ಪ್ರೋತ್ಸಾಹ: ಪಠ್ಯಪುಸ್ತಕವನ್ನು ಓದುವ ಮೊದಲು ಎಲ್ಲವನ್ನೂ ಬದುಕಿನ ಅನುಭವಗಳಿಗೆ ಜೋಡಿಸುವುದು. ಕಣ್ಣಿಗೆ ಕಾಣುವ ವಸ್ತುಗಳು, ಆಟದ ವಸ್ತುಗಳು, ಸಾಮಾನ್ಯ ಮನೆ ಸಾಮಗ್ರಿಗಳು, ಕ್ಷೇತ್ರ ಪ್ರವಾಸಗಳ ಮೂಲಕ ವಿಷಯಗಳನ್ನು ಕಲಿಸುವುದು.

**ಭಾಷಾ ಸಂಸ್ಕರಣಾ ದೋಷ**

ಇದು ಒಂದು ನಿರ್ದಿಷ್ಟ ಪ್ರಕಾರದ ಶ್ರವಣೇಂದ್ರೀಯ ಪರಿಷ್ಕರಣಾ ದೋಷವಾಗಿದೆ (Auditory Processing Disorder- APD). ಇಲ್ಲಿ ಪದಗಳು, ವಾಕ್ಯಗಳು ಮತ್ತು ಕತೆಗಳಾಗಿ ರೂಪುಗೊಳ್ಳುವ ಧ್ವನಿಸಮೂಹಗಳಿಗೆ ಅರ್ಥವನ್ನು ಹೊಂದಿಸುವಲ್ಲಿ ಮಗುವಿಗೆ ಕಷ್ಟವಿರುವುದು. ಭಾಷಾ ಸಂಸ್ಕರಣಾ ದೋಷವು ಅಭಿವ್ಯಕ್ತಿಶೀಲ ಭಾಷೆಯ ಮೇಲೆ ಅಥವಾ ಸ್ವೀಕೃತ ಭಾಷೆಯ ಮೇಲೆ ಪ್ರಭಾವ ಬೀರುವುದು.

**ಗುಣಲಕ್ಷಣಗಳು**

- ಮಗುವು ಓದಿ ಗ್ರಹಿಸುವಲ್ಲಿ ಬಹಳ ಹಿಂದಿರುವುದು.
- ಮೌಖಿಕವಾಗಿ ತನ್ನ ಆಲೋಚನೆಗಳನ್ನು ವ್ಯಕ್ತಪಡಿಸುವುದರಲ್ಲಿ ಕಷ್ಟಪಡುವುದು.
- ವಸ್ತುಗಳನ್ನು ಗುರುತಿಸಿ ಹೆಸರಿಸಲು ಅಥವಾ ಹೆಸರಿಸಿರುವುದನ್ನು ಗುರುತಿಸಲು ಕಷ್ಟಪಡುವುದು.
- ಮಗುವು ತನಗೆ ಯಾವಾಗಲೂ ಹೇಳಲು ಸಾಕಷ್ಟಿದೆ, ಆದರೆ ಹೇಳಲಾಗುತ್ತಿಲ್ಲವೆಂಬ ನಿರಾಶೆಯನ್ನು ಹೊಂದಿರುವುದು.
- ಪದಗಳು ನಾಲಿಗೆ ತುದಿಯಲ್ಲಿವೆ, ಆದರೆ ಹೇಳಲು ಸಾಧ್ಯವಾಗುತ್ತಿಲ್ಲ ಎಂಬ ಭಾವನೆ ಹೊಂದಿರುವುದು.
- ಖಿನ್ನತೆಗೆ ಒಳಗಾಗಬಹುದು ಅಥವಾ ದುಃಖದ ಭಾವನೆಗಳನ್ನು ಹೊಂದಿರಬಹುದು.
- ಹಾಸ್ಯವನ್ನು ಅರ್ಥಮಾಡಿಕೊಳ್ಳಲು ಕಷ್ಟಪಡುವುದು.

**ಭಾಷಾಭಿವ್ಯಕ್ತಿ ವೈಕಲ್ಯ (Expressive Language Disorder)**

ವಯಸ್ಸಿಗೆ ತಕ್ಕಂತೆ ಮಗುವು ಶಬ್ದ ಭಂಡಾರವನ್ನು ಹೊಂದಿರುವುದಿಲ್ಲ ಆದ್ದರಿಂದ ಸರಿಯಾಗಿ ಹೆಸರಿಸಿ ವಸ್ತುಗಳನ್ನು ಕೇಳಲು ಕಷ್ಟಪಡುತ್ತದೆ. ವ್ಯಾಕರಣ ನಿಯಮಗಳನ್ನು ಅನುಸರಿಸಲು ಕೂಡ ಕಷ್ಟಪಡುತ್ತದೆ. ಇದರಿಂದಾಗಿ ಸಂಕೀರ್ಣ ವಾಕ್ಯ ಬಳಕೆಯಲ್ಲಿ ಅಸಾಮರ್ಥ್ಯತೆ ಉಂಟಾಗುವುದು.

**ಸವಾಲುಗಳು**

- ಗುರುತಿಸಲೆಂದು ಹೇಳುವ ಒಂದು ವಸ್ತುವಿಗೆ ಸಂಬಂಧಿಸಿದ ವಿವರಣಾತ್ಮಕ ಪದಗಳನ್ನು ಹೇಳಬಹುದು. ಆದರೆ ಆ ವಸ್ತುವನ್ನು ಹೆಸರಿಸಲು ಕಷ್ಟಪಡುವುದು.
- ಒಂದೇ ಅರ್ಥವಿರುವ ಪದಗಳನ್ನು ತಪ್ಪಾಗಿ ಬಳಸುವುದು. ಉದಾಹರಣೆಗೆ, 'ನನ್ನ ಕಾಲಿಗೆ ಸಾಕ್ಸ್ ಬೇಕು' ಎನ್ನುವ ಬದಲು' ನನ್ನ ಕಾಲಿನ ಮೇಲೆ ಸಾಕ್ಸ್ ಬೇಕು' ಎನ್ನುವುದು.
- ಸೃಜನಶೀಲವಾಗಿ ಅಥವಾ ಸರಳವಾಗಿ ಭಾಷೆಯನ್ನು ಬಳಸಲು ತೊಂದರೆ: ನೇರವಾಗಿ ವಿಷಯಕ್ಕೆ ಬರದೆ ಅದಕ್ಕೆ ಸುತ್ತುವರೆದಂತೆ ವಿವರಿಸಿ ಮಾತನಾಡುವುದು ಅಥವಾ ಒಂದೇ ವಿಷಯದ ಬಗ್ಗೆ ನಿರಂತರವಾಗಿ ಮಾತನಾಡುವುದು.
- ತಡವರಿಸಿ ಮಾತನಾಡುವುದು: ಮಾತನಾಡುವಾಗ 'ಆ' ಅಥವಾ 'ಅಂ' ಎಂಬ ಪದಗಳನ್ನು ಬಳಸಿ ತಡವರಿಸಿ ಮಾತನಾಡುವುದು.
- ಶಬ್ದಜಾಲ ಬಳಕೆ: ಸಾಮಾನ್ಯ ಪ್ರಶ್ನೆಗಳಿಗೆ ಉತ್ತರಿಸಲು ಮಗುವಿಗೆ ಎರಡರಿಂದ ನಾಲ್ಕು ಸೆಕೆಂಡುಗಳು ಬೇಕಾಗುವುದು. ಇದನ್ನು ಪ್ರತಿಕ್ರಿಯೆ ಅವ್ಯಕ್ತ ಸಮಯ (Response latency time) ಎಂದು ಕರೆಯಲಾಗುವುದು. 'ಮರೆತಿದ್ದೇನೆ' ಅಥವಾ 'ಗೊತ್ತಿಲ್ಲ' ಎಂದು ಹೇಳಿ ವಾಕ್ಯ ರಚನೆಗೆ ಕಾಲಾವಕಾಶ ತೆಗೆದುಕೊಳ್ಳುವುದು.
- ತನ್ನಷ್ಟಕ್ಕೆ ತಾನೇ ಮಾತನಾಡುವುದು, ಮಾತಿನ ಅಭ್ಯಾಸ ಮಾಡುವುದು: ಅಲ್ಪಾವಧಿ ಸ್ಮರಣೆ ಶಕ್ತಿಯಿರುವುದರಿಂದ ಸರಿದೂಗಿಸಲು ವಿಷಯವನ್ನು ಪದೇಪದೇ ಹೇಳಿಕೊಳ್ಳುವುದು.
- ಕಲಿಕೆಯಲ್ಲಿ ಅಸಂಗತತೆ: ಮಗುವಿಗೆ ಒಂದು ಮಾಹಿತಿಯನ್ನು ಸ್ವೀಕರಿಸಿ ತಿಳಿಯಲು ಹಲವಾರು ವಿಧಗಳಲ್ಲಿ ಹೇಳಬೇಕಾದ ಅಗತ್ಯವಿರುತ್ತದೆ.
- ತಪ್ಪುಗಳನ್ನು ಗುರುತಿಸಬಹುದು ಆದರೆ ಸರಿಪಡಿಸಲಾಗುವುದಿಲ್ಲ: ಮಗುವಿಗೆ ತಪ್ಪಾಗಿದೆ ಎಂದು ಅರ್ಥಮಾಡಿಕೊಳ್ಳಲು ಸಾಧ್ಯ. ಆದರೆ ಅದನ್ನು ಹೇಗೆ ಸರಿಪಡಿಸುವುದೆಂದು ತಿಳಿಯುವುದಿಲ್ಲ.
- ವಾಕ್ಯಗಳನ್ನು ಅಥವಾ ವಿಚಾರಗಳನ್ನು ಪೂರ್ತಿ ಮಾಡಲಾಗುವುದಿಲ್ಲ: ಮಾತನಾಡುವಾಗ ವಿಷಯಗಳು ಒಂದಕ್ಕೊಂದು ಹೊಂದಿಕೊಳ್ಳದೆ ಪೂರ್ತಿಯಾಗದಿರು–ವುದರಿಂದ, ಸನ್ನಿವೇಶ ತಿಳಿಯದಿದ್ದರೆ ಮಗುವು ಏನು ಹೇಳುತ್ತಿದೆ ಎಂದು ಅರ್ಥಮಾಡಿಕೊಳ್ಳುವುದು ಕಷ್ಟವಾಗುವುದು.
- ಸಾಮಾಜಿಕ ಕೌಶಲಗಳ ಸಮಸ್ಯೆಗಳು ಮತ್ತು ತೊಂದರೆಯುಂಟು ಮಾಡುವ ನಡವಳಿಕೆ: ಇತರರು ಮಗುವನ್ನು ಅರ್ಥಮಾಡಿಕೊಳ್ಳಲಾಗದ ಕಾರಣ ಸಾಮಾಜಿಕ ಕೌಶಲಕ್ಕೆ ಸಂಬಂಧಿಸಿದ ಸಮಸ್ಯೆಗಳು ಎದುರಾಗುವುವು.
- ವಯಸ್ಸಿಗೆ ತಕ್ಕ ಬುದ್ಧಿಶಕ್ತಿಯಿದ್ದರೂ ಶೈಕ್ಷಣಿಕವಾಗಿ ಸಮಸ್ಯೆಗಳಿರುವುದು: ಶೈಕ್ಷಣಿಕ ಆಗ್ರಹಗಳು ಅಂದರೆ ಪಠ್ಯಕ್ರಮ ಹೆಚ್ಚಿದಂತೆ ಭಾಷಾ ಸಂಸ್ಕರಣೆಯ ಕೊರತೆಯಿಂದಾಗಿ ಕಲಿಕೆ ಮತ್ತು ಕಲಿಕಾ ಗತಿಯ ಮೇಲೆ ಪ್ರಭಾವ ಬೀರುವುದು.

**ಮಗುವಿಗೆ ನೆರವು**

- ವಿಷಯವನ್ನು ತಿಳಿಸಲು ನಿಧಾನವಾಗಿ ಮತ್ತು ಸ್ಪಷ್ಟವಾಗಿ ಮಾತನಾಡುವುದು, ಸರಳವಾಕ್ಯಗಳನ್ನು ಬಳಸುವುದು ಮತ್ತು ಬೋರ್ಡಿನ ಮೇಲೆ ಮುಖ್ಯಾಂಶಗಳನ್ನು ಬರೆಯುವುದು.
- ನೋಟ್ಸ್‌ಗಾಗಿ (ಟಿಪ್ಪಣಿ) ಟೇಪ್ ರೆಕಾರ್ಡರ್ ಬಳಸಲು ಅನುಮತಿಸುವುದು.
- ವೈಯಕ್ತಿಕವಾಗಿ ನೆರವು ನೀಡುವವರನ್ನು ಅಥವಾ ಸಹಪಾಠಿ ಬೋಧಕರನ್ನು ಒದಗಿಸುವುದು.
- ಆಲಿಸುವಿಕೆ ಸಾಮರ್ಥ್ಯ ಮತ್ತು ಗ್ರಹಿಕೆ ಶಕ್ತಿಯನ್ನು ಹೆಚ್ಚಿಸಲು ದೃಶ್ಯತಂತ್ರಗಳನ್ನು ಬಳಸುವುದು ಮತ್ತು ಟಿಪ್ಪಣಿ ಬರೆಯಲು ಚಿತ್ರ ನಕ್ಷೆ (ಗ್ರಾಫಿಕ್ ಆರ್ಗನೈಸರ್) ಬಳಸಲು ಅನುಮತಿಸುವುದು.
- ಸಣ್ಣ ಮಟ್ಟದಲ್ಲಿ ಸರಳ, ನೇರ ಮತ್ತು ವೈಯಕ್ತಿಕ ಸೂಚನೆಗಳನ್ನು ನೀಡುವುದು. ಸೂಚನೆ ನೀಡುವ ಮೊದಲು ಮಗುವಿನ ಗಮನ ಸೆಳೆಯುವುದು ಮತ್ತು ಎದುರಿಗೆ ಸ್ಪಷ್ಟವಾಗಿ ಮಾತನಾಡುವುದು.
- ವಿಷಯ ಸಂಸ್ಕರಣೆಗೆ ಮತ್ತು ಅರ್ಥಮಾಡಿಕೊಳ್ಳಲು ಹೆಚ್ಚು ಸಮಯವನ್ನು ನೀಡುವುದು.
- ಕೇಳಿಸಿಕೊಂಡಿರುವುದನ್ನು ಪುನಃ ಹೇಳಲು ಮಗುವಿಗೆ ಸೂಚಿಸುವುದು. ದೋಷಗಳನ್ನು ಗುರುತಿಸಲು ಮತ್ತು ಅವುಗಳನ್ನು ತಿದ್ದಲು ಮಗುವಿಗೆ ಸಹಾಯ ಮಾಡಲು ನೆರವು ನೀಡುವುದು.
- ಮಗುವಿಗೆ ಮಾಡಲು ಸಾಧ್ಯವಾದ ದಿನಚರಿಯನ್ನು ಮನೆಯಲ್ಲಿ ಮತ್ತು ಶಾಲೆಯಲ್ಲಿ ಮಾಡಿಸುವುದು.

**'ಲರ್ನಿಂಗ್ ಆ್ಯಸ್ಪಿರೇಷನ್'ನ ಇತರ ಕಾರ್ಯವಿಧಾನಗಳು**

ಸಾಮಾನ್ಯವಾಗಿ ನಮ್ಮ ಸಮಾಜದಲ್ಲಿ ಇಂತಹ ಯಾವುದೇ ಸವಾಲುಗಳನ್ನು ಎದುರಿಸಿದಾಗ ಮಗುವನ್ನು ಸೋಮಾರಿ, ಅಸಡ್ಡೆ ತೋರಿಸುವ ಮಗು ಎಂದು ಹೆಸರಿಲಾಗುತ್ತದೆ.ಆಗ ಮಗುವುದ ಇತರ ಕ್ಷೇತ್ರಗಳಲ್ಲಿ ಅತ್ಯುತ್ತಮವಾಗಿದ್ದರೂ ಕೀಳರಿಮೆ ಅಥವಾ ಆತ್ಮಾಭಿಮಾನ ಕೊರತೆಯಿಂದ ಕುಗ್ಗಬಹುದು.

'ಲರ್ನಿಂಗ್ ಆ್ಯಸ್ಪಿರೇಷನ್'ನಲ್ಲಿ ನಾವು ಮಕ್ಕಳಿಗೆ ಯಾವುದರಲ್ಲಿ ಆಸಕ್ತಿ ಇದೆಯೋ ಅದನ್ನು ಮಾಡಲು ಅವಕಾಶ ನೀಡುತ್ತೇವೆ. ನಮ್ಮ ಬೋಧನಾ ವಿಧಾನಗಳ ಭಾಗವಾಗಿ ಆಟ, ನೃತ್ಯ, ನಾಟಕ, ಕಲೆ ಅಥವಾ ಕಲಾ ವಸ್ತು ತಯಾರಿ ಇತ್ಯಾದಿಗಳನ್ನು ಮಾಡಿಸುತ್ತೇವೆ. ಉದಾಹರಣೆಗೆ, ಕರಕುಶಲ ಚಟುವಟಿಕೆಯ ಮೂಲಕ ಮಗುವಿಗೆ ಚಿಟ್ಟೆಯ ಜೀವನಚಕ್ರವನ್ನು ಕಲಿಸುತ್ತೇವೆ. ನಾಟಕದ ಮೂಲಕ ಮೊಘಲ್ ಇತಿಹಾಸವನ್ನು ಕಲಿಸುತ್ತೇವೆ. ಹಾಡುಗಳು ಮತ್ತು ಸಂಗೀತದ ಮೂಲಕ ವ್ಯಾಕರಣ ಕಲಿಸುತ್ತೇವೆ. ಗೊಂಬೆಯಾಟದ ಮೂಲಕ ಹಿಂದಿ ಕಥೆಗಳನ್ನು ಕಲಿಸುತ್ತೇವೆ. ನಮ್ಮಲ್ಲಿ ಬೋರ್ಡ್ ಆಟಗಳು ಮತ್ತು ಕಾರ್ಡ್ ಆಟಗಳು ಬಹಳ ಜನಪ್ರಿಯವಾಗಿದ್ದು, ಅವುಗಳನ್ನು ಯಶಸ್ವಿಯಾಗಿ ಬಳಸುತ್ತೇವೆ. ಸ್ವತಃ ಮಾಡುವ ಮೂಲಕ ಕಲಿಯುವುದು 'ಲರ್ನಿಂಗ್ ಆ್ಯಸ್ಪಿರೇಷನ್'ನ ಬೋಧನೆಯ ಮೂಲವಾಗಿದೆ.

ಇವು ಬಹುವಿಧದ ಕಲಾ ಪ್ರದರ್ಶನಗಳು, ಆಟಗಳು ಮತ್ತು ಕ್ರೀಡೆಗಳ ಮೂಲಕ ಮಗುವಿಗೆ ಕಲಿಸುವುದರಿಂದ ಆಗುವ ಕೆಲವು ಪ್ರಯೋಜನಗಳು. ಇಂತಹ ಕ್ರಿಯೆಗಳ ಮೂಲಕ ಆಗುವ ಪ್ರಯೋಜನಗಳ ಪಟ್ಟಿಗೆ ಕೊನೆಯಿಲ್ಲ. ಈ ರೀತಿಯಾಗಿ ಕಲಿಸಿ ನಾವು ನಮ್ಮ ವಿದ್ಯಾರ್ಥಿಗಳ ಪಠ್ಯ ಕಲಿಕೆಯಲ್ಲಿ ಅದ್ಭುತ ಬದಲಾವಣೆಗಳನ್ನು ಕಂಡಿದ್ದೇವೆ.

ನಿರ್ದಿಷ್ಟ ಕಲಿಕಾ ವೈಕಲ್ಯವುಳ್ಳ ಮಕ್ಕಳು ತಮ್ಮ ಜೀವನವನ್ನು ಅತ್ಯುತ್ತಮವಾಗಿ ನಡೆಸಬಲ್ಲರು ಎಂದು ನಾವು ನಂಬಿದ್ದೇವೆ. ಆದರೆ ಅವರಿಗೆ ತಮ್ಮ ವೈಕಲ್ಯಗಳನ್ನು ಮೆಟ್ಟಿ ನಿಲ್ಲಲು, ಅವರ ಬಲವರ್ಧನೆಗೆ ಸಕಾರಾತ್ಮಕವಾಗಿರುವ ಸೂಕ್ತ ಪರಿಸರವು ಬೇಕಷ್ಟೇ.



**ಅರ್ಪಿತಾ ಯಾದವ್** ದೆಹಲಿಯಲ್ಲಿ ವಿಶೇಷ ಶಿಕ್ಷಣ (ಸ್ಪೆಷಲ್ ಎಜುಕೇಷನ್) ಅಧ್ಯಯನ ಮಾಡಿದ್ದಾರೆ. ಅವರು ವೈಕಲ್ಯವುಳ್ಳ ಓರ್ವ ಯುವಕನ ತಾಯಿ ಕೂಡ ಆಗಿದ್ದಾರೆ. ಪ್ರತಿಯೊಂದು ಮಗುವಿಗೆ ತನ್ನದೇ ಕಲಿಕಾ ಗತಿ ಹಾಗೂ ಸಾಮರ್ಥ್ಯದ  ಮೂಲಕ ಕಲಿಯಲು ಸಹಜ ಹಾಗೂ ಸಮಗ್ರ ವಿಧಾನವಿದೆ ಎಂದು ಅವರು ನಂಬುತ್ತಾರೆ. ಅವರು ಮುಖ್ಯವಾಹಿನಿ ಶಾಲಾ ವ್ಯವಸ್ಥೆಗೆ ಹೊಂದದ ಕಲಿಕಾ ವೈಕಲ್ಯವುಳ್ಳ ಮಕ್ಕಳಿಗೆ ಸಮೃದ್ಧ ಸೂಕ್ತ ವಾತಾವರಣವನ್ನು ಒದಗಿಸುವ ಗುರಿಯನ್ನು ಹೊಂದಿರುವ 'ಲರ್ನಿಂಗ್ ಆ್ಯಸ್ಪಿರೇಷನ್' ಸಂಸ್ಥೆಯ ಶೈಕ್ಷಣಿಕ ನಿರ್ದೇಶಕಿ ಆಗಿದ್ದಾರೆ. ಅವರನ್ನು arpita34@gmail.com ರ'ಲ್ಲಿ ಸಂಪರ್ಕಿಸಬಹುದು.

ಅನುವಾದ: **ಹೇಮಾದೇವಿ ಬಿ ಎನ್** । ಪರಿಶೀಲನೆ: **ನಾಗಮಣಿ ಎಸ್ ಎನ್**

# ಪರಿಣಾಮಕಾರಿ ಕಾರ್ಯತಂತ್ರಗಳ ಮೂಲಕ ಆರಂಭಿಕ ಬಾಲ್ಯ ಶಿಕ್ಷಣದಲ್ಲಿ ಸಮನ್ವಯದ ಉತ್ತೇಜನ

ಅರುಣಾ ಜ್ಯೋತಿ

ಶಿಕ್ಷಣದಲ್ಲಿ ಹಿಂದೆಂದಿಗಿಂತಲೂ ಇಂದು ನಾವು ಹೆಚ್ಚು ಬದಲಾವಣೆಗಳನ್ನು ಕಾಣುತ್ತಿದ್ದೇವೆ. ಬಹು ಸಂಸ್ಕೃತಿಯ ವೈವಿಧ್ಯತೆ, ವಿವಿಧ ಹಿನ್ನೆಲೆಗಳುಳ್ಳ ವಿದ್ಯಾರ್ಥಿಗಳು, ಸಾಮಾಜಿಕ ಹಾಗೂ ತಂತ್ರಜ್ಞಾನದ ಕ್ಷಿಪ್ರ ಬದಲಾವಣೆ, ಪೋಷಕರ ಅತ್ಯಧಿಕ ಮಟ್ಟದ ನಿರೀಕ್ಷೆ ಹಾಗೂ ಆಶೋತ್ತರಗಳು, ಮಾನವನ ಕಲಿಕೆಗೆ ಸಂಬಂಧಿಸಿದ ಜ್ಞಾನ ಕ್ಷೇತ್ರದಲ್ಲ ನಡೆಯುತ್ತಿರುವ ಹೊಸ ಸಂಶೋಧನೆಗಳು ಮುಂತಾದವುಗಳಿಂದಾಗಿ ತರಗತಿ ಕೋಣೆಯು ಹೆಚ್ಚು ಹೆಚ್ಚು ಚಲನಶೀಲವಾಗುತ್ತಿದೆ. 'ಕೆಲವು ಅಪವಾದಗಳನ್ನು ಹೊರತು–ಪಡಿಸಿದರೆ, ಸಾರ್ವಜನಿಕ ಶಾಲೆಗಳನ್ನು ಪ್ರತಿನಿಧಿಸುವ ವಿದ್ಯಾರ್ಥಿಗಳಲ್ಲಿ ವೈವಿಧ್ಯತೆಯು ಹೆಚ್ಚು ಸಾಮಾನ್ಯ ಸಂಗತಿಯಾಗಲಿದೆ' (Gollnick and Chin, 2009) ಎನ್ನುವುದು ಇದರ ಅರ್ಥ.

ಜಾತಿ, ವರ್ಗ, ಮತ, ಧರ್ಮ, ಲಿಂಗ, ಮತ್ತು ಮಾತನಾಡುವ ಭಾಷೆಗಳಲ್ಲಿನ ಭಿನ್ನತೆಗಳು ಮುಂತಾದ ಅನೇಕ ವೈವಿಧ್ಯತೆಗಳನ್ನು ಗಮನಿಸಿ ನಮ್ಮ ದೇಶದಲ್ಲಿ ವಿದ್ಯಾರ್ಥಿಗಳನ್ನು 'ವಿಶಿಷ್ಟ' (Typical) ಅಥವಾ 'ಸಾಮಾನ್ಯ' (Normal) ವಿದ್ಯಾರ್ಥಿ ಎಂಬ ಚೌಕಟ್ಟಿಗೆ ಕೂರಿಸಲಾಗುತ್ತದೆ. ಇದರ ಅರ್ಥವೆಂದರೆ ನಮ್ಮ ಶಾಲೆಗಳಲ್ಲಿ ವಿಶೇಷ ಅಗತ್ಯಗಳನ್ನು ಹೊಂದಿದ ವಿದ್ಯಾರ್ಥಿಗಳನ್ನು (ಉದಾ: ಶ್ರವಣ ಸಮಸ್ಯೆ ಇರುವವರು, ದೃಷ್ಟಿ ಸಮಸ್ಯೆಯುವರು, ಬೌದ್ಧಿಕ ಸಮಸ್ಯೆಯವರು, ಸ್ವಲೀನತೆ (ಆಟಿಸಂ) ಉಳ್ಳವರು, ಶಾರೀರಿಕ ಅಶಕ್ತರು ಹಾಗೂ ಕಲಿಕೆಯ ಸಮಸ್ಯೆ ಇರುವವರು) ಹೊರತುಪಡಿಸಿ ಬೇರೆ ರೀತಿಯ ಅಗತ್ಯಗಳನ್ನು ಹೊಂದಿದ ವಿವಿಧತೆಯ ಗುಂಪಿನವರು ಹೆಚ್ಚು ಹೆಚ್ಚಾಗಿ ಕಾಣಿಸಿಕೊಳ್ಳುತ್ತಿದ್ದಾರೆ. ಈ ಎಲ್ಲಾ ವಿವಿಧತೆಗಳನ್ನೆಲ್ಲ ಒಟ್ಟು ಸೇರಿಸಿದರೆ, ಒಂದು ತರಗತಿಯಲ್ಲಿ ಹೆಚ್ಚೂ ಕಡಿಮೆ ಶೇಕಡಾ 20–30ರಷ್ಟು ಮಕ್ಕಳು ಏನಾದರೊಂದು ಬಗೆಯ ವಿಶೇಷ ಅಗತ್ಯಗಳನ್ನು ಹೊಂದಿರುವವರಾಗಿರುತ್ತಾರೆ ಎಂದು ಯಾವ ಹಿಂಜರಿಕೆಯೂ ಇಲ್ಲದೆ ಹೇಳಬಹುದು. (Barr and Parrett, 2001, Tom E C. Smith, Edward A. Polloway, James R. Patton, Carol A. Dowdy)

ತರಗತಿಯಲ್ಲಿರುವ ಶಿಕ್ಷಕರು ಇದನ್ನು ಏನೆಂದು ಅರ್ಥ ಮಾಡಿಕೊಳ್ಳಬೇಕು? ಶಿಕ್ಷಕರು ಅಂತಹ ವಿದ್ಯಾರ್ಥಿಗಳನ್ನು ಗುರುತಿಸಲು, ಅವರ ಹಿನ್ನೆಲೆಯನ್ನು ತಿಳಿಯಲು, ಮತ್ತುಅವರಿಗೆ ಅವಕಾಶ ಕಲ್ಪಿಸಲು ಶಕ್ತರಾಗಬೇಕು, ಮುಖ್ಯವಾಗಿ ಅವರ ವೈಕಲ್ಯಗಳೇನೆಂದು ಅರ್ಥಮಾಡಿಕೊಂಡು ಅವರಿಗೆ ಬೇಕಾಗಿರುವ ಸಹಾಯ ಯಾವ ರೀತಿಯದ್ದು ಎಂದು ಗುರುತಿಸಬೇಕು. ಆದರೆ ಇದು ಮಾತಿನಲ್ಲಿ ಹೇಳುವಷ್ಟು ಸುಲಭದ ಕಾರ್ಯವೇನೂ ಅಲ್ಲ. ಆದರೂ ವೈಕಲ್ಯತೆಗಳುಳ್ಳ ಅನೇಕ ಮಕ್ಕಳು ಸಾಮಾನ್ಯ ತರಗತಿಗಳಲ್ಲೇ ಕೆಲವು ನಿರ್ದಿಷ್ಟ ಪಠ್ಯ ವಿಷಯಗಳಲ್ಲಿ ಆಯಾ ವಿಷಯಗಳ ಶಿಕ್ಷಕ/ಕಿಯರಿಂದಲೇ ಕಲಿಕೆಯನ್ನು ಹೊಂದಲು ಸಾಧ್ಯ; ಆ ಶಿಕ್ಷಕ/ಕಿಯರು ಬೇರೆ ಸಾಮಾನ್ಯ ವಿದ್ಯಾರ್ಥಿಗಳಿಗಿಂತ ಹೆಚ್ಚಿನ ಮುತುವರ್ಜಿಯನ್ನೇನೂ ಇವರ ವಿಷಯದಲ್ಲಿ ವಹಿಸ–ಬೇಕೆಂದಿಲ್ಲ. ಆದರೆ ಈ ವಿಭಿನ್ನ ರೀತಿಯ ಮಕ್ಕಳಿಗೆ ಕಲಿಕೆಯಲ್ಲಿ ವಿಶೇಷ ಅಗತ್ಯಗಳಿದ್ದರೆ ಅಥವಾ ಅವರ ವೈಕಲ್ಯಗಳು ತೀವ್ರ ಸ್ವರೂಪದವುಗಳಾಗಿದ್ದರೆ ಈ ಕಾರ್ಯ ಸಾಧ್ಯವಾಗಲಾರದು. ವೈಕಲ್ಯಗಳಿರುವ ಮಕ್ಕಳಿಗೆ ಪಾಠ ಮಾಡುವುದಕ್ಕೆ ಶಿಕ್ಷಕರು ಸಾಮಾನ್ಯ ತರಗತಿಯ ಹೊರಗೆ ಪ್ರತ್ಯೇಕವಾಗಿ ದೃಶ್ಯ ಪರಿಕರಗಳು ಹಾಗೂ ಇತರೇ ಪೂರಕ ಸಾಮಗ್ರಿಗಳ ಸಹಿತ ಹಲವಾರು ಮಾದರಿಯ ವಿಧಾನಗಳನ್ನು ಪ್ರಯೋಗಕ್ಕೆ ಒಳಪಡಿಸಿ ಖಚಿತಪಡಿಸಬೇಕು.

ಭಾರತದಲ್ಲಿ ಇಂತಹ ವಿಶಿಷ್ಟ ಬೋಧನಾ ಪದ್ಧತಿ ಈಗಷ್ಟೇ ಬೆಳೆಯುತ್ತಿದ್ದು, ಉತ್ತಮ ವಿಧಾನ ಯಾವುದು ಎಂದು ಗುರುತು ಹಿಡಿಯಲು ಸುಲಭೋಪಾಯಗಳು ಇನ್ನೂ ಸಿದ್ಧವಾಗಿಲ್ಲ. ಭಾರತ ಅನೇಕ ವೈವಿಧ್ಯತೆಯನ್ನು ಹೊಂದಿದ್ದರೂ ಸಾಂಸ್ಕೃತಿಕ, ಧಾರ್ಮಿಕ, ಲಿಂಗಸಂಬಂಧಿ ಹಾಗೂ ಇತರ ವೈವಿಧ್ಯತೆಗಳನ್ನು ಅಂಗೀಕರಿಸುವ ಮಟ್ಟದ ಪ್ರಗತಿ ಇನ್ನೂ ಸಾಧ್ಯವಾಗಿಲ್ಲ; ಬೇರೆ ರೀತಿಯ ವೈಕಲ್ಯ ಹಾಗೂ ಅಶಕ್ತತೆಗಳ ವಿಷಯದಲ್ಲಂತೂ ಸ್ಥಿತಿ ಇನ್ನೂ ವಿಷಮವೇ ಆಗಿದೆ. ಶಾಲೆಗಳ ವಿಷಯಕ್ಕೆ ಬಂದರೆ ಅಲ್ಲಿನ ಎಲ್ಲಾ ಭಾಗೀದಾರರೂ, ಪೋಷಕರು, ಶಿಕ್ಷಕರು ಹಾಗೂ ಮಕ್ಕಳು ಎಲ್ಲರೂ ಅಶಕ್ತತೆಯ ಸಹಿತವಾಗಿ ಎಲ್ಲಾ ವಿಧದ ವೈವಿಧ್ಯತೆಗಳನ್ನು ಹೊಂದಿರುವ ಮಕ್ಕಳನ್ನು ಒಪ್ಪಿಕೊಳ್ಳುವ ಮನೋಭಾವವನ್ನು ಬೆಳೆಸಿಕೊಳ್ಳುವುದು ಬಹಳ ಮುಖ್ಯವಾಗಿದೆ.

'ಸಮನ್ವಯವೆಂದರೆ ಶಿಕ್ಷಕರು ಬೋಧನೆಗೆ ಅಗತ್ಯವುಳ್ಳ ಕೌಶಲ ಹಾಗೂ ಪರಿಣತಿಯನ್ನು ಪಡೆದುಕೊಳ್ಳಬೇಕು, ವಿದ್ಯಾರ್ಥಿಗಳ ಅಗತ್ಯಕ್ಕೆ ಅನುಗುಣವಾಗಿ ಪರಿಕರಗಳನ್ನು ಬೇಕಾದಂತೆ ಹೊಂದಿಸಿಕೊಳ್ಳಲು ತಿಳಿದಿರಬೇಕು, ವಿವಿಧ ರೀತಿಯ ವಿಧಾನಗಳನ್ನು ಬಳಸಲು ಅಭ್ಯಾಸ ಮಾಡಿಕೊಳ್ಳಬೇಕು, ಪಠ್ಯವನ್ನು ಹಾಗೂ ಮೌಲ್ಯಮಾಪನ ಪದ್ಧತಿಯನ್ನು ಹೊಂದಿಸಿಕೊಳ್ಳಲು ಸಮರ್ಥರಿರ–ಬೇಕು'. (Tom E C Smith, Edward A. Polloway, James R. Patton, CarolA. Dowdy)

ಅಗತ್ಯವನ್ನು ಆಧರಿಸಿದ ನಿರ್ದಿಷ್ಟ ವಿದ್ಯಾರ್ಥಿವಾರು ಬೋಧನೆಯ ಮಾದರಿಗಳು ನಮ್ಮ ಶಾಲೆಗಳಿಗೆ ಇನ್ನೂ ಬಂದಿಲ್ಲ. ಎಲ್ಲರಿಗೂ ಒಂದೇ ಅಳತೆ ಎಂಬುದೇ ನಮ್ಮ ಶಿಕ್ಷಣ ಪದ್ಧತಿಯ ಈಗಿನ ನಂಬಿಕೆ. ಉತ್ತಮವಾದದ್ದು ಬರಲಿ ಎಂಬುದೇ ನಮ್ಮ ಪ್ರಾರ್ಥನೆ ಮತ್ತು ನಮ್ಮ ಆಶಯ.

ಬದಲಾಗಿ, ನಾವು ಶಿಕ್ಷಕ ವೃಂದದವರು "ನಮ್ಮ ತರಗತಿಗಳಲ್ಲಿ ವಿವಿಧತೆಯನ್ನು ಒಪ್ಪಿಕೊಳ್ಳಲು ಸಿದ್ಧರಿದ್ದೇವೆಯೇ?" ಎಂದು ನಮ್ಮನ್ನುನಾವೇ ಕೇಳಿಕೊಳ್ಳಬಲ್ಲೆವೇ?

**ಸಿದ್ಧರಾಗುವುದೆಂತು?**

ಸಿದ್ಧರಾಗುವುದು ಎಂದರೇನು? ಇಂತಹ ವೈವಿಧ್ಯತೆಗಳನ್ನು ಎದುರಿಸಲು ಶಿಕ್ಷಕರನ್ನು ಸಜ್ಜುಗೊಳಿಸುವುದು ಹೇಗೆ?

ಆರಂಭಿಕ ಮಧ್ಯವರ್ತಿ ತಂತ್ರವು ಬಾಲ್ಯ ಶಿಕ್ಷಣಕ್ಕೆ ಸಮಾನ: ಎರಡೂ ಮೆದುಳುಗಳ ನಡುವಿನ ಮಾಹಿತಿ ವಿನಿಮಯಕ್ಕೆ ಸಂವೇದನೆಗಳ ಸಂಸ್ಕರಣ, ಚೋದನೆ ಹಾಗೂ ಅಭ್ಯಾಸಗಳು ಸಹಾಯ ಮಾಡುತ್ತವೆ. ಮಾಹಿತಿ ವಿನಿಮಯದ ವೇಗವನ್ನೂ ಅವು ನಿರ್ಧರಿಸುತ್ತವೆ. ಯಾವುದೇ ಕ್ರಿಯೆಯ ಚಾಲನೆಗೆ ಈ ಮಾಹಿತಿ ವಿನಿಮಯದ ವೇಗವೇ ಚಾಲನೆಯನ್ನು ನೀಡುತ್ತದೆ. ಆದ್ದರಿಂದ ಇದು ಒಂದು ಗುಣಮಟ್ಟದ ಕಾರ್ಯಕ್ರಮವೆಂದು ಅಂಗೀಕೃತವಾಗಲು ವಯೋಗುಣಕ್ಕೆ ತಕ್ಕುದಾದ ಅಭ್ಯಾಸಗಳನ್ನು ಅಳವಡಿಸಬೇಕು. ಎಳೆಯ ಮಕ್ಕಳ ಕಾರ್ಯಕ್ರಮವು ಬೆಳವಣಿಗೆಗೆ ಪೂರಕವೂ ಸಮರ್ಪಕವೂ ಆಗಿರಬೇಕು. ಕಾರ್ಯಕ್ರಮ ಪರಸ್ಪರ ಸಂವಾದ ರೂಪದ ಕಲಿಕೆಯಾಗಿರಬೇಕು; ಇದರ ಯೋಜನೆಯು ಮಕ್ಕಳಿಗೆ ಗರಿಷ್ಠ ಪ್ರಮಾಣದಲ್ಲಿ ಪ್ರಯೋಜನಕಾರಿ ಆಗಿರಬೇಕಲ್ಲದೆ ಅವರ ಸಾಮಾಜಿಕ ಅಭಿವೃದ್ಧಿಗೆ ಸಹಕಾರಿಯಾಗಿರಬೇಕು. ಶಿಕ್ಷಕರು, ಪೋಷಕರು/ಕುಟುಂಬದವರೊಡನೆ ಸಮನ್ವಯದಿಂದ ಸಹಕರಿಸಬೇಕು. ಈ ರೀತಿಯ ಕಾರ್ಯಕ್ರಮವು ಮಕ್ಕಳು ಎರಡನೇ ತರಗತಿಯವರೆಗೂ ತಲಪುವುದಕ್ಕೆ ಸಹಾಯ ಮಾಡುವುದು. ಬಹುಶಃ ನಿರ್ದಿಷ್ಟ ಪ್ರಕರಣವನ್ನು ಅನುಸರಿಸಿ ಐದನೇ ತರಗತಿವರೆಗೆ ಇಲ್ಲವೇ ಪ್ರಾಥಮಿಕ ಶಾಲೆಯ ಮುಕ್ತಾಯದವರೆಗೂ ಸಹಕಾರಿ ಆಗಬಹುದು.

ಅನೇಕ ಶಿಕ್ಷಕರು ಮಕ್ಕಳಿಗೆ ಆಟಗಳು, ಅಭಿನಯ ಹಾಡುಗಳು ಮತ್ತು ಶಿಶುಗೀತೆಗಳ ಮೂಲಕ ಅಂಗಾಂಗಗಳ ಚಲನೆಯ ವ್ಯಾಯಮಗಳ ಚಟುವಟಿಕೆ ಆಧಾರಿತ ಕಲಿಕೆಯನ್ನು ಅಭ್ಯಾಸ ಮಾಡಿಸುತ್ತಾರೆ. ಇದು ಯಶಸ್ವಿ ಆಗಬೇಕಿದ್ದರೆ ಶಿಕ್ಷಕರಿಗೆ ವಿಶೇಷ ಅಗತ್ಯವಿರುವ ಮಕ್ಕಳನ್ನು (Children with Special Needs-CWSN) ನಿರ್ವಹಿಸುವ ವಿಧಾನದ ಬಗ್ಗೆ ಸ್ವಲ್ಪವಾದರೂ ತಿಳುವಳಿಕೆ ಇರಬೇಕಲ್ಲದೆ ಈ ವಿಧಾನದ ಉದ್ದೇಶವೇನೆಂದು ಸ್ಪಷ್ಟವಾಗಿ ತಿಳಿದಿರಬೇಕು. ಆಗ ಮಾತ್ರ ಅವರಿಗೆ ವಿಶೇಷ ಅಗತ್ಯದ ಮಕ್ಕಳಿಗೆ, ಕಲಿಕೆಯನ್ನು ಸುಯೋಜಿತವಾಗಿಯೂ ಏಕಾಗ್ರತೆಯಿಂದಲೂ ಮಾಡಲು ಸಾಧ್ಯವಾಗುತ್ತದೆ.

**ಮಾರ್ಗಗಳ ಕುರಿತು ಕೆಲವು ಆಲೋಚನೆಗಳು**

ಮಕ್ಕಳಿಗೆ ಮುಖ್ಯವಾಗಿ ಸ್ವಲೀನತೆ (ಆಟಿಸಂ) ಹಾಗೂ ದೃಷ್ಟಿ-ದೋಷವಿರುವವರಿಗೆ ಇಂದ್ರಿಯ ಪ್ರಚೋದನೆಯ (Sensory stimulation) ಅಗತ್ಯವಿದೆಯೆಂಬುದು ತಿಳಿದಿದ್ದರೆ ಶಿಕ್ಷಕಿಯು ಕರ್ಣಕುಹರದ ಪ್ರಚೋದನೆಗೆ (Vestibular stimulation) ಸೂಕ್ತವಾದ ಚಟುವಟಿಕೆಗಳನ್ನು ರೂಪಿಸಬಹುದು. ನಮ್ಮ ಶರೀರ ಹಾಗೂ ಪರಿಸರದ ಬಗ್ಗೆ ಮಾಹಿತಿಯನ್ನು ನೀಡಲು ನಮಗೆ ಎಲ್ಲಾ ಇಂದ್ರಿಯಗಳೂ ಒಟ್ಟು ಸೇರಿ ಕೆಲಸ ಮಾಡುತ್ತವೆ. ಆದರೆ ಯಾವುದೋ ಒಂದು ಸರಿಯಾಗಿ ಕಾರ್ಯನಿರ್ವಹಿಸದಿದ್ದಾಗ (ಉದಾ: ದೃಷ್ಟಿದೋಷವೋ, ಕಿವಿ ಕೇಳಿಸದಿರುವುದೋ ಅಥವಾ ನರ ಸಂಬಂಧಿ ತೊಂದರೆಯೋ ಆದಾಗ) ಇಡೀ ಇಂದ್ರಿಯ ವ್ಯವಸ್ಥೆಯೇ ಏರುಪೇರು ಆಗಬಹುದು. ದೃಷ್ಟಿಹೀನತೆಯುಳ್ಳ ಮಕ್ಕಳು ಒಂದೆಡೆ ಕುಳಿತು ಜೀಕುವ ಸ್ವಚಲನೆಯನ್ನು ಮಾಡುವುದು ಈ ಕಾರಣಕ್ಕಾಗಿಯೇ ಎನ್ನಲಾಗಿದೆ. ಅವರು ಸ್ವ-ಪ್ರಚೋದನೆಗೆ ಪ್ರಯತ್ನಿಸುತ್ತಿರುತ್ತಾರೆ (Self-stimulation) ಎಂದು ವಿಶ್ಲೇಷಿಸಲಾಗಿದೆ. ತಮ್ಮ ಮಿದುಳಿಗೆ ರವಾನೆ ಆಗದೇ ಇರುವಂತಹ ಕೆಲವು ಮಾಹಿತಿಗಳನ್ನು ಪಡೆದುಕೊಳ್ಳುವ ಪ್ರಯತ್ನವಾಗಿ ಈ ಕ್ರಿಯೆ ನಡೆಯುತ್ತದೆ.

ನಾನು ಶಾಲೆಯಲ್ಲಿ ಶಿಕ್ಷಕಿಯಾಗಿದ್ದಾಗ ಸ್ವತಃ ಬಳಸಿ ಕಂಡುಕೊಂಡ ಕೆಲವು ಚಟುವಟಿಕೆಗಳ ಉದೇಶಗಳನ್ನು ಈ ಕೆಳಗೆ ಉಲ್ಲೇಖಿಸಲಾಗಿದೆ. ಚಟುವಟಿಕೆಗೂ ಉದ್ದೇಶಗಳಿಗೂ ನಡುವಿನ ಸಂಬಂಧಗಳನ್ನು ಶಿಕ್ಷಕ/ಕಿ ತಾನೇ ಸ್ಪಷ್ಟವಾಗಿ ತಿಳಿದುಕೊಳ್ಳ-ಬೇಕಾಗಿರುತ್ತದೆ. ಇದರಿಂದ ಮಾತ್ರವೇ ಆ ಚಟುವಟಿಕೆಗಳು ಮಕ್ಕಳಿಗೆ ಸಂತೋಷವನ್ನು ನೀಡುವುದರ ಜೊತೆಗೆ ಉದ್ದೇಶ ಸಾಧನೆಯೂ ಆಗುತ್ತದೆ.

1. ಕರ್ಣಕುಹರ (Vestibular)ವು ಪಡೆಯುವ ಮಾಹಿತಿ ನಂಬಲಸಾಧ್ಯವಾದಷ್ಟು ಶಕ್ತಿಯುತವಾಗಿದ್ದು ಅದ್ಭುತ ಪರಿಣಾಮಗಳನ್ನು ಉಂಟುಮಾಡುತ್ತದೆ. ಕರ್ಣಕುಹರ ಸದಾಕಾಲ ಬಹುತೇಕ ಬೇರೆಲ್ಲಾ ಇಂದ್ರಿಯಗಳಿಗಿಂತಲೂ ಹೆಚ್ಚು ಕ್ರಿಯಾ-ಶೀಲವಾಗಿದ್ದು ನಾವು ಮಾಡುವ ಎಲ್ಲಾ ಕಾರ್ಯಗಳಲ್ಲಿಯೂ ಪಾತ್ರವಹಿಸುತ್ತದೆ. ಕರ್ಣಕುಹರದ ಕ್ರಿಯಾಶೀಲತೆಯನ್ನು ಸಮರ್ಪಕವಾಗಿ ಉಪಯೋಗಿಸಿದಾಗ ಮಗುವಿಗೆ ತೃಪ್ತಿ-ಸಮಾಧಾನಗಳನ್ನು ನೀಡಿ ಸಂತೈಸುತ್ತದೆ. ಮಗುವಿನ ಬೆಳವಣಿಗೆಯ ಹಲವು ಅಂಶಗಳಲ್ಲಿ, ಉದಾ: ಸಮನ್ವಯ, ಕೈಬರಹ, ಏಕಾಗ್ರತೆ, ಗಮನ ಹಾಗೂ ಓದುವಿಕೆಯಲ್ಲಿಯೂ ಇದು ಸಹಾಯಮಾಡುತ್ತದೆ.

**ಉದಾಹರಣೆಗಳು**

'ರೋ ರೋ ರೋ ಯುವರ್ ಬೋಟ್ ಜೆಂಟ್ಲಿ ಡೌನ್ ದ ಸ್ಟ್ರೀಮ್' (Row, row, row your boat gently down the stream) ನರ್ಸರಿ ಹಾಡನ್ನು ಹೇಳಲು ಮಕ್ಕಳನ್ನು ಸಾಲಾಗಿ ನಿಲ್ಲಿಸಿ ಪರಸ್ಪರ ಕೈಗಳನ್ನು ಹಿಡಿದುಕೊಂಡು ತೋಳುಗಳನ್ನು ದೋಣಿಯ ಹುಟ್ಟು ಹಾಕುವಂತೆ ಚಲಿಸುತ್ತಾ ಹಿಂದಕ್ಕೂ ಮುಂದಕ್ಕೂ ಚಲಿಸುವಂತೆ ಮಾಡಿರಿ. ಈ ಚಟುವಟಿಕೆಯನ್ನು ಕುಳಿತು, ನಿಂತು, ಜೋರಾಗಿ ಮತ್ತು ನಿಧಾನವಾಗಿ ಹೀಗೆ ಬಗೆಬಗೆಯಾಗಿ ಮಾಡಿಸಿರಿ. ಕುಳಿತು-ಕೊಳ್ಳುವುದು, ನಿಂತುಕೊಳ್ಳುವುದು, ವೇಗವಾಗಿ, ನಿಧಾನವಾಗಿ ಮಾಡುವುದು ಅಥವಾ ಮಕ್ಕಳನ್ನು ಅಂಗಾತ ಮಲಗಿಸಿ ಕಾಲುಗಳನ್ನು ಮೇಲಕ್ಕೆಳೆದು ಮೊಣಕಾಲುಗಳನ್ನು ಕೈಗಳಿಂದ ಬಿಗಿದು ಹಿಂದಕ್ಕೂ ಮುಂದಕ್ಕೂ ಜೋಕಾಲಿಯಂತೆ ಚಲಿಸಲು ಹೇಳಿ. ಈ ಭಂಗಿಯಲ್ಲಿ ಎರಡೂ ಬದಿಗೂ ಚಲಿಸುವಂತೆ ಮಾಡಿ.

- ಟ್ರಾಂಪೊಲಿನ್, ಸ್ಪ್ರಿಂಗ್‌ಬೋರ್ಡ್, ಜಂಪಿಂಗ್ ಜ್ಯಾಕ್: "ಇವತ್ತು ಯಾರು ಜಂಪಿಂಗ್ ಜ್ಯಾಕ್ ಆಗುತ್ತೀರ? (ಮಕ್ಕಳು ಬೀಳದಂತೆ ನೋಡಿಕೊಳ್ಳಲು ಹತ್ತಿರದಲ್ಲೇ ಇರಿ), ಕೈಗಳನ್ನು ಹಿಡಿದು ಅಕ್ಕ-ಪಕ್ಕಕ್ಕೆ ರಾಕ್-ಎ-ಬೈ-ಬೇಬಿ (Rock-a-bye-baby) ಅನ್ನುತ್ತಾ ಓಲಾಡುವ ಆಟ.
- ಏರೋಪ್ಲೇನ್/ವಿಮಾನ: ಎರಡೂ ಕೈಗಳನ್ನು ನೇರವಾಗಿ ಚಾಚಿ ವೀಈಈಈಈಈ.......... ಅನ್ನುತ್ತಾ ವಿಮಾನ ಹಾರಾಟವನ್ನು ಅನುಕರಿಸುವುದು. ಮುಖಕ್ಕೆ ಗಾಳಿ ರಾಚಿದಾಗ ಆಗುವ ಅನುಭವವನ್ನು ಮಕ್ಕಳಿಗೆ ಅನುಭವಿಸಲು ಹೇಳುವುದು.
- ಕುತ್ತಿಗೆ ಹಾಗೂ ಬೆನ್ನನ್ನು ನಿಧಾನವಾಗಿ ಮೆತ್ತಗೆ ಬಾಗಿಸುವುದು.

(ಮೇಲಿನ ನರ್ಸರಿ ಗೀತೆಗಳ ಜಾಗದಲ್ಲಿ ದೇಶೀಯ ಹಾಡುಗಳನ್ನೂ ಬಳಸಬಹುದು)

2. ಚಲನೆಗೆ ಸಂಬಂಧಿಸಿದ ಅಭ್ಯಾಸಗಳನ್ನು ಮಾಡಿಸುವುದು ಸಾಧ್ಯವೇ ಪ್ರಯತ್ನಿಸಿ. ಮಕ್ಕಳಿಗೆ ಅತ್ಯಗತ್ಯವಾದ, ಆಟ, ಓಡಾಟ ಹಾರಾಟದ ಕ್ರಿಯೆಗಳುಳ್ಳ (Kinesthetics) ಅಭ್ಯಾಸಗಳನ್ನು ಶಿಕ್ಷಕರು ಕೊಡಬೇಕು. ಜೊತೆಗೆ ಸಮತೋಲನವನ್ನು ಸಾಧಿಸುವ ಹಾಗೂ ಸುಧಾರಿಸುವ ಕೆಲವು ಅಭ್ಯಾಸಗಳನ್ನೂ ಸೇರಿಸಿ-ಕೊಳ್ಳಬಹುದು. ಕಣ್ಣುಗಳನ್ನು ಮುಚ್ಚಿದಾಗಲೂ ಒಂದು ತೋಳನ್ನು

ಮೇಲೆ ಅಥವಾ ಹಿಂದೆ ಅಥವಾ ಕೆಳಗೆ ಚಾಚಿದಾಗ ಅದು ಪರಿಸರದಲ್ಲಿ ಎಲ್ಲಿದೆ ಎಂಬ ಅರಿವು ಉಂಟಾಗುವುದಕ್ಕೆ ಸ್ವದೇಹಿ ಪ್ರಜ್ಞೆ (Proprioception) ಅನ್ನುತ್ತಾರೆ. ಇದು ಮೆದುಳಿಗೆ ಅತ್ಯಂತ ಮಹತ್ವವಾದುದು. ಯಾಕೆಂದರೆ ಇದು ಸ್ವ–ನಿಯಂತ್ರಣ, ಸಮನ್ವಯ ಶರೀರದ ಭಂಗಿ, ಶರೀರದ ಕುರಿತಾದ ಮನಸ್ಸಿನ ಅರಿವು, ಯಾವುದೇ ವಿಷಯ–ವಸ್ತುವಿನ ಬಗ್ಗೆ ಗಮನ ಮತ್ತು ಏಕಾಗ್ರತೆ ಹಾಗೂ ಮಾತು ಇವೆಲ್ಲವನ್ನೂ ಬಹುತೇಕ ಸಂಪೂರ್ಣವಾಗಿ ನಿಯಂತ್ರಿಸುವಲ್ಲಿ ಹೆಚ್ಚಿನ ಪಾತ್ರವಹಿಸುತ್ತದೆ. ದಿನನಿತ್ಯದ ಜೀವನದಲ್ಲಿ ನಾವು ಗಮನಹರಿಸದೇ ಇರುವ ಕೆಲವು ನಿದರ್ಶನಗಳನ್ನು ಅಥವಾ ಸಂದರ್ಭಗಳನ್ನು ನೆನಪಿಸಿಕೊಳ್ಳಲು ಪ್ರಯತ್ನಿಸಿ, ನಾವು ಇಳಿಯುವಾಗ ಮೆಟ್ಟಿಲುಗಳನ್ನು ಗಮನಿಸುವುದಿಲ್ಲ, ದಾರಿಯಲ್ಲಿ ದಿನಾಲೂ ಸಿಗುವ ವಸ್ತುಗಳನ್ನು ಗಮನಿಸುವುದಿಲ್ಲ; ಅಡ್ಡಲಾಗಿರುವ ವಸ್ತುಗಳನ್ನು ಯಾವ ಆದೇಶವೂ ಇಲ್ಲದೆ ಬಳಸಿಕೊಂಡು ಹೋಗುತ್ತೇವೆ. ಈ ರೀತಿಯ ಸಮತೋಲನದ ವ್ಯವಸ್ಥೆ ಇಲ್ಲದೇ ಹೋದರೆ ನಮ್ಮ ಚಲನೆ, ನಡವಳಿಕೆಗಳೆಲ್ಲವೂ ವಿಕಾರವಾಗುವುವು ಮತ್ತು ದಿಕ್ಕಾ–ಪಾಲಾಗುವುವು.

**ಸಮತೋಲನವನ್ನು ಹೆಚ್ಚಿಸಿಕೊಳ್ಳಲು ಕೆಲವು ಚಟುವಟಿಕೆಗಳು**

- ಮಕ್ಕಳನ್ನು ಒಂದೇ ಕಾಲಿನಲ್ಲಿ ನಿಲ್ಲುವಂತೆ ಮಾಡುವುದು (ಯೋಚಿಸಿ, ಅನೇಕರು ಇದನ್ನು ಮಾಡುವುದು ಸಾಧ್ಯವಾಗ–ಬಹುದು).
- ಅದೇ ರೀತಿ ಎರಡೂ ಕಣ್ಣುಗಳನ್ನು ಮುಚ್ಚಿಕೊಂಡು ಮಾಡುವುದು (ಇದನ್ನು ವಯಸ್ಕರೂ ಪ್ರಯತ್ನಿಸಬಹುದು) ಆಗ ಏಕಾಗ್ರತೆ ಕಡಿಮೆಯಾಗಿ ಸಮತೋಲನ ತಪ್ಪಿದಂತೆ ಭಾಸವಾಗುವುದು. ಆದ್ದರಿಂದಲೇ ಏಕಾಗ್ರತೆಯನ್ನು ಸುಧಾರಿಸಲು ಈ ಅಭ್ಯಾಸವನ್ನು ಮಾಡಬಹುದು.
- ಕಣ್ಣು ಮುಚ್ಚಿ/ಕಣ್ಣಿಗೆ ಪಟ್ಟಿ ಕಟ್ಟಿಕೊಂಡು ಹಿಂದಕ್ಕೆ ನಡೆಯುವುದು

ಬೌದ್ಧಿಕ / ಗ್ರಹಣ ಶಕ್ತಿ ಸಾಮರ್ಥ್ಯ, ದೃಶ್ಯ ಗ್ರಹಿಕೆ ಹಾಗೂ ಆಲಿಸುವ ಕೌಶಲ್ಯಗಳ ಅಭಿವೃದ್ಧಿ

ಕಪ್ಪುಹಲಗೆಯಲ್ಲಿ ಬಣ್ಣಗಳ ಹೆಸರನ್ನು, ಬೇರೆಬೇರೆ ಬಣ್ಣಗಳಲ್ಲಿ ಬರೆಯುವುದು; ಉದಾ: ಕೆಂಪು ಬಣ್ಣವನ್ನು ನೀಲಿ ಬಣ್ಣದಲ್ಲಿ, ನೀಲಿಯನ್ನು ಹಳದಿ ಬಣ್ಣದಲ್ಲಿ ಬರೆಯುವುದು ಇತ್ಯಾದಿ. ಮಕ್ಕಳು ಆಯಾ ಬಣ್ಣವನ್ನು ಗುರುತಿಸಬೇಕೇ ಹೊರತು ಶಬ್ದವನ್ನಲ್ಲ.

ಈ ರೀತಿಯ ಅಭ್ಯಾಸಗಳಿಂದ ಮಕ್ಕಳು ಗೊಂದಲಕ್ಕೆ ಒಳಗಾಗುತ್ತಾರೆ ಎಂದು ಕೆಲವರು ಆಕ್ಷೇಪಿಸಬಹುದು. ಇವು ಮಕ್ಕಳ ಓದುವ ಸಾಮರ್ಥ್ಯವನ್ನು ಅಳೆಯಲು ಇರುವಂತಹವುಗಳಲ್ಲ; ಬದಲಾಗಿ ಮೆದುಳಿನ ಎರಡೂ ಭಾಗಗಳ ನಡುವೆ ಸಮರ್ಪಕ ಸಂಪರ್ಕವನ್ನು ಬೆಸೆಯುವುದಕ್ಕೆ ಬೇಕಾದ, ಪಿಯಾನೋ ನುಡಿಸುವಾಗ ಎರಡೂ ಕೈಗಳನ್ನು ಬಳಸುವಂತೆ ಏಕಕಾಲಕ್ಕೆ ನಡೆಯುವ ಕಾರ್ಯಗಳಲ್ಲಿ ಹೊಂದಾಣಿಕೆಯನ್ನು ರೂಪಿಸಲು ಇರುವ ಅಭ್ಯಾಸಗಳು ಇವು. ಮಕ್ಕಳಿಗೆ ಇಂತಹ ಬೋಧನೆಯನ್ನು ವಿವಿಧ ಮಾರ್ಗಗಳಿಂದ ನೀಡುವುದಷ್ಟೇ ಇದರ ಮುಖ್ಯ ಉದ್ದೇಶ. ವಸ್ತುಗಳನ್ನು ಗುರುತಿಸಲು, ವ್ಯತ್ಯಾಸಗಳನ್ನು ಗಮನಿಸಲು ಇದರಿಂದ ಮಗುವಿಗೆ ರೂಢಿಯಾಗುವುದು; ನೋಟಕ್ಕೆ ಸಂಬಂಧಿಸಿದ ಸಾಮರ್ಥ್ಯಗಳು ಬೆಳೆಯುವುವು; ವಸ್ತುಗಳ ಅಧ್ಯಯನಕ್ಕೆ ಹೆಚ್ಚಿನ ಬಲ ಬರುವುದು. ಮಕ್ಕಳು ಇಷ್ಟಪಡುವಂತಹ ಮತ್ತು ಆಲಿಸುವ ಕೌಶಲ್ಯದೊಂದಿಗೆ ಗಮನವನ್ನೂ ಜಾಸ್ತಿ ಮಾಡುವಂತಹ ಒಂದು ಪರಿಣಾಮಕಾರಿ ಆಟ ಎಂದರೆ ಅದು 'ಸೈಮನ್ ಸೇಸ್' (Simon says). ಶಿಕ್ಷಕಿ ಆದೇಶಗಳನ್ನು ಕೊಡುತ್ತಾ ಹೋದಂತೆ ಮಕ್ಕಳು ಅದನ್ನು ಪಾಲಿಸುತ್ತಾರೆ.

**ಉದಾಹರಣೆಗೆ:**
ಸೈಮನ್ ಸೇಸ್, ಟಚ್ ಯುವರ್ ನೋಸ್ (ಸೈಮನ್ ಹೇಳುತ್ತಾರೆ, ನಿಮ್ಮ ಮೂಗನ್ನು ಮುಟ್ಟಿ)
ಸೈಮನ್ ಸೇಸ್, ಟಚ್ ಯುವರ್ ಫೀಟ್ (ಸೈಮನ್ ಹೇಳುತ್ತಾರೆ, ನಿಮ್ಮ ಪಾದಗಳನ್ನು ಮುಟ್ಟಿ)

ಸೈಮನ್ ಸೇಸ್, ಹೋಲ್ಡ್ ಯುವರ್ ಥಂಬ್ (ಸೈಮನ್ ಹೇಳುತ್ತಾರೆ, ನಿಮ್ಮ ಹೆಬ್ಬೆರಳನ್ನು ಹಿಡಿದುಕೊಳ್ಳಿ)

ಇತ್ಯಾದಿ......

ಮಧ್ಯೆ ಸೈಮನ್ ಸೇಸ್ ಹೇಳದೇ ಕೇವಲ ಆದೇಶವನ್ನು ಮಾತ್ರ ಹೇಳಿದಾಗ ಮಕ್ಕಳು ಆ ಆದೇಶವನ್ನು ಪಾಲಿಸದೆ ಸುಮ್ಮನಿರಬೇಕು. ಇಂಥ ಆಟಗಳನ್ನು ಮಕ್ಕಳು ಹೆಚ್ಚು ಇಷ್ಟಪಟ್ಟು ಮಾಡುತ್ತಾರೆ. (ಈ ಅಭ್ಯಾಸದ ಬೇರೆ ಆವೃತ್ತಿಗಳೂ ಇರಬಹುದು)

**ಇತರ ಚಟುವಟಿಕೆಗಳು**

- ಗೆರೆಗಳನ್ನು ಎಳೆಯುವುದನ್ನು ಅಭ್ಯಾಸ ಮಾಡಿಸುವುದು. ಮಕ್ಕಳಿಗೆ ಮರಳಿನಲ್ಲಿ ದೊಡ್ಡದಾದ ವೃತ್ತಗಳನ್ನು ಬರೆಯಲು ಹೇಳುವುದು. ಕ್ರೇಯಾನ್ ಬಳಸುವ ಮೊದಲು ಹಿಟ್ಟು, ಪೇಯಿಂಟ್ ಹಾಗೂ ಗಾಳಿಯಲ್ಲಿ ಬರೆಯಲು ಹೇಳುವುದು, ನಂತರ ಕ್ರೇಯಾನ್ ಬಳಸಲು ಹೇಳುವುದು.
- ಒಂದೇ ರೀತಿಯ ಮೇಲ್ಮೈರಚನೆಗಳನ್ನು ಹೊಂದಿರುವ ವಸ್ತುಗಳನ್ನು ಬೇರೆ ಬೇರೆ ಪೆಟ್ಟಿಗೆಗಳಲ್ಲಿ/ಚೀಲದಲ್ಲಿ ಇರಿಸಿ. ಒಂದು ಚೀಲ / ಪೆಟ್ಟಿಗೆಯಿಂದ ಒಂದು ವಸ್ತುವನ್ನು ತೆಗೆಯಲು ಮಕ್ಕಳಿಗೆ ಹೇಳುವುದು ಮತ್ತು ಅದೇ ನಮೂನೆಯ ವಸ್ತುವನ್ನು ಇನ್ನೊಂದು ಚೀಲ / ಪೆಟ್ಟಿಗೆಯಿಂದ ಆರಿಸಲು ಹೇಳುವುದು.
- ಮಕ್ಕಳಿಗೆ ದೊಡ್ಡ ಹೆಜ್ಜೆಗಳು/ಬಿಗ್ ಸ್ಟೆಪ್, ಸಣ್ಣ ಹೆಜ್ಜೆಗಳು / ಲಿಟಲ್ ಸ್ಟೆಪ್, ದೊಡ್ಡ ಜಿಗಿತ/ಬಿಗ್ ಜಂಪ್, ಸಣ್ಣ ಜಿಗಿತ/ಸ್ಮಾಲ್ ಜಂಪ್, ಗೆರೆಯಮೇಲೆ ನಡೆಯುವುದು, ಒಂದು ಕಾಲಿನಲ್ಲಿ ಜಿಗಿಯುವುದು, ತುದಿ ಬೆರಳಿನಲ್ಲಿ ನಡೆಯುವುದು, ಚೆಂಡು ಎಸೆಯುವುದು, ಹಿಡಿಯುವುದು, ಒದೆಯುವುದು, ಟಯರನ್ನು ಉರುಳಿಸುವುದು ಮುಂತಾದ ಚಟುವಟಿಕೆಗಳನ್ನು ಮಾಡಲು ಹೇಳುವುದು.

**ಸ್ವಸಹಾಯ ಕೌಶಲ ಬೆಳೆಸುವ ಚಟುವಟಿಕೆಗಳು**
ಮೇಲೆ ಹೇಳಿದ ಅಭ್ಯಾಸಗಳಲ್ಲದೆ ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಸ್ವಸಹಾಯದ ಪರಿಣತಿಯನ್ನು ಕಲಿಸುವ ಚಟುವಟಿಕೆಗಳನ್ನು ಮಾಡಿಸಬೇಕು; ಹಾಗೆ ನೋಡಿದರೆ ಇಂತಹವುಗಳು ಸಾಮಾನ್ಯ ತರಗತಿಯ ವಿದ್ಯಾರ್ಥಿಗಳಿಗೂ ಅಣತ್ಯವಿದೆ. ಶಿಕ್ಷಕರು ಮಕ್ಕಳಿಗೆ ಈ ಕೆಳಗಿನ ಚಟುವಟಿಕೆಗಳನ್ನು ಕೊಡಬಹುದು:

- ತಮ್ಮ ವಸ್ತುಗಳನ್ನು ತಾವೇ ಚೀಲದಲ್ಲಿ ತುಂಬಿಸುವುದು.
- ದೇಹವನ್ನು ಶುಚಿಯಾಗಿ ಇರಿಸಿಕೊಳ್ಳುವುದು, ನ್ಯಾಪ್‌ಕಿನ್ ಅಥವಾ ಕರವಸ್ತ್ರವನ್ನು ಬಳಸುವ ಅಭ್ಯಾಸ.
- ಅಗತ್ಯವೆನಿಸಿದಾಗ ಶೌಚ, ಸ್ನಾನದ ಕೊಠಡಿ ಬಳಸುವುದು.




- ವಿರಾಮದ ವೇಳೆಯಲ್ಲಿ ಬೇರೆ ಮಕ್ಕಳಿಗೆ ಹಣ್ಣು, ಹಣ್ಣಿನ ರಸ ಇತ್ಯಾದಿಯನ್ನು ಕೊಡುವುದು.

ಇದನ್ನು ಮಾಡುವ ಉದ್ದೇಶವೆಂದರೆ ಮಕ್ಕಳು ತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳಲು, ಬೇರೆಯವರಿಗೆ ಸಹಾಯ ಮಾಡಲು, ಮತ್ತು ತಮ್ಮ ಅಗತ್ಯಗಳೇನೆಂದು ಕಂಡುಕೊಳ್ಳಲು ಸಾಧ್ಯವಾಗುತ್ತದೆ ಒಟ್ಟಿನಲ್ಲಿ ಸ್ವತಂತ್ರವಾಗಿ ಜೀವಿಸುವುದು ಹಾಗೂ ಬೇರೆಯವರಿಗೆ ನೆರವಾಗುವುದಕ್ಕೆ ಮೊದಲ ಪಾಠವನ್ನು ಒದಗಿಸುವುದು.

ಗಮನವನ್ನು ಹೆಚ್ಚಿಸಲು, ಕಲಿತುದನ್ನು ನೆನಪಿನಲ್ಲಿ ಇಟ್ಟುಕೊಳ್ಳಲು ಹಾಗೂ ಕೈ ಮತ್ತು ಕಣ್ಣುಗಳ ಸಮನ್ವಯವನ್ನು ಹೆಚ್ಚಿಸುವ ಚಟುವಟಿಕೆಗಳು.

ಇಂತಹ ತೊಂದರೆಗಳಿರುವ ಮಕ್ಕಳಿಗೆ ಅನುಕೂಲವಾಗುವ ಕೆಲವು ಚಟುವಟಿಕೆಗಳು ಈ ಕೆಳಗಿನಂತಿವೆ. ಇವುಗಳಲ್ಲಿ ಕೆಲವು ಚಟುವಟಿಕೆಗಳು ಒಂದಕ್ಕಿಂತ ಹೆಚ್ಚಿನ ಸಮಸ್ಯೆಗಳಿಗೆ ಪರಿಹಾರ ನೀಡಬಹುದು. ಮಕ್ಕಳಿಗೆ ಚಟುವಟಿಕೆಗಳು ಮತ್ತು 'ಚಿಕ್ಕ ತರಗತಿಗಳಿಗೆ ಹೇಗೆ ಕಲಿಸಬೇಕು ಅಥವಾ ಚಟುವಟಿಕೆ ಆಧಾರಿತ ಕಲಿಕೆಯು ಕೇವಲ ಕಲ್ಪನೆಯಾಗಿರದೆ ಪ್ರತಿಯೊಂದು ಚಟುವಟಿಕೆಯ ಉದ್ದೇಶ ಹಾಗೂ ಕಾರಣವು ಶಿಕ್ಷಕರಿಗೆ ತಿಳಿದಿರಬೇಕು')

**ಗಮನವನ್ನು ಹೆಚ್ಚಿಸುವುದು**

- ಸೂಜಿಗೆ ದಾರ ಪೋಣಿಸುವುದು (ಹೊಲಿಗೆ ಕಿಟ್‌ನಲ್ಲಿ ಪ್ಲಾಸ್ಟಿಕ್ ಸೂಜಿ ಸಿಗುತ್ತದೆ).
- ಸ್ಟ್ರಾಗಳನ್ನು ಹೆಕ್ಕುವ ಜೆಂಗಾ ಆಟ. ಅಂದರೆ ಎಲ್ಲಾ ಸ್ಟ್ರಾಗಳನ್ನು ಒಂದು ಪೆಟ್ಟಿಗೆಯ ಒಳಗೆ ಲಂಬವಾಗಿ ಹಾಕುವುದು. ಅಲ್ಲಿಂದ ಒಂದು ಸ್ಟ್ರಾವನ್ನು ಬೇರೆ ಸ್ಟ್ರಾಗಳನ್ನು ಅಲುಗಾಡಿಸದಂತೆ ತೆಗೆಯುವುದು (ಯಾರು ಹೆಚ್ಚು ತೆಗೆಯುವರೋ ಅವರು ಗೆದ್ದಂತೆ, ಇದೊಂದು ಖುಷಿ ಕೊಡುವ ಆಟ).
- ನಿರ್ದಿಷ್ಟ ಅಕ್ಷರದಿಂದ ಪ್ರಾರಂಭವಾಗುವ ಶಬ್ದವನ್ನು ಕೇಳಿ–ದೊಡನೆಯೇ ಕೈ ಎತ್ತುವುದು.
- ಶಿಕ್ಷಕರು ಬಣ್ಣದ ಕಾರ್ಡುಗಳನ್ನು ತೋರಿಸುತ್ತಾ ಹೋಗುವುದು, ಮಕ್ಕಳು ಒಂದು ನಿರ್ದಿಷ್ಟ ಬಣ್ಣದ ಕಾರ್ಡು (ಉದಾ: ಕೆಂಪು) ಎಷ್ಟು ಬಾರಿ ಬಂದಿತು ಎಂದು ಲೆಕ್ಕವಿಟ್ಟುಕೊಂಡು ಹೇಳುವುದು.

**ಕೈ ಮತ್ತು ಕಣ್ಣುಗಳ ಸಮನ್ವಯ ಹಾಗೂ ಸ್ನಾಯುಗಳ ಬೆಳವಣಿಗೆ**

- ಹೊಲಿಯುವುದು, ಬಟ್ಟೆಯ ಮೇಲೆ ಅಥವಾ ಚಾರ್ಟ್–ಪೇಪರಿನ ಮೇಲೆ ಅಡ್ಡ ಹೊಲಿಗೆ ಹಾಕುವುದು.
- ಮಣಿಗಳು ಮತ್ತು ಬೀಜಗಳನ್ನು ವಿಂಗಡಿಸುವುದು ಬಣ್ಣ, ಗಾತ್ರ ಇತ್ಯಾದಿಗಳ ಆಧಾರದ ಮೇಲೆ ಅವುಗಳನ್ನು ವರ್ಗೀಕರಿಸುವುದು.

ಚುಕ್ಕೆಗಳ ಸಾಲುಗಳನ್ನು ಸೇರಿಸುವುದು ಅಥವಾ ಚಿತ್ರದ ಮೇಲೆ ನಕಲು ಮಾಡುವುದು. ಚುಕ್ಕೆಗಳ ಸಾಲುಗಳು, ಮಡಚಿದ ಸಾಲುಗಳು ಅಥವಾ ಚಿತ್ರದ ಅಂಚಿನ ಭಾಗದ ಗೆರೆಗಳನ್ನು ಕತ್ತರಿಸುವುದು.

**ಶ್ರವಣ (ಆಲಿಸುವುದು)ಕೌಶಲ್ಯವನ್ನು ಹೆಚ್ಚಿಸುವುದು**

- ಚಪ್ಪಾಳೆಯ ತಾಳವನ್ನು ಕೇಳಿ ಅನುಕರಿಸುವುದು.
- “ಕರಡಿ ಟೇಲ್ಸ್” ಸರಣಿ (ಇದು ಈಗಲೂ ಲಭ್ಯವಿದ್ದರೆ ಮಕ್ಕಳಿಗೆ ಒಂದು ಅತ್ಯುತ್ತಮ ಕಲಿಕಾ ಸಾಮಗ್ರಿ) ನೋಡುವುದು. ಪ್ರಸ್ತುತ ಜನರು ಬುಕ್‌ಬಾಕ್ಸ್ ವೀಡಿಯೋಗಳನ್ನು ಉಪಯೋಗಿಸುತ್ತಾರೆ.
- ಸದ್ದು/ಮಾತಿನ ಧ್ವನಿಯನ್ನು ಆಲಿಸಿ ಅದು ಎಲ್ಲಿಂದ ಬಂದಿದೆಯೆಂದು ಆ ದಿಕ್ಕನ್ನು ತೋರಿಸುವುದು.
- ಕಣ್ಣುಗಳಿಗೆ ಪಟ್ಟಿ ಕಟ್ಟಿಕೊಂಡು ಸುತ್ತಲಿನ ಸದ್ದನ್ನು ಕೇಳಿಸಿಕೊಂಡು ಅದು ಯಾವುದರ ಸದ್ದು ಎಂದು ಗುರುತಿಸುವುದು.

**ನೆನಪಿನ ಶಕ್ತಿ ಹೆಚ್ಚಿಸುವುದು**

- ಒಂದು ಕತೆಯನ್ನು ಹೇಳುವ ಅನುಕ್ರಮ ಮಾದರಿಯಲ್ಲಿ ಚಿತ್ರದ ಕಾರ್ಡುಗಳನ್ನು ಜೋಡಿಸಲು ಮಕ್ಕಳಿಗೆ ಹೇಳುವುದು.
- ಮಕ್ಕಳು ಕಥೆಯನ್ನು ತಮ್ಮದೇ ಮಾತಿನಲ್ಲಿ ನೆನಪಿಸಿ-ಕೊಳ್ಳುವುದು ಆದರೆ ಕಥೆಯನ್ನು ಅನುಕ್ರಮವಾಗಿ ಹೇಳುವುದು.
- ಸಹಪಾಠಿಗಳ ಹೆಸರುಗಳನ್ನು ನೆನಪಿಸಿಕೊಂಡು ಹೇಳುವುದು.

ತಟ್ಟೆಯೊಂದರಲ್ಲಿ ಕೆಲವು ವಸ್ತುಗಳನ್ನು ಚೆಲ್ಲಾಪಿಲಿಯಾಗಿ ಹರಡಿ ಮಕ್ಕಳಿಗೆ ಅದನ್ನು ಒಂದು ನಿಮಿಷ ನೋಡಲು ಹೇಳುವುದು. ನಂತರ ಮಕ್ಕಳು ಸಾಧ್ಯವಾದಷ್ಟು ವಸ್ತುಗಳನ್ನು ನೆನಪಿಸಿಕೊಂಡು ಹೇಳುವುದು.

**ಬಯಲು ಆಕೃತಿಯ ಗ್ರಹಿಕೆ**

ಮೇಲೆ ನೀಡಲಾದ ಚಿತ್ರದಲ್ಲಿ ಇರುವ ವಸ್ತುಗಳನ್ನು ಮಕ್ಕಳು ಕಂಡುಹಿಡಿಯಬೇಕು. ತುಂಬಾ ಚಟುವಟಿಕೆ ನಡೆಯುವ ಬಯಲಲ್ಲಿ ಒಂದು ನಿರ್ದಿಷ್ಟ ವಸ್ತುವಿನ ಮೇಲೆ ಗಮನ ಕೇಂದ್ರೀಕರಿಸಲು ಮಕ್ಕಳಿಗೆ ಇದರಿಂದ ಸಹಾಯವಾಗುತ್ತದೆ. ಅಂತೆಯೇ ಹಲವು ಶಬ್ದಗಳ ನಡುವೆ ಒಂದು ಕ್ಷೀಣವಾದ ಆದರೆ ವಿಶಿಷ್ಟವಾದ ಸದ್ದನ್ನು ಗುರುತಿಸುವಂತೆಯೂ ಅಭ್ಯಾಸ ಮಾಡಿಸಬಹುದು. ಈ ಅಭ್ಯಾಸಗಳು ಮಗುವಿಗೆ ವಿಶಾಲ ಸನ್ನಿವೇಶಗಳಲ್ಲಿ ನಿರ್ದಿಷ್ಟ ವಸ್ತುವನ್ನು ಹುಡುಕಿ ತೆಗೆಯುವುದಕ್ಕೆ ಸಹಾಯ ಮಾಡುತ್ತವೆ. ಒಂದು ಪುಸ್ತಕದಿಂದ, ಕಪ್ಪುಹಲಗೆಯಿಂದ, ಶಬ್ದಕೋಶದಿಂದ ಅಥವಾ ಒಂದು ಪುಟ ಅಥವಾ ಸಾಲಿನಿಂದ ಮಾಹಿತಿಯನ್ನು ಹುಡುಕಿ ತೆಗೆಯುವುದೂ ಉತ್ತಮ ಅಭ್ಯಾಸ.

ಇಂತಹ ಚಟುವಟಿಕೆಗಳ ಪಟ್ಟಿ ಕೊನೆಯವರೆಗೂ ಮುಗಿಯದೇ ಇರುವಂತಹುದು. ಮುಖ್ಯವಾಗಿ ಇದು ಕೇವಲ ಪಟ್ಟಿಯನ್ನು ಮಾತ್ರ ಹೊಂದಿಲ್ಲ ಇದು ಆಯಾ ಅಭ್ಯಾಸದ ಉದ್ದೇಶವನ್ನು ಸಹಾ ಹೊಂದಿದೆ.. ಶಿಕ್ಷಕರು ಪಠ್ಯಕ್ರಮವನ್ನು ಪೂರ್ಣಗೊಳಿಸಬೇಕು, ಆದರೆ ಗುಣಮಟ್ಟದ ಬೋಧನೆಯ ತಂತ್ರವನ್ನು ಹೇಗೆ ಅಳವಡಿಸಿಕೊಳ್ಳಲಾಗುವುದು ಎಂಬುದು ಕೂಡ ಇಲ್ಲಿ ಮುಖ್ಯ-ವಾಗಿರುತ್ತದೆ ಮಕ್ಕಳಿಗೆ ಹೇಗೆ ಕಲಿಸುತ್ತಾರೆ, ಮಕ್ಕಳನ್ನು ಹೇಗೆ ನೋಡುತ್ತಾರೆ, ನೀವು ಕಲಿಸಿದ ವಿಷಯ ಏನು, ಮಕ್ಕಳ ಅಗತ್ಯಗಳನ್ನು ಪೂರೈಸಲು ಬೋಧನೆಯಲ್ಲಿ ಹೊಂದಾಣಿಕೆ ಮಾಡಿಕೊಂಡಿದ್ದಾರಾ ಎಂಬಂತಹ ಅಂಶಗಳು ಎಲ್ಲಾ ಮಕ್ಕಳನ್ನು ಕಲಿಕೆಯ ವ್ಯಾಪ್ತಿಯೊಳಗೆ ತರಲು ಕೊಂಚ ಹೆಚ್ಚುವರಿ ಪರಿ-ಶ್ರಮವನ್ನು ಮಾಡಬೇಕಾಗುತ್ತದೆ.

**ಆಟಗಳು**

ಶಿಕ್ಷಕರಿಗೆ ಮಕ್ಕಳನ್ನು ಗಮನಿಸಲು ಮತ್ತು ಅರ್ಥ-ಮಾಡಿಕೊಳ್ಳಲು ಇರುವ ಉತ್ತಮ ಅವಕಾಶವೇ ಆಟ. ಆಟವು ಮಕ್ಕಳ ಸಂವಹನದ ಸಹಜ ಮಾರ್ಗವಾಗಿದೆ. ‘ಮಕ್ಕಳಿಗೆ ಆಟವೆಂಬುದು ತಮ್ಮ ಅನುಭವ ಮತ್ತು ಭಾವನೆಗಳನ್ನು ವ್ಯಕ್ತಪಡಿಸಲು ಇರುವಂತಹ ಸಹಜವಾದ, ಕ್ರಿಯಾತ್ಮಕ ಹಾಗೂ ನೋವು-ನಿರಾಸೆಗಳನ್ನು ಮರೆಯಲು ಇರುವಂತಹ ಒಂದು ಪರಿಹಾರೋಪಾಯ ಮಾರ್ಗವಾಗಿದೆ’. ಒಂದು ಮಗು ಆಟವಾಡುತ್ತಿರುವಾಗ ಅದು ಶಾರೀರಿಕವಾಗಿ, ಮಾನಸಿಕವಾಗಿ ಹಾಗೂ ಭಾವನಾತ್ಮಕವಾಗಿ ಆಟದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಿರುತ್ತದೆ. ಅದಕ್ಕಾಗಿಯೇ ಆಟದ ಜಾಗವು ಹೆಚ್ಚು ಹೆಚ್ಚಾಗಿ ಮಕ್ಕಳ ನಿಜ ಜೀವನಕ್ಕೆ ಹತ್ತಿರವಾಗಿರಬೇಕು ಮತ್ತು ಇದು ಸದಾಕಾಲ ಆಜ್ಞಾನುಸಾರ ನಡೆಯುವ ಪ್ರಕ್ರಿಯೆ ಆಗಬಾರದು. ಮಕ್ಕಳು ತಮ್ಮ ಪರಿಸರದಲ್ಲಿ ಗಮನಿಸುವ ಅಥವಾ ಸುತ್ತ-ಮುತ್ತಲಿನಿಂದ ಕಲಿಯುವುದಕ್ಕೆ ಸಹಾಯಕವಾಗಲು ಕಲಿಕಾ ಸಾಮಗ್ರಿಗಳನ್ನು ಒದಗಿಸುವುದು ಬಹಳ ಮುಖ್ಯವಾಗಿರುತ್ತದೆ. ಅಡುಗೆ ಸಾಮಗ್ರಿಗಳ ಕಿಟ್, ವೈದ್ಯರ ಕಿಟ್, ಮರಗೆಲಸದವರ ಕಿಟ್, ಕೊಳಾಯಿ ಕೆಲಸದವರ ಕಿಟ್, ಶಿಕ್ಷಕರ ಸಾಮಗ್ರಿಗಳು ಇತ್ಯಾದಿ. ‘ವಯಸ್ಕರಿಗೆ ಮಾತಿನ ಚಟುವಟಿಕೆಗಳು ಮುಖ್ಯವಾದರೆ, ಆಟವು ಮಕ್ಕಳಿಗೆ ಮುಖ್ಯವಾದುದಾಗಿದೆ’.

**ವಿವಿಧತೆಯನ್ನು ಸ್ವೀಕರಿಸಲು ಮಕ್ಕಳಿಗೆ ನೆರವಾಗಿ**

ಈ ಮೇಲಿನ ಎಲ್ಲಾ ಚಟುವಟಿಕೆಗಳು ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಉಪಯುಕ್ತವಾದುದರಿಂದ ಇವುಗಳನ್ನು ಸಮನ್ವಯದ ಕಾರ್ಯ-ಕ್ರಮವಾಗಿ ಸಾಮಾನ್ಯ ತರಗತಿಯಲ್ಲಿ ನಡೆಸಬೇಕು. ಇಂತಹ ಅಭ್ಯಾಸಗಳು, ಮಕ್ಕಳು ಪರಸ್ಪರರನ್ನು ಒಪ್ಪಿಕೊಳ್ಳುವಂತೆ, ವಿವಿಧತೆಯನ್ನು ಸ್ವೀಕರಿಸುವಂತೆ ಮಾಡುವುದಲ್ಲದೆ ಎಲ್ಲಾ ಮಕ್ಕಳನ್ನೂ ಭಾವನಾತ್ಮಕವಾಗಿ ಬೆಸೆಯಲು ಸಹಾಯ ಮಾಡುತ್ತವೆ.

ಶಿಕ್ಷಕರು ಸಾಧ್ಯವಾದಾಗಲೆಲ್ಲಾ ವಿಶೇಷ ಶಿಕ್ಷಕರ ಜೊತೆ ಸೇರಿ ಸಹಕಾರದಿಂದ ಕೆಲಸ ಮಾಡಬೇಕು. ಶಾಲೆಗಳಲ್ಲಿ ಬೋಧನಾ-ಕಲಿಕಾ ಸಾಮಗ್ರಿಗಳನ್ನು ತಾವೇ ತಯಾರಿಸಬೇಕು.

- ಮಕ್ಕಳ ಸ್ನೇಹಿ ಪಠ್ಯಕ್ರಮವನ್ನು ರೂಪಿಸಬೇಕು.
- ಬೋಧನಾ ವಿಧಾನಗಳನ್ನು ಯೋಜನಾಬದ್ಧವಾಗಿ ರೂಪಿಸಬೇಕು.
- ಮೌಲ್ಯಮಾಪನ ಪದ್ಧತಿಯನ್ನು ಪುನರ್ ರೂಪಿಸಬೇಕು.

ಶಿಕ್ಷಕರು ಮಾರ್ಗದರ್ಶನ ಮಾಡುವ, ಪೋಷಕರಿಗೂ ಮತ್ತು ಸಮುದಾಯದವರಿಗೂ ಕಲಿಕೆಯ ಸಮರ್ಪಕ ವಿಧಾನದ ಬಗ್ಗೆ ಅರಿವು ಮೂಡಿಸುವ ಹಾಗೂ ಭಿನ್ನತೆಗಳನ್ನು ಸಹಜವೆಂಬಂತೆ ಒಪ್ಪಿಕೊಳ್ಳುವ ದೃಷ್ಟಿಕೋನವನ್ನು ಮಕ್ಕಳಲ್ಲಿ ಮೂಡಿಸುವ ಕಾರ್ಯವನ್ನು ಮಾಡಬೇಕು. ಸಾಮಾನ್ಯ ವಿಷಯಗಳ ಶಿಕ್ಷಕರು ತರಬೇತಿ ಪಡೆದ ನಂತರವೂ ಕೂಡ ಅವರ ಬೋಧನಾ ವಿಧಾನ ಹಾಗೂ ಕಾರ್ಯಕ್ರಮಕ್ಕೆ ಬೆಂಬಲ ಒದಗಿಸುವ ವ್ಯವಸ್ಥೆ ರೂಪಿಸಬೇಕು. ಶಿಕ್ಷಕರೂ ಕೂಡ ಮಕ್ಕಳಿಗೆ ಏನು ತಿಳಿದಿದೆಯೋ ಅದನ್ನು ಗುರುತಿಸಿ, ಮೆಚ್ಚಿ, ಒಪ್ಪಿಕೊಳ್ಳಬೇಕಲ್ಲದೆ, ಅದಕ್ಕೆ ಪ್ರಶಂಸೆಯನ್ನೂ ವ್ಯಕ್ತಪಡಿಸಬೇಕು. ಮಕ್ಕಳು ಎಲ್ಲಿದ್ದಾರೋ ಅಲ್ಲಿಂದ, ಅಂದರೆ ಅವರು ಕಲಿಕೆಯ ಯಾವ ಹಂತದಲ್ಲಿದ್ದಾರೆ ಎಂದು ತಿಳಿದುಕೊಂಡು ಮುಂದುವರಿಯಬೇಕು.

"ಕಲಿಸುವ ವಿಧಾನಗಳು, ಪಠ್ಯಕ್ರಮ ಹಾಗೂ ಕಲಿಕೆಯ ವಾತಾವರಣಗಳು ಮಗುವಿನ ದೌರ್ಬಲ್ಯಗಳನ್ನು ನಿವಾರಿಸುವುದಷ್ಟೇ ಅಲ್ಲದೆ ಬಲವನ್ನು ಇನ್ನಷ್ಟು ಅಭಿವೃದ್ಧಿಪಡಿಸುವ ಗುರಿ ಇಟ್ಟುಕೊಂಡರೆ ಹಾಗೂ ಪ್ರತಿಯೊಂದು ಮಗುವಿಗೆ ಬೆಳವಣಿಗೆ ಸಂಬಂಧವಾಗಿ, ಸಾಂಸ್ಕೃತಿಕವಾಗಿ ಹಾಗೂ ಭಾಷಾಪರವಾಗಿ ಅನುಕೂಲಕರವಾಗಿದ್ದರೆ ಮಕ್ಕಳ ಕಲಿಕೆ ಅತ್ಯಂತ ಸುಲಲಿತವಾಗಿ ನಡೆಯುವುದು." ಈ ಹೇಳಿಕೆಯನ್ನು ಎಚ್ಚರದಿಂದ ಗಮನಿಸಿದಾಗ ಯಾವುದೇ ವಯಸ್ಸಿನ ಮಗುವಿಗೂ ಬೆಳವಣಿಗೆಗೆ ಪೂರಕವಾಗಿ ಸಮರ್ಪಕವಾದ ಸನ್ನಿವೇಶವನ್ನು ಸೃಷ್ಟಿಸುವುದು ಎಷ್ಟು ಮಹತ್ವದ್ದಾಗಿದೆ ಎಂದು ತಿಳಿಯುತ್ತದೆ.

ಇಂದು ಜಾಗೃತಿಯು ಹಿಂದೆಂದಿಗಿಂತ ಜಾಸ್ತಿಯಾಗಿರುವುದರ ಪರಿಣಾಮವಾಗಿ ಎಲ್ಲಾ ಮಕ್ಕಳಿಗೂ ಸಮನ್ವಯ ಶಿಕ್ಷಣದಲ್ಲಿ ಪಾಲ್ಗೊಳ್ಳಲು ಹಕ್ಕಿದೆಯೆಂದು ಶಾಲೆಗಳೂ, ಶಿಕ್ಷಕರೂ ಅರ್ಥ–ಮಾಡಿಕೊಳ್ಳುತ್ತಿದ್ದಾರೆ. ಆದ್ದರಿಂದಲೇ ಅವರು ಜೀವನದಲ್ಲಿ, ದೈನಂದಿನ ವ್ಯವಹಾರದಲ್ಲಿ ಈ ವರ್ಗದ ಮಕ್ಕಳನ್ನೂ ಸೇರಿಸಿ–ಕೊಳ್ಳಲು ದಾರಿಗಳನ್ನು ಕಂಡುಕೊಳ್ಳುತ್ತಿದ್ದಾರೆ. ಈಗಿನ ಸವಾಲು ವಿಶೇಷ ಅಗತ್ಯಗಳನ್ನು ಹೊಂದಿದ ಮಕ್ಕಳಿಗೆ ವಿಶೇಷ ಚಟುವಟಿಕೆಗಳನ್ನು ಹೇಗೆ ರೂಪಿಸಬೇಕು ಎಂಬುದಲ್ಲ; ಬದಲಾಗಿ ಎಲ್ಲಾ ಮಕ್ಕಳಿಗೂ ಚಟುವಟಿಕೆಗಳನ್ನು ಮತ್ತು ಅವಕಾಶಗಳನ್ನು ಒದಗಿಸುವುದಾಗಿದೆ.

'ಮಕ್ಕಳಿಗೆ ಯಾವುದೇ ವಿಷಯ ಅರ್ಥವಾಗುವುದಕ್ಕೆ ಮೊದಲು ಅವರು ಅದನ್ನು ಅನಭವಿಸಬೇಕು... ನೈಜ ವಿಷಯಗಳೊಂದಿಗೆ ಪ್ರಯೋಗ ನಡೆಸಬೇಕು'.

'ಅವರಿಗೆ ಅಗತ್ಯವುಳ್ಳ ವಸ್ತುಗಳನ್ನು ಕೊಡುವುದು ಮತ್ತು ಅವರ ಕೆಲಸಕ್ಕೆ ಮಾರ್ಗದರ್ಶನ ನೀಡುವುದು. ಆದರೆ ಅವರಿಗೆ ಮಿತಿಮೀರಿ ಆದೇಶಗಳನ್ನು ಕೊಡಬಾರದು..'

'ಮುಂದೆ ಶಾಲೆಯಲ್ಲಿ ಮಕ್ಕಳು ಸಿದ್ಧಾಂತಗಳನ್ನೂ ಅದಕ್ಕೆ ವ್ಯಾಖ್ಯಾನಗಳನ್ನೂ ಕಲಿತುಕೊಳ್ಳುವರು. (Introduction, Preparation for Understanding, UNICEF))

**ಸಂಕ್ಷಿಪ್ತ ರೂಪದಲ್ಲಿ**

ಒಂದು ತರಗತಿಯಲ್ಲಿ ಚಟುವಟಿಕೆಗಳನ್ನು ಎಲ್ಲಾ ಮಕ್ಕಳಿಗೂ ಸಿದ್ಧಪಡಿಸಬೇಕು. ಕಲಿಕೆ, ಹಾಡು, ನೃತ್ಯ, ಸಂಗೀತ ಹಾಗೂ ಆಟ ಇತ್ಯಾದಿಗೆ ವಯೋಮಾನ ಅನುಸಾರವಾದ ತರಗತಿಗಳೇ ಯೋಗ್ಯ. ಒಂದು ಚಟುವಟಿಕೆಯ ಯೋಜನೆ ತಯಾರಿಸುವಾಗ ಅದಕ್ಕೆ ಒಂದು ಉದ್ದೇಶ ಇರಬೇಕು; ಆದರೆ ಅದು ಆ ಚಟುವಟಿಕೆಯಲ್ಲಿ ಭಾಗವಹಿಸುವ ಮಗುವಿನ ಮೌಲ್ಯಮಾಪನದ ಉದ್ದೇಶಕ್ಕಾಗಿ ಇರಬಾರದು. ಮಕ್ಕಳಿಗೆ ತುಂಬಾ ಅವಕಾಶಗಳನ್ನು ಒದಗಿಸುವುದೇ ಚಟುವಟಿಕೆಯ ಉದ್ದೇಶ ಆಗಿರಬೇಕು; ಆಗ ಕಲಿಕೆ ತಾನಾಗಿಯೇ ಆಗುವುದು. ಮಕ್ಕಳು ಕಲಿಯುತ್ತಿದ್ದಾರೆಯೇ, ಇಲ್ಲವೇ, ಎಂಬುದನ್ನು ಸೂಕ್ಷ್ಮವಾಗಿ ನೋಡುವ ವೀಕ್ಷಕರು ಕೂಡಲೇ ಕಂಡುಕೊಳ್ಳುವರು. ಇದರ ಜೊತೆಗೆ ಮಕ್ಕಳಿಗೆ ಬೇಕಾಗಿರುವಂತಹದ್ದು ಸಿಗುತ್ತಿದೆಯೇ ಎಂಬುದನ್ನು ಕೂಡಾ ಗಮನಿಸಬಹುದು.

ಮುಖ್ಯವಾಗಿ ವಿಶೇಷ ಅಗತ್ಯವುಳ್ಳ ಮಕ್ಕಳಲ್ಲಿ ಬೆಳೆಸಬೇಕಾದ ಅತ್ಯಂತ ಮಹತ್ವದ ಸಾಮರ್ಥ್ಯ ಅಥವಾ ಪರಿಣತಿ ಯಾವುದು ಎಂದು ನಿಚ್ಚಳವಾಗಿ ತಿಳಿದಿರಬೇಕು. ಸಾಮಾಜಿಕ ಕೌಶಲ್ಯಗಳನ್ನು ಬೆಳೆಸುವುದೇ ಮಹತ್ವದ್ದು ಎಂದಾದರೆ ಸ್ವ–ಸಹಾಯ ಚಟುವಟಿಕೆಗಳಿಗೆ ಹೆಚ್ಚಿನ ಆದ್ಯತೆ ನೀಡಬೇಕು. ದಯವಿಟ್ಟು ಅಲ್ಲಿಂದಲೇ ಪ್ರಾರಂಭಿಸಿ ಮತ್ತು ಶೈಕ್ಷಣಿಕ ಕಲಿಕೆ ಅದರ ಜೊತೆಗೇ ನಡೆಯುತ್ತಿರಲಿ. ಶಿಕ್ಷಣದ ಉದ್ದೇಶ ಮಗುವನ್ನು ಸ್ವತಂತ್ರ ವ್ಯಕ್ತಿಯನ್ನಾಗಿ ಮಾಡುವುದಾಗಿದೆ. ಮಗುವನ್ನು ಸಮಾಜದ ಮುಖ್ಯವಾಹಿನಿಗೆ ಸೇರಿಸಲು ಅನೇಕ ಮಾರ್ಗಗಳಿವೆ; ಶೈಕ್ಷಣಿಕ ಕಲಿಕೆ, ಪಠ್ಯ ವಿಷಯಗಳನ್ನು ಅಭ್ಯಸಿಸುವುದರ ಮೂಲಕ ಮಾತ್ರ ಅಲ್ಲ. ಮಗುವಿನ ಎಲ್ಲಾ ಅಗತ್ಯಗಳನ್ನೂ ಪೂರೈಸಿದ್ದೇವೆ ಎಂದು ಖಾತರಿಪಡಿಸಿದಾಗ ಮಾತ್ರ ಅದು ಸಾಧ್ಯವಾಗುತ್ತದೆ. ಇಲ್ಲಿ ವ್ಯಕ್ತಿನಿಷ್ಠ ಶಿಕ್ಷಣ ಕಾರ್ಯಕ್ರಮ (Individualised Education Programme - IEP)ದ ಬಗ್ಗೆ ಚರ್ಚಿಸಿಲ್ಲ; ಯಾಕೆಂದರೆ ಇಲ್ಲಿ ಎಲ್ಲರನ್ನೂ ಒಳಗೊಳ್ಳುವುದೇ ಮುಖ್ಯವಾದುದು.

ಮೇಲೆ ನಮೂದಿಸಿದ ಆಟಗಳ ಆಧುನಿಕ ಆವೃತ್ತಿಗಳು ಈಗ ಲಭ್ಯವಿವೆಯೆಂದು ಭಾವಿಸುತ್ತೇನೆ. ಇಲ್ಲಿ ಉಲ್ಲೇಖಿಸಿದ ಪರಿಕರಗಳು ನಾನು ವೈಯಕ್ತಿಕ ಅನುಭವದಿಂದ ನೋಡಿದ ಹಾಗೂ ಬಳಸಿದ ವಸ್ತುಗಳಾಗಿವೆ.

## *References*


Judith L. Evans, *Inclusive ECCD: A Fair Start for All Children*. Lead article in the *Coordinators' Notebook*, Issue # 22. 1998.

National Conference, "Every child's Right to Early Childhood Development: Evolving Inclusive Practices." 23-24 November 2018.

Play Therapy, The Art of the Relationship, Garry L. Landreth, Children communicate through play, pg.9).

*Portage guide to early interventions/stimulation, David E. Shearer, Chair*, The international Portage Association Civitan International Research Centre, University of Alabama at Birmingham, USA.

*Preparation for Understanding*, helping children to discover order around them – UNICEF.

*Play Therapy, The Art of the Relationship*, Garry L. Landreth.

*Teaching Students with Special Needs in Inclusive Settings*, Sixth edition, Tom E C Smith, Edward A. Polloway, James R. Patton, Carol A. Dowdy.





**ಅರುಣಾ ಜ್ಯೋತಿ** ಅವರು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಶಾಲಾ ಶಿಕ್ಷಕಿಯಾಗಿ ಅವರಿಗೆ ಅನೇಕ ವರ್ಷಗಳ ಅನುಭವವಿದೆ. ಮಾರ್ಗದರ್ಶನ ಹಾಗೂ ವಿಶೇಷ ಅಗತ್ಯಗಳ ವಿಭಾಗದ ಮುಖ್ಯಸ್ಥೆಯಾದ ಅವರು 'ನಿಧಾನವಾಗಿ ಕಲಿಯುವ'(Slow learners) ಮಕ್ಕಳಿಗಾಗಿ ಚಟುವಟಿಕೆ ಕೇಂದ್ರವೊಂದನ್ನು ಸ್ಥಾಪಿಸಿದ್ದಾರೆ. ಅರುಣಾ ಜ್ಯೋತಿ ಅವರು ಚೆನ್ನೈನ ವಿ.ಎಚ್.ಎಸ್. ಆಸ್ಪತ್ರೆಯಲ್ಲಿ ಹಾಗೂ SNEHA (ಸೆಂಟರ್ ಪಾರ್ ಸ್ಲೋ ಲರ್ನರ್ಸ್)ನಲ್ಲಿ ಸ್ವಯಂ–ಸೇವಕಿಯಾಗಿದ್ದರು. ವಿಶ್ವವಿದ್ಯಾಲಯಕ್ಕೆ ಸೇರುವ ಮೊದಲು ಅವರು ಮೊದಲ 6 ಅಜೀಂ ಪ್ರೇಮ್‌ಜಿ ಶಾಲೆಗಳನ್ನು ಸ್ಥಾಪಿಸಿದ ಅಜೀಂ ಪ್ರೇಮ್‌ಜಿ ಫೌಂಡೇಶನ್ ಶಾಲೆಗಳ ತಂಡದ ಸದಸ್ಯೆಯಾಗಿದ್ದರು. ಅವರು ಶಿಕ್ಷಕರ ವೃತ್ತಿಪರ ಬೆಳವಣಿಗೆ, ಪಠ್ಯಕ್ರಮದ ಅಭಿವೃದ್ಧಿ, CCE, ECE,, ವಿಶೇಷ ಶಿಕ್ಷಣ, ಹಾಗೂ ಈ ಶಾಲೆಗಳಲ್ಲಿ ಯುವಜನ ಸಂಬಂಧಿ ಕಲಿಕೆ ಕ್ಷೇತ್ರಗಳಲ್ಲಿ ವ್ಯಾಪಕವಾಗಿ ಕೆಲಸ ಮಾಡಿದ್ದಾರೆ. ಅವರನ್ನು ಈ ವಿಳಾಸದಲ್ಲಿ ಸಂಪರ್ಕಿಸಬಹುದು: aruna.v@azimpremjifoundation.org

ಅನುವಾದ: **ಜಿ.ಕೆ. ಮಧ್ಯಸ್ಥ** । ಪರಿಶೀಲನೆ: **ಲತಾ ಕೆ ಸಿ**

# ವೈಕಲ್ಯವುಳ್ಳ ಮಕ್ಕಳಲ್ಲಿ ಲೈಂಗಿಕತೆ ಮತ್ತು ಲೈಂಗಿಕ ಆರೋಗ್ಯ ಶಿಕ್ಷಣ

ಡಾ. ಗಿಫ್ಟಿ ಜೋಯೆಲ್

ಲೈಂಗಿಕತೆ ಎನ್ನುವುದು ದೈಹಿಕ, ಸಂಜ್ಞಾತ್ಮಕ, ಭಾವನಾತ್ಮಕ ಹಾಗೂ ಸಾಮಾಜಿಕ ಅಂಶಗಳನ್ನು ಒಳಗೊಂಡ ಮಾನವನ ಇರುವಿಕೆಯ ಒಂದು ಮುಖ್ಯವಾದ ಅಂಶ. ವೈಕಲ್ಯಗಳಿರುವ ಮಕ್ಕಳೂ ಕೂಡ ಲೈಂಗಿಕತೆಯನ್ನು ಹೊಂದಿರುತ್ತಾರೆ. ಬೆಳೆಯುತ್ತ ಹೋದಂತೆ ಅವರಲ್ಲಿಯೂ ಲೈಂಗಿಕ ಬೆಳವಣಿಗೆ ಮತ್ತು ಬದಲಾವಣೆಗಳು ಉಂಟಾಗುತ್ತವೆ. ವೈಕಲ್ಯಗಳಿರದ ತಮ್ಮ ಸಮವಯಸ್ಕರ ಹಾಗೆಯೇ ಅವರಿಗೂ ಲೈಂಗಿಕ ಭಾವನೆಗಳು, ಬಯಕೆಗಳು ಹಾಗೂ ಅಗತ್ಯಗಳಿರುತ್ತವೆ. ದುರದೃಷ್ಟವಶಾತ್ ಬಹಳಷ್ಟು ಬಾರಿ ಅವರ ಲೈಂಗಿಕತೆಯನ್ನು ಯಾರೂ ಒಪ್ಪುವುದೂ ಇಲ್ಲ, ಅದರೆಡೆಗೆ ಗಮನವನ್ನು ಹರಿಸುವುದೂ ಇಲ್ಲ. ಹಾಗಾಗಿ, ಮನೆಯಲ್ಲಾಗಲೀ ಅಥವಾ ಶಾಲೆಯಲ್ಲಾಗಲೀ ಅವರಲ್ಲಿ ಅನೇಕರಿಗೆ ಲೈಂಗಿಕ ಆರೋಗ್ಯ ಶಿಕ್ಷಣ ಲಭಿಸುವುದೇ ಇಲ್ಲ. ಇದರಿಂದಾಗಿ ಆರೋಗ್ಯಕರವಾದ ಲೈಂಗಿಕ ಅಸ್ಮಿತೆಯನ್ನು ಬೆಳೆಸಿಕೊಳ್ಳಲಾಗದೆ, ಅವರು ಋಣಾತ್ಮಕ ಲೈಂಗಿಕ ಪರಿಣಾಮಗಳಿಗೆ ಒಳಗಾಗುವ ಸಾಧ್ಯತೆಯೇ ಹೆಚ್ಚು. ವೈಕಲ್ಯಗಳಿರುವ ವ್ಯಕ್ತಿಗಳು ಲೈಂಗಿಕ ದುರುಪಯೋಗ, ಶೋಷಣೆ, ಅನಪೇಕ್ಷಿತ ಗರ್ಭಧಾರಣೆ ಹಾಗೂ ಲೈಂಗಿಕ ಸಂಪರ್ಕದಿಂದಾಗಿ ಹರಡುವ ರೋಗಗಳಿಗೆ ಹೆಚ್ಚು ತುತ್ತಾಗುತ್ತಾರೆ ಎಂದು ಸಂಶೋಧನೆಯು ನಿರಂತರವಾಗಿ ತೋರಿಸುತ್ತಲೇ ಬಂದಿದೆ.

ಒಬ್ಬ ಸಂಶೋಧಕಿಯಾಗಿ ನಾನು ಲೈಂಗಿಕ ಆರೋಗ್ಯ ಶಿಕ್ಷಣಕ್ಕೆ ಸಂಬಂಧಿಸಿದ ಕ್ಷೇತ್ರದಲ್ಲಿ ವಿಶೇಷ ಅಗತ್ಯಗಳಿರುವ, ಅದರಲ್ಲಿಯೂ ನಿರ್ದಿಷ್ಟವಾಗಿ ಸ್ವಲೀನತೆ (Autism) ತೊಂದರೆಯಿಂದ ಬಳಲುತ್ತಿರುವ ಹಲವಾರು ಮಕ್ಕಳ ಪಾಲಕರು ಹಾಗೂ ಶಿಕ್ಷಕರೊಡನೆ ಕೆಲಸ ಮಾಡಿದ್ದೇನೆ. ಎಷ್ಟೋ ಬಾರಿ ಅದು ತುಂಬಾ ಸವಾಲಿನದಾಗಿದ್ದರೂ ಕೂಡ ಹಲವಾರು ಕಾರಣಗಳಿಂದಾಗಿ ಈಗಲೂ ನಿಷಿದ್ಧವೆಂದು ಪರಿಗಣಿಸಲ್ಪಡುತ್ತಿರುವ ಈ ವಿಷಯವನ್ನು ಕುರಿತು ಕೆಲಸ ಮಾಡುವುದು ತುಂಬಾ ತೃಪ್ತಿ ನೀಡುವಂತಹುದಾಗಿದೆ

**ಲೈಂಗಿಕತೆ**

ಲೈಂಗಿಕತೆಯು ಒಬ್ಬ ವ್ಯಕ್ತಿಯ ಇರುವಿಕೆಯ ಬಹುತೇಕ ಎಲ್ಲ ಅಂಶಗಳನ್ನೂ ಅಂದರೆ, ವ್ಯಕ್ತಿಯ ಮನೋಧರ್ಮ (ಧೋರಣೆ), ಮೌಲ್ಯ, ಭಾವನೆ ಹಾಗೂ ಅನುಭವಗಳೆಲ್ಲವನ್ನೂ ಒಳಗೊಳ್ಳುತ್ತದೆ. ಇದು ಕೇವಲ ಲೈಂಗಿಕ ಬೆಳವಣಿಗೆಗೆ ಸಂಬಂಧಿಸಿದ ಶಾರೀರಿಕ ಸಂಗತಿಯಲ್ಲ ಅಥವಾ ಲೈಂಗಿಕ ಕ್ರಿಯೆಗಳಿಗೆ ಸಂಬಂಧಿಸಿದ ದೈಹಿಕ ಸಂಗತಿಯಲ್ಲ. ಇದು ವ್ಯಕ್ತಿಗಳ ಲೈಂಗಿಕ ಅನುಭವ ಮತ್ತು ಅವರು ತಮ್ಮನ್ನೇ ತಾವು ಹೇಗೆ ಲೈಂಗಿಕವಾಗಿ ಅಭಿವ್ಯಕ್ತಿಸಿಕೊಳ್ಳುತ್ತಾರೆ ಎಂಬುದಕ್ಕೆ ಹೆಚ್ಚು ಸಂಬಂಧಿಸಿದ್ದಾಗಿದೆ. ಇದು, ಅವರು ಎಂತಹ ಉಡುಪನ್ನು ಧರಿಸಲು ಆಯ್ದುಕೊಳ್ಳುತ್ತಾರೆ, ಇತರರೊಡನೆ ಹೇಗೆ ಒಡನಾಡುತ್ತಾರೆ, ಯಾವ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ಬಯಸುತ್ತಾರೆ, ಯಾರೆಡೆಗೆ ಆಕರ್ಷಿತರಾಗುತ್ತಾರೆ, ತಮ್ಮ ಪ್ರೀತಿ ಮತ್ತು ಅನ್ಯೋನ್ಯತೆಯನ್ನು ಹೇಗೆ ತೋರಿಸುತ್ತಾರೆ ಎಂಬಿತ್ಯಾದಿ ಆಯ್ಕೆಗಳಲ್ಲಿ ಪ್ರತಿಬಿಂಬಿತವಾಗುತ್ತದೆ. ಲೈಂಗಿಕತೆಯು ಹುಟ್ಟಿನಿಂದ ಪ್ರೌಢತೆಯವರೆಗೂ ಮಾನವ ಅನುಭವಗಳ ಅತ್ಯಂತ ಮುಖ್ಯ ಅಂಶವಾಗಿರುತ್ತದೆ. ಇದು ವ್ಯಕ್ತಿಯ ಪಾಲನೆಪೋಷಣೆ, ಮೌಲ್ಯಗಳು, ಅನುಭವಗಳು, ಆಧ್ಯಾತ್ಮಿಕತೆ ಹಾಗೂ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿರುತ್ತದೆ.

**ಸಾಮಾನ್ಯ ಮಕ್ಕಳಲ್ಲಿ ಲೈಂಗಿಕತೆ**

ವಿಶೇಷ ಅಗತ್ಯವುಳ ಮಕ್ಕಳಲಿ ಲೈಂಗಿಕತೆಯನ್ನು ಅರ್ಥಮಾಡಿಕೊಳ್ಳಲು ವೈಕಲ್ಯಗಳಿರದ ಮಕ್ಕಳಲ್ಲಿನ ಲೈಂಗಿಕತೆಯನ್ನು ಅರ್ಥಮಾಡಿಕೊಳ್ಳುವುದು ತುಂಬಾ ಮುಖ್ಯ. ಬದುಕಿನ ಆರಂಭಿಕ ವರ್ಷಗಳಲ್ಲಿ ಮಕ್ಕಳು ಲೈಂಗಿಕತೆಯೆಡೆಗೆ ಒಂದು ಭಾವನಾತ್ಮಕ ಹಾಗೂ ದೈಹಿಕವಾದ ಆಸಕ್ತಿಯನ್ನು ಬೆಳೆಸಿಕೊಳ್ಳುತ್ತಾರೆ. ಅದು ಊಟ ಮಾಡಿಸಿದ, ತಿನ್ನಿಸಿದ, ಎತ್ತಿಕೊಂಡ, ಮುದ್ದುಮಾಡಲ್ಪಟ್ಟ, ಸ್ನಾನ ಮಾಡಿಸಲ್ಪಟ್ಟ ಹಾಗೂ ಬಟ್ಟೆ ಬದಲಾಯಿಸಿದ ಇತ್ಯಾದಿ ಸೂಕ್ಷ್ಮ ರೀತಿಯ ದೈನಂದಿನ ಚಟುವಟಿಕೆಗಳ ಮೂಲಕ ಉಂಟಾಗುತ್ತದೆ. ಮುಟ್ಟಿಕೊಳ್ಳುವುದರಿಂದ ಅಥವಾ ಕನ್ನಡಿಯಲ್ಲಿ ತಮ್ಮನ್ನು ತಾವೇ ನೋಡಿಕೊಳ್ಳುವುದರಿಂದ ಅವರು ತಮ್ಮ ಶರೀರದ ಬಗ್ಗೆ ತಿಳಿದುಕೊಳ್ಳಬಹುದು. ಮೂರು ವರ್ಷವಾಗುವಷ್ಟರಲ್ಲಿ ಹೆಚ್ಚಿನ ಮಕ್ಕಳಲ್ಲಿ ಲಿಂಗದ ಬಗ್ಗೆ ಅರಿವು ಮೂಡಿರುತ್ತದೆ. ಅವರು ತಮ್ಮನ್ನು ಅಥವಾ ಬೇರೆಯವರನ್ನು ಗಂಡೋ ಹೆಣ್ಣೋ ಎಂದು ಗುರುತಿಸಬಲ್ಲರು. ಮತ್ತು ತಮಗೆ ತಾವೇ ಕೆಲವೊಂದು ಹೆಣ್ಣಿನ ಗಂಡಿನ ವರ್ತನೆಗಳನ್ನು ರೂಢಿಸಿಕೊಳ್ಳಬಲ್ಲರು. ಆ ಮೂಲಕ ಲಿಂಗಾಧಾರಿತ ಪಾತ್ರಗಳ ಬಗ್ಗೆ ಅರಿವನ್ನು ಪಡೆದುಕೊಳ್ಳುತ್ತಾರೆ.

ಶಾಲಾಪೂರ್ವ ವರ್ಷಗಳಲ್ಲಿ ಮಕ್ಕಳು ತಮ್ಮ ಸುತ್ತಮುತ್ತಲಿನ ಪ್ರತಿಯೊಂದು ವಸ್ತು / ಸಂಗತಿಯ ಕುರಿತು ತುಂಬಾ ಕುತೂಹಲಿಗಳಾಗಿರುತ್ತಾರೆ. ಸತತವಾಗಿ ಪ್ರಶ್ನೆಗಳನ್ನು ಕೇಳುತ್ತಲೇ ಇರುತ್ತಾರೆ. 'ಶಿಶುಗಳು ಎಲ್ಲಿಂದ ಬರುತ್ತವೆ? 'ಅಥವಾ 'ಹೆಣ್ಣು ಮಕ್ಕಳೇಕೆ ಗಂಡು ಮಕ್ಕಳಿಗಿಂತ ಭಿನ್ನ? 'ಅಥವಾ 'ಹೆಣ್ಣು ಮಕ್ಕಳಿಗೆ ಶಿಶ್ನಗಳೇಕಿಲ್ಲ? 'ಮುಂತಾದ ಪ್ರಶ್ನೆಗಳಿಗೆ ಸರಳವಾದ ಉತ್ತರಗಳನ್ನು ಕಂಡುಕೊಳ್ಳಬಹುದು. ಅದರ ಜೊತೆಗೆ, ತಮ್ಮದೇ ಸಮವಯಸ್ಕ–ರೊಡನೆ ವೈದ್ಯರು ಅಥವಾ ಅಪ್ಪ–ಅಮ್ಮ ಆಟ ಆಡುವುದು ಹಾಗೂ ಸಾಮಾಜಿಕ ಒಡನಾಟಗಳು ಲೈಂಗಿಕತೆಯನ್ನು ಇನ್ನಷ್ಟು ಚೆನ್ನಾಗಿ ಅರ್ಥಮಾಡಿಕೊಳ್ಳಲು ಅವರಿಗೆ ನೆರವಾಗುತ್ತವೆ. ಬಾಲ್ಯದ ಕೊನೆಯ ವರ್ಷಗಳಲ್ಲಿ ಮಕ್ಕಳು ಲೈಂಗಿಕ ವಿಷಯಗಳಿಗೆ ಸಂಬಂಧಿಸಿದ ವಿಚಾರಗಳ ಬಗ್ಗೆ ಅಷ್ಟೊಂದು ಆಸಕ್ತಿಯನ್ನು ಹೊಂದಿರುವುದಿಲ್ಲ. ಆದರೆ ತಮ್ಮದೇ ಲಿಂಗದ ಸಮಾನ ವಯಸ್ಕ ಮಕ್ಕಳೊಂದಿಗೇ ಆಡಲು ಇಷ್ಟಪಡುತ್ತಾರೆ. ಮಕ್ಕಳ ಲೈಂಗಿಕ ಬೆಳವಣಿಗೆಯಲ್ಲಿ ಇದು ಸುಪ್ತ ಕಾಲಾವಧಿ ಎಂದು ಹೇಳಲ್ಪಟ್ಟರೂ ಕೂಡ ತಮ್ಮ ಸಮವಯಸ್ಕರ ಅಥವಾ ಒಡಹುಟ್ಟಿದವರ ಮೂಲಕ ಅವರು ಅಸಭ್ಯ ಭಾಷೆ, ಕೀಳು ತಮಾಷೆ ಮತ್ತು ಲೈಂಗಿಕ ವಿಷಯಗಳ ಬಗ್ಗೆ ಕೆಲವು ಮಾಹಿತಿಗಳಿಗೆ ತೆರೆದುಕೊಳ್ಳುತ್ತಾರೆ.

ಬಾಲ್ಯದ ಕೊನೆಯ ಹಂತ ಮುಗಿಯುವಷ್ಟರಲ್ಲಿ ಬಹುತೇಕ ಮಕ್ಕಳಲ್ಲಿ ಜನನೇಂದ್ರಿಯದ ಭಾಗದಲ್ಲಿ ಕೂದಲು ಬೆಳೆಯುವುದು, ಎತ್ತರ, ತೂಕ ಮತ್ತು ಶಾರೀರಿಕ ಸಂರಚನೆಯಲ್ಲಿ

ಬದಲಾವಣೆಯಾಗುವುದು, ಮುಖದಲ್ಲಿ ಮೊಡವೆಗಳೇಳುವುದು ಮತ್ತು ಕೂದಲು ಬರುವುದು ಇತ್ಯಾದಿ ಪ್ರೌಢಾವಸ್ಥೆ ತಲುಪುತ್ತಿರುವುದನ್ನು ಸೂಚಿಸುವ ಸ್ಪಷ್ಟ ಲಕ್ಷಣಗಳು ಕಂಡುಬರತೊಡಗುತ್ತವೆ. ಹೆಣ್ಣುಮಕ್ಕಳಲ್ಲಿ ಇದನ್ನು ಅನುಸರಿಸಿ ಋತುಸ್ರಾವ ಆರಂಭವಾದರೆ ಗಂಡುಮಕ್ಕಳಲ್ಲಿ ಸ್ವಪ್ನಸ್ಖಲನವು ಕಂಡುಬರುತ್ತದೆ. ದೇಹದ ಜೊತೆ ಜೊತೆಗೇ ಮಾನಸಿಕ ಸ್ಥಿತಿಯಲ್ಲಿಯೂ ಬದಲಾವಣೆಗಳು ಅನುಭವಕ್ಕೆ ಬರುವುದರಿಂದ ಕಿಶೋರಾವಸ್ಥೆಯ ಬಹುತೇಕ ಮಕ್ಕಳಿಗೆ ತುಂಬಾ ಗೊಂದಲಮಯ ಹಾಗೂ ಪ್ರಕ್ಷುಬ್ಧ ಸಮಯವಾಗಿರುತ್ತದೆ. ಸ್ನೇಹಿತರು, ಪುಸ್ತಕಗಳು, ವಿದ್ಯುನ್ಮಾನ ಮಾಧ್ಯಮಗಳು ಇತ್ಯಾದಿ ತಮಗೆ ಯಾವುದು ಅನುಕೂಲಕರವಾಗಿರುತ್ತದೆಯೋ ಅಂತಹ ಹಲವಾರು ಮೂಲಗಳಿಂದ ಲೈಂಗಿಕ ವಿಚಾರಗಳ ಬಗ್ಗೆ ತಿಳಿದುಕೊಳ್ಳಲು ಅವರು ಸಕ್ರಿಯರಾಗತೊಡಗುತ್ತಾರೆ. ಕಿಶೋರಾವಸ್ಥೆಯ ಬೆಳವಣಿಗೆಯ ಭಾಗವಾಗಿ, ಅವರು ತಮ್ಮದೇ ಅಸ್ತಿತ್ವವನ್ನು ಸ್ಥಾಪಿಸಲು ಹಾಗೂ ತಂದೆತಾಯಿಯರಿಂದ ತಮ್ಮನ್ನು ದೂರವಿರಿಸಿಕೊಳ್ಳಲು ಇಷ್ಟಪಡುತ್ತಾರೆ. ತಮ್ಮ ಸಮವಯಸ್ಕರೊಡನೆ ಹೆಚ್ಚು ಸಮಯ ಕಳೆಯುತ್ತಾರೆ ಹಾಗೂ ಆಗಾಗ ಭಿನ್ನ ಲಿಂಗಿಗಳೊಡನೆ ಆಕರ್ಷಣೆಗೊಳಗಾಗುತ್ತಾರೆ. ಖಾಸಗೀತನವನ್ನು ಬಯಸುತ್ತಾರೆ ಹಾಗೂ ತಮ್ಮನ್ನು ತಾವು ಅಂದಗೊಳಿಸಿಕೊಳ್ಳಲು ಬಹಳಷ್ಟು ಸಮಯವನ್ನು ವ್ಯಯಿಸಬಹುದು. ರಸದೂತಗಳ (ಹಾರ್ಮೋನು) ವೈಪರೀತ್ಯ ಹಾಗೂ ಎರಡನೆಯ ಹಂತದ (ಪ್ರೌಢ, ಆನುಷಂಗಿಕ) ಲೈಂಗಿಕ ಲಕ್ಷಣಗಳ ಬೆಳವಣಿಗೆಯ ಕಾರಣ ಲೈಂಗಿಕ ಬಯಕೆ, ಪ್ರಚೋದನೆ ಹಾಗೂ ಉದ್ರೇಕಗಳ ಅನುಭವ ಅವರಿಗಾಗ ತೊಡಗುತ್ತದೆ. ಬೆಳೆಯುತ್ತಿರುವ ತಮ್ಮ ಶರೀರವನ್ನು ಶೋಧಿಸುತ್ತಿರುವಾಗಲೇ ತಮ್ಮ ಜನನಾಂಗಗಳ ಸ್ಪರ್ಶದ ಕಾರಣ ಸ್ವ–ಪ್ರಚೋದನೆಯು ತುಂಬಾ ಸುಖಕರ ಹಾಗೂ ಸಂತೃಪ್ತಿಕರ ಎನ್ನುವುದನ್ನು ಅವರು ಕಂಡುಕೊಳ್ಳುವ ಸಾಧ್ಯತೆಯಿರುತ್ತದೆ. ಕೆಲವರು ಇನ್ನೊಂದು ವ್ಯಕ್ತಿಯೊಡನೆ ಲೈಂಗಿಕ ಸಂಬಂಧವನ್ನು ಅನುಭವಿಸಲೆಂದು ಹುಡುಗ ಅಥವಾ ಹುಡುಗಿಯ ಸ್ನೇಹವನ್ನು ಹುಡುಕಿಕೊಳ್ಳಬಹುದು.

**ವಿಶೇಷ ಅಗತ್ಯವುಳ್ಳ ಮಕ್ಕಳಲ್ಲಿ ಲೈಂಗಿಕತೆ**

**ಲೈಂಗಿಕ ಪ್ರಬುದ್ಧತೆ**

ಲೈಂಗಿಕ ಬೆಳವಣಿಗೆಯ ದೈಹಿಕ ಅಂಶಗಳು ವಿಶೇಷ ಅಗತ್ಯವುಳ್ಳ ಮಕ್ಕಳಲ್ಲಿ ಅವರ ಸಮವಯಸ್ಕ ಮಕ್ಕಳಲ್ಲಿರುವಂತೆಯೇ ಇರುತ್ತವೆ. ಅವರು ಲೈಂಗಿಕವಾಗಿ ಪ್ರಬುದ್ಧರಾದಂತೆಲ್ಲ ಅವರ ಶರೀರವೂ ಬೆಳೆಯುತ್ತದೆ ಮತ್ತು ಬದಲಾಗುತ್ತದೆ. ಆದರೆ, ವೈಕಲ್ಯಗಳನ್ನು ಹೊಂದಿರುವ ಕೆಲವು ಮಕ್ಕಳು, ಅವರಂತೆಯೇ ವೈಕಲ್ಯಗಳನ್ನು ಹೊಂದಿರದಿದ್ದರೂ ಸಾಮಾನ್ಯವಾಗಿ ಬೆಳವಣಿಗೆಯುನ್ನು ಹೊಂದುತ್ತಿರುವ ಇನ್ನಿತರ ಸಮವಯಸ್ಕ ಮಕ್ಕಳಿಗಿಂತ ಬೇಗ ಪ್ರೌಢರಾಗುತ್ತಾರೆ ಹಾಗೂ ಅವರಲ್ಲಿ ಈ ಪ್ರೌಢತೆಯ ಅವಧಿಯು ತಡವಾಗಿ ಪೂರ್ಣಗೊಳ್ಳುತ್ತದೆ. ಇನ್ನಿತರ ಬೆಳವಣಿಗೆಯ ಅಂಶಗಳಿಗೆ ಸಂಬಂಧಿಸಿದಂತೆ ತಮ್ಮ ಸಮವಯಸ್ಕರ ಸಮಕ್ಕೆ ಬರಲು ಅವರಿಗೆ ಸ್ವಲ್ಪ ಹೆಚ್ಚು ಸಮಯ ಹಿಡಿಯಬಹುದು. ವೈಕಲ್ಯಗಳನ್ನು ಹೊಂದಿರುವ ಮಕ್ಕಳಿಗೆ ಪ್ರೌಢಾವಸ್ಥೆಯು ಉಳಿದವರಿಗಿಂತ ಹೆಚ್ಚಲ್ಲದಿದ್ದರೂ ಅಷ್ಟೇ ಗೊಂದಲಮಯವಾಗಿರುತ್ತದೆ.

ಹೆಣ್ಣು ಮಕ್ಕಳ ವಿಚಾರದಲ್ಲಿ ಋತುಸ್ರಾವದ ಕುರಿತಂತೆ ಪಾಲಕರು ಆತಂಕಕ್ಕೊಳಗಾಗುತ್ತಾರೆ ಹಾಗೂ ಬಹಳಷ್ಟು ಸಮಯದಲ್ಲಿ ಇದು ತಮಗೆ ಹಾಗೂ ತಮ್ಮ ಮಗು ಇಬ್ಬರಿಗೂ ಒಂದು ಹೊರೆಯೆಂದು ಭಾವಿಸುತ್ತಾರೆ. ಆದರೆ, ವೈಕಲ್ಯಗಳನ್ನು ಹೊಂದಿರುವ ಹೆಣ್ಣು ಮಕ್ಕಳು ಋತುಸ್ರಾವವನ್ನು ಅತ್ಯಂತ ಸಹಜವಾಗಿ ವಸ್ತುತಃ ಸ್ವೀಕರಿಸುತ್ತಾರೆ ಎಂದು ಸಂಶೋಧನೆಯು ತೋರಿಸುತ್ತದೆ. ಅವರಿಗೆ ತಮ್ಮ ಶಾರೀರಿಕ ಸ್ವಚ್ಛತೆಯನ್ನು ನೋಡಿಕೊಳ್ಳಲು ಮತ್ತು ಸ್ವಂತದ ಕಾಳಜಿ ತೆಗೆದುಕೊಳ್ಳಲು ಹೆಚ್ಚುವರಿ ನೆರವು ಬೇಕಾದೀತು. ಮುಖ್ಯವಾಗಿ ಅವರಿಗೆ ಶಿಕ್ಷಣ, ಉದ್ದೇಶ ಪೂರ್ವಕ ಪ್ರಾಯೋಗಿಕ ತರಬೇತಿ, ಹಲವಾರು ರೀತಿಯ ಕೌಶಲಾಭಿವೃದ್ಧಿ ಅವಕಾಶಗಳನ್ನು ಒದಗಿಸುವ ಮೂಲಕ ಹಾಗೂ ಅವರು ಸ್ವತಂತ್ರವಾಗಿ ಸ್ವ–ಆರೈಕೆ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವುದನ್ನು ಹೆಚ್ಚಿಸುವಂತಹ ಬಲವರ್ಧನೆಗಳ ಮೂಲಕ ಅವರು ತಮ್ಮ ಶಾರೀರಿಕ ಬದಲಾವಣೆಗಳನ್ನು ಸರಾಗವಾಗಿ ಸ್ವೀಕರಿಸುವಂತೆ ಮಾಡಬಹುದು.

**ಲೈಂಗಿಕತೆ ಮತ್ತು ಸಾಮಾಜಿಕ ಬೆಳವಣಿಗೆ**

ಸಾಮಾಜಿಕ ಬೆಳವಣಿಗೆಯು ಹೆಚ್ಚಾಗಿ ಅನುಭವಾತ್ಮಕವಾಗಿದ್ದು ವೈಕಲ್ಯಗಳಿರುವ ಮಕ್ಕಳು ಆ ನಿಟ್ಟಿನಲ್ಲಿ ಕಳೆದುಕೊಳ್ಳುವುದೇ ಹೆಚ್ಚು. ತಮ್ಮ ಇತಿಮಿತಿಗಳ ಕಾರಣ ಬೆಳೆಯುತ್ತಿರುವ ತಮ್ಮದೇ ವಯಸ್ಸಿನ ಇತರ ಸಾಮಾನ್ಯ ಮಕ್ಕಳಿಗೆ ಹೋಲಿಸಿದಾಗ ಅವರಿಗಿರುವ ಸಾಮಾಜಿಕ ಒಡನಾಟದ ಅವಕಾಶಗಳು ತುಂಬಾ ಕಡಿಮೆ ಇರುತ್ತವೆ. ಇದರಿಂದಾಗಿ, ಎಲ್ಲ ಮಕ್ಕಳೂ ಕಲಿಯಲೇಬೇಕಾದ ಅತಿ ಮುಖ್ಯವಾದ ಕಲಿಕೆಯ ಅನುಭವಗಳು ಅವರಿಗೆ ಸಿಗುವುದೇ ಇಲ್ಲ. ಲೈಂಗಿಕತೆಯ ಅಭಿವ್ಯಕ್ತಿಯನ್ನು ನಿಯಂತ್ರಿಸುವ ಸೂಕ್ಷ್ಮ ಸಾಮಾಜಿಕ ನಿಯಮಗಳ ಬಗ್ಗೆ ಅವರು ಪರಿಸರದಿಂದ ಸುಳುಹುಗಳನ್ನು ಪಡೆದುಕೊಂಡಿಲ್ಲದಿರಬಹುದು. ಲೈಂಗಿಕ ಕ್ರಿಯೆಗೆ ಸಂಬಂಧಿಸಿದ ವಿಚಾರ ಮತ್ತು ಲೈಂಗಿಕತೆಯ ಕುರಿತು ಸಮವಯಸ್ಕರು ಮತ್ತು ಸ್ನೇಹಿತರಿಂದ ಅವರು ಕಲಿಯಲು ಆಗುವುದಿಲ್ಲ. ಆದ್ದರಿಂದ ಅವರಿಗೆ ತಿಳಿದಿರುವುದು ಕಡಿಮೆ. ಇದು ಆಗಾಗ್ಗೆ ಅವರು ಮುಜುಗರ ಅನುಭವಿಸುವಂತೆ ಮಾಡುತ್ತದೆ.

ಅಲ್ಲದೇ ಅವರ ಲೈಂಗಿಕತೆಯ ಅಭಿವ್ಯಕ್ತಿಯು ಅಸಮಂಜಸ–ವಾದುದು ಹಾಗೂ ಅವರ ಸುತ್ತಮುತ್ತಲೂ ಇರುವವರಿಗೆ ಸಮಸ್ಯಾತ್ಮಕವಾದುದು ಎಂದು ಪರಿಗಣಿಸಲಾಗುತ್ತದೆ. ಏಕೆಂದರೆ, ಸಾಮಾಜಿಕ ನಿರ್ಣಯಗಳನ್ನು ಸರಿಯಾಗಿ ತೆಗೆದುಕೊಳ್ಳಲು ಆಗದ ಕಾರಣ, ನಿರ್ದಿಷ್ಟವಾಗಿ ಕೆಲವೊಂದು ರೀತಿಯಲ್ಲಿ ಎಲ್ಲರೆದುರಿಗೆ (ಸಾರ್ವಜನಿಕವಾಗಿ) ಹಾಗೆ ವರ್ತಿಸಬಹುದೇ ಅಥವಾ ಒಬ್ಬರೇ ಇರುವಾಗಷ್ಟೇ (ಏಕಾಂತದಲ್ಲಿ) ಹಾಗೆ ವರ್ತಿಸಬೇಕೇ ಎಂದು ಆಲೋಚಿಸುವ ಸಾಮರ್ಥ್ಯ ಅವರಿಗೆ ಅಷ್ಟಾಗಿ ಇರುವುದಿಲ್ಲ. ಆದ್ದರಿಂದ, ಲೈಂಗಿಕತೆಯನ್ನು ಆರೋಗ್ಯಕರ ರೀತಿಯಲ್ಲಿ ವ್ಯಕ್ತಪಡಿಸುವ ಮೂಲಕ ಪಡೆಯಬೇಕಿದ್ದ ಸುಖ ಮತ್ತು ಸಂತೃಪ್ತಿಯ ಬದಲಾಗಿ, ವೈಕಲ್ಯವನ್ನು ಹೊಂದಿರುವ ಮಕ್ಕಳು ಮತ್ತು ಹದಿವಯಸ್ಸಿನವರು ಹೆಚ್ಚಿನ ಬಾರಿ ಗದರಿಕೆಗೆ ಒಳಗಾಗುತ್ತಾರೆ ಹಾಗೂ ತಮ್ಮ ಸಾಮಾಜಿಕ ಲೈಂಗಿಕ ವರ್ತನೆಗಳು ಅಸಮಂಜಸ ಎಂಬ ಭಾವನೆಯಲ್ಲಿ ಅವರು ನಾಚಿಕೆ, ಅವಮಾನಗಳನ್ನು ಅನುಭವಿಸುವಂತೆ ಮಾಡಲಾಗುತ್ತದೆ.

**ಲೈಂಗಿಕ ವರ್ತನೆಗಳು**

ವೈಕಲ್ಯಗಳನ್ನು ಹೊಂದಿರುವ ಕಿಶೋರಾವಸ್ಥೆಯ ಮಕ್ಕಳು ರಸದೂತಗಳ ಬದಲಾವಣೆ ಮತ್ತು ಲೈಂಗಿಕ ಭಾವನೆಗಳನ್ನು ಅನುಭವಿಸಲು ಅಥವಾ ಅದಕ್ಕೆ ಸ್ಪಂದಿಸಲು ಆರಂಭಿಸಿದಾಗ ಪಾಲಕರು ಮತ್ತು ವೃತ್ತಿಪರರು ಬಹಳಷ್ಟು ಬಾರಿ ವಿಚಲಿತರಾಗುತ್ತಾರೆ ಹಾಗೂ ಗೊಂದಲಕ್ಕೊಳಗಾಗುತ್ತಾರೆ. ಇಂತಹ ನಡವಳಿಕೆ ಅಥವಾ ವರ್ತನೆಗಳು ಕಂಡುಬರುತ್ತಿರುವುದನ್ನು ನೋಡಿ ಅವರ ಮನಸ್ಸಿಗೂ ಕೂಡ ನೋವಾಗುತ್ತದೆ. ಹದಿಹರೆಯದ ಬಹಳಷ್ಟು ಮಕ್ಕಳು ಮುಷ್ಠಿ ಮೈಥುನದ (ಹಸ್ತಮೈಥುನ) ಮೂಲಕ ತಮ್ಮದೇ ಆದ ಲೈಂಗಿಕ ಕ್ರಿಯೆಗಳ ಬಗ್ಗೆ ಅರಿಯುವುದು ಸ್ವಾಭಾವಿಕ

ಅಥವಾ ಸಹಜ ನಡವಳಿಕೆಯಾಗಿದ್ದು ವೈಕಲ್ಯಗಳನ್ನು ಹೊಂದಿರದ ಬಹುತೇಕ ಮಕ್ಕಳು ಸಾಧಾರಣವಾಗಿ ಬಾಲ್ಯ ಹಾಗೂ ಕಿಶೋರಾವಸ್ಥೆ ಯುದ್ದಕ್ಕೂ ಇದರಲ್ಲಿ ವಿವಿಧ ಪ್ರಮಾಣದಲ್ಲಿ ತೊಡಗಿಕೊಂಡಿರುತ್ತಾರೆ. ಅವರು ಅದನ್ನು ಬೇರೆಯವರಿಂದ ಯಶಸ್ವಿಯಾಗಿ ಅಡಗಿಸಿಕೊಳ್ಳಲು ಕಲಿಯುವುದರಿಂದ ಅದು ಯಾರ ಗಮನಕ್ಕೂ ಬರುವುದೇ ಇಲ್ಲ. ತಮ್ಮ ಸುತ್ತಮುತ್ತಲೂ ಇರುವ ಪ್ರೌಢವಯಸ್ಕರ ಪ್ರತಿಕ್ರಿಯೆಗಳ ಆಧಾರದ ಮೇಲೆ ಯಾವ ವರ್ತನೆಯು ಒಪ್ಪಿತವಾಗುತ್ತದೆ ಎನ್ನುವುದನ್ನು ಅವರು ಬಹಳ ಬೇಗ ಕಲಿತುಬಿಡುತ್ತಾರೆ. ಸಮಯ ಸರಿದಂತೆ, ಲೈಂಗಿಕ ವರ್ತನೆಯ ಅಭಿವ್ಯಕ್ತಿಗಳು ಹೆಚ್ಚು ಹೆಚ್ಚು ಗುಪ್ತಸ್ವರೂಪವನ್ನು ಪಡೆದುಕೊಳ್ಳುತ್ತವೆ. ಆದರೆ ವೈಕಲ್ಯಗಳನ್ನು ಹೊಂದಿರುವ ಮಕ್ಕಳಿಗೆ ಇತರರ ಎದುರಿನಲ್ಲಿ ಯಾವ ರೀತಿ ವರ್ತಿಸಬಾರದು ಮತ್ತು ಯಾವ ರೀತಿ ವರ್ತಿಸಬಹುದು ಎಂಬುದನ್ನು ಕಲಿಸಬೇಕಾಗುತ್ತದೆ. ವೈಕಲ್ಯಗಳನ್ನು ಹೊಂದಿರುವ ಮಕ್ಕಳಲ್ಲಿ ಲೈಂಗಿಕ ವರ್ತನೆಗಳು ಹೆಚ್ಚು ಕಂಡುಬರಲು ಇರುವ ಕಾರಣಗಳಲ್ಲಿ ಇದೂ ಒಂದು.

**ಖಾಸಗೀತನ/ಏಕಾಂತ**

ವೈಕಲ್ಯಗಳನ್ನು ಹೊಂದಿರುವ ಮಕ್ಕಳನ್ನು, ಶೌಚಾಲಯಕ್ಕೆ ಹೋಗುವ, ಸ್ನಾನ ಮಾಡುವ ಹಾಗೂ ಬಟ್ಟೆ ಬದಲಿಸುವಂತಹ ಸ್ವಯಂ ಆರೈಕೆಯ ಚಟುವಟಿಕೆಗಳಿಗೆ ದೀರ್ಘಕಾಲೀನ ನೆರವು ಅಗತ್ಯವಿರುವವರನ್ನು ನೋಡಿಕೊಳ್ಳಲು/ನಿಗಾ ವಹಿಸಲು ನಿಯೋಜಿಸಲ್ಪಟ್ಟ ವ್ಯಕ್ತಿಗಳು ಕೆಲವು ಬಾರಿ ಅತೀ ಕಾಳಜಿ (ರಕ್ಷಣೆ ನೀಡುವವರಾಗಿದ್ದು) ವಹಿಸುವವರಾಗಿದ್ದು ಅವರನ್ನು ಚಿಕ್ಕ ಮಕ್ಕಳಂತೆ ಪರಿಗಣಿಸಬಹುದು. ಕಾಳಜಿಯ ಕಾರಣ ಅವರು ಸದಾ ಆ ಮಕ್ಕಳ ಸುತ್ತಮುತ್ತಲೇ ಇದ್ದು ಅವರ ಚಟುವಟಿಕೆಗಳನ್ನು ಗಮನಿಸುತ್ತಿರ-ಬಹುದು. ಇದರಿಂದ ಮಗುವಿಗೆ ಏಕಾಂತ ಅಥವಾ ಖಾಸಗೀ ಸಮಯ ಎನ್ನುವುದೇ ಸಿಗದಂತಾಗಬಹುದು. ಸೆರೆಬ್ರಲ್ ಪಾಲ್ಸಿಯ ಜೊತೆಗೆ ಅದಕ್ಕೆ ಸಂಬಂಧಿಸಿದ ವಾಕ್ ಸಮಸ್ಯೆಗಳನ್ನೂ ಹೊಂದಿದ್ದ ಹುಡುಗನೊಬ್ಬ ತನ್ನ ತಾಯಿಯು ಸದಾ ತನ್ನ ಸುತ್ತಮುತ್ತಲೇ ಇರುವುದರಿಂದ ತಾನು ಬೇಸತ್ತಿರುವುದಾಗಿ ನನಗೆ ಸಂದೇಶವೊಂದನ್ನು ಬರೆದಿದ್ದ.ಅವಳು ಬಚ್ಚಲುಮನೆಗೆ ಹೋದ ಸಮಯವೊಂದೇ ಆತನಿಗೆ ಒಬ್ಬಂಟಿಯಾಗಿರಲು ಸಿಗುವ ಸಮಯವಾಗಿತ್ತು. ಏಕೆಂದರೆ, ಅವನು ಶೌಚಾಲಯಕ್ಕೆ ಹೋಗುವಾಗಲೂ ಅವನಿಗೆ ಸಹಾಯ ಮಾಡಲೆಂದು ಅವಳು ಅವನ ಜೊತೆಗೇ ಇರುತ್ತಿದ್ದಳು.

> ಬೆಳೆಯುತ್ತಿರುವ ತಮ್ಮ ಮಕ್ಕಳಿಗೆ ಪ್ರತಿದಿನ ಏಕಾಂತದಲ್ಲಿ ಅವರು ಒಂದಿಷ್ಟು ಸಮಯ ಕಳೆಯಲು ಅನುವು ಮಾಡಿ-ಕೊಡುವಂತೆ ಪಾಲಕರನ್ನು ಪ್ರೋತ್ಸಾಹಿಸಬೇಕು. ಏಕೆಂದರೆ, ಇದು ಬೆಳವಣಿಗೆಯ ಅಗತ್ಯಗಳಲ್ಲೊಂದು. ಅದರಲ್ಲಿಯೂ ವಿಶೇಷವಾಗಿ ಕಿಶೋರಾವಸ್ಥೆಯಲ್ಲಿ ಇದರ ಅಗತ್ಯ ಹೆಚ್ಚೇ ಇದೆ. ನಿಯಮಿತವಾಗಿ ತಮ್ಮದೇ ಆದ ಏಕಾಂತದಲ್ಲಿ ಸಮಯವನ್ನು ಕಳೆಯಲು ಅವಕಾಶಮಾಡಿಕೊಡುವುದರಿಂದ ಅವರಿಗೆ ತಮ್ಮ ಲೈಂಗಿಕತೆಯನ್ನು ಸುರಕ್ಷಿತವಾಗಿ ಶೋಧಿಸಿ-ಕೊಳ್ಳಲು ಹಾಗೂ ಇತರರೆದುರಿಗೆ ಅವರು ಅಸಮಂಜಸ ರೀತಿಯಲ್ಲಿ ವರ್ತಿಸುವುದನ್ನು ಕಡಿಮೆ ಮಾಡಲು ಸಾಧ್ಯವಾಗುತ್ತದೆ.ಮಗುವಿಗೆ ಪ್ರತ್ಯೇಕ ಕೋಣೆಯನ್ನು ಒದಗಿಸಲು ಪಾಲಕರಿಗೆ ಸಾಧ್ಯವಾಗದಿದ್ದಲ್ಲಿ, ಅವರ ಹಾಸಿಗೆಯನ್ನು ಪರದೆಯಿಂದ ಮರೆಮಾಡಬಹುದು. ವೈಕಲ್ಯಗಳನ್ನು ಹೊಂದಿರುವ ಮಕ್ಕಳು ಭವಿಷ್ಯದಲ್ಲಿ ಹೆಚ್ಚಿನ ಪ್ರಬುದ್ಧತೆಯನ್ನು ಮತ್ತು ಸ್ವತಂತ್ರ ಬದುಕನ್ನು ಹೊಂದು-ವಂತಾಗಲು ಪಾಲಕರು ತಮ್ಮ ಮಕ್ಕಳ ಅಗತ್ಯಗಳಿಗೆ ಹಿತಕರವಾಗಿ ಸ್ಪಂದಿಸುವ ನಿಟ್ಟಿನಲ್ಲಿ ಬೇಕಾದ ಕ್ರಮಗಳನ್ನು ಕೈಗೊಳ್ಳುವುದು ಹಾಗೂ ಆ ದಿಸೆಯಲ್ಲಿ ಹೆಜ್ಜೆಗಳನ್ನಿಡುವುದು ತುಂಬಾ ಮುಖ್ಯ.

**ನಿತ್ಯ ಜೀವನದಲ್ಲಿ ಲೈಂಗಿಕ ಅಭಿವ್ಯಕ್ತಿ**

ಚಿಕ್ಕ ಮಕ್ಕಳೂ ಕೂಡ ದಿನನಿತ್ಯದ ತಮ್ಮ ಬದುಕಿನಲ್ಲಿ ತಾವು ಏನನ್ನು ಧರಿಸಲು ಬಯಸುತ್ತೇವೆ, ಕೂದಲನ್ನು ಯಾವ ಶೈಲಿಯಲ್ಲಿ ಬಾಚಿಕೊಳ್ಳಲು ಇಷ್ಟಪಡುತ್ತೇವೆ ಎಂಬಿತ್ಯಾದಿ ಚಿಕ್ಕ ಪುಟ್ಟ ನಿರ್ಧಾರಗಳನ್ನು ಮಾಡುತ್ತಾರೆ ಮತ್ತು ತಮ್ಮನ್ನೇ ತಾವು ಸಮರ್ಥಿಸಿಕೊಳ್ಳುತ್ತಾರೆ. ಆದರೆ ಅದೇ ಸಣ್ಣಪುಟ್ಟ ಆಯ್ಕೆಗಳನ್ನು ಮಾಡುವ ಸ್ವಾತಂತ್ರ್ಯವನ್ನು ವೈಕಲ್ಯಗಳಿರುವ ಮಕ್ಕಳಿಗೆ ನಿರಾಕರಿಸಲಾಗುತ್ತದೆ. ಅವರನ್ನು ನೋಡಿಕೊಳ್ಳುವವರೇ ಈ ಆಯ್ಕೆಗಳನ್ನು ಮಾಡಿಬಿಡುತ್ತಾರೆ. ವೈಕಲ್ಯಗಳನ್ನು ಹೊಂದಿರುವ ಬಹುತೇಕ ಹೆಣ್ಣುಮಕ್ಕಳ ಕೂದಲನ್ನು ಕತ್ತರಿಸಿ, ಚಿಕ್ಕದಾಗಿಸ-ಲಾಗುತ್ತದೆ. ಕೂದಲ ನಿರ್ವಹಣೆ ಸುಲಭವಾಗುತ್ತದೆ ಅಥವಾ ಅವರು ಹೆಚ್ಚು ಆಕರ್ಷಕವಾಗಿ ಕಾಣಬಾರದು ಇತ್ಯಾದಿ ಕಾರಣಗಳಿಂದಾಗಿ ಹಾಗೆ ಮಾಡುವುದು ಅವರನ್ನು ನೋಡಿಕೊಳ್ಳುವವರಿಗೆ ಅನುಕೂಲವಾಗುತ್ತದೆ. ಇಂತಹ ಕ್ರಮಗಳು, ತಮ್ಮ ಮಕ್ಕಳು ಅನಗತ್ಯವಾಗಿ ಇತರರ ಗಮನವನ್ನು ಸೆಳೆಯದಂತೆ ಕಾಪಾಡಲು ಹಾಗೂ ಅವರು ಯಾವುದೇ ದುರುಪಯೋಗಗಳಿಗೆ ಬಲಿಯಾಗುವುದನ್ನು ತಡೆಯಲು ಸಹಕಾರಿ ಎಂಬುದು ಅವರ ಆಶಯವಾಗಿರುತ್ತದೆ. ವೈಕಲ್ಯಗಳಿರುವ ಮಕ್ಕಳಿಗೆ ಬಹುತೇಕ ಸಮಯಗಳಲ್ಲಿ ಸಾದಾ ಉಡುಪನ್ನೇ ತೊಡಿಸಲಾಗುತ್ತದೆ. ಏಕೆಂದರೆ ತೊಡುವ ಬಟ್ಟೆಯಿಂದ ಅವರಿಗೆ ಯಾವ ವ್ಯತ್ಯಾಸವೂ ಆಗದು ಎಂಬುವುದು ಆರೈಕೆ ಮಾಡುವವರ ಭಾವನೆ.

ವೈಕಲ್ಯವೊಂದರ ಉಪಸ್ಥಿತಿಯೇ ಅವರ ಆರೋಗ್ಯಕರ ಲೈಂಗಿಕ ಅಸ್ಮಿತೆಯ ಬೆಳವಣಿಗೆಗೆ, ಭರವಸೆಗೆ, ವಿಶ್ವಾಸಕ್ಕೆ, ಆಸೆ ಆಕಾಂಕ್ಷೆ, ಕೆಲಸಕಾರ್ಯಗಳಿಗೆ ಮತ್ತು ಅವರು ಇಷ್ಟಪಟ್ಟರೆ ಭವಿಷ್ಯದಲ್ಲಿ ಸಂಗಾತಿಯನ್ನು ಹುಡುಕಿಕೊಳ್ಳುವ ಸಾಮರ್ಥ್ಯದ ಮೇಲೆ ಕೂಡ ಪರಿಣಾಮ ಬೀರುತ್ತದೆ ಎಂಬುದನ್ನು ನಾವು ನೆನಪಿನಲ್ಲಿಡಬೇಕು. ವೈಕಲ್ಯವನ್ನು ಹೊಂದಿರುವ ಮಕ್ಕಳಿಗೆ ಮತ್ತು ಹದಿಹರೆಯದವರಿಗೆ ಸಾಧ್ಯವಾದಷ್ಟೂ ತಮಗೆ ಮುಖ್ಯವಾದ ಸಂಗತಿಗಳ ಬಗ್ಗೆ ತಾವೇ ತೀರ್ಮಾನವನ್ನು ತೆಗೆದುಕೊಳ್ಳುವುದನ್ನು ಕಲಿಸಬೇಕು. ಪಾಲಕರು, ಆರೈಕೆ ಮಾಡುವವರು ಹಾಗೂ ವೃತ್ತಿಪರರು ವೈಕಲ್ಯವನ್ನು ಹೊಂದಿರುವ ಮಕ್ಕಳ ಹಕ್ಕುಗಳನ್ನು ಹತ್ತಿಕ್ಕುವ ಬದಲು, ಬಲಪಡಿಸುವ ನಿಟ್ಟಿನಲ್ಲಿ ಕೆಲಸ ಮಾಡಬೇಕು.

**ಲೈಂಗಿಕ ದುರುಪಯೋಗ**

ವೈಕಲ್ಯಗಳಿರದ ಮಕ್ಕಳಿಗಿಂತ ವೈಕಲ್ಯಗಳಿರುವ ಮಕ್ಕಳು ಲೈಂಗಿಕ ದುರುಪಯೋಗಕ್ಕೆ ಬಲಿಯಾಗುವ ಸಾಧ್ಯತೆ ಎರಡು ಪಟ್ಟು ಜಾಸ್ತಿ ಎಂದು ಹಲವಾರು ಸಂಶೋಧನೆಗಳು ವರದಿ ಮಾಡಿವೆ. ಈ ಕೆಳಗಿನ ಕಾರಣಗಳು ಅದನ್ನು ವಿವರಿಸುತ್ತವೆ.

ನಿಕಟ ಆರೈಕೆಗಾಗಿ ದಿನನಿತ್ಯ ಬೇರೆಯವರ ಮೇಲೆ ಅವಲಂಬಿಸಿರುವುದರಿಂದ ಅವರಿಗೆ ತಮ್ಮ ದೇಹದ ಮೇಲಿನ ಒಡೆತನದ ಹಿಡಿತವನ್ನು ಕಳೆದುಕೊಳ್ಳುವಂತೆ ಮಾಡುತ್ತದೆ. ಆರೈಕೆ

ಮಾಡುವವರು, ಅವರ ಅನುಮತಿಯನ್ನೂ ಪಡೆಯದೆ ಅಥವಾ ಅವರಿಗೆ ಯಾವ ಆಯ್ಕೆಯನ್ನೂ ನೀಡದೆ ಅವರನ್ನು ನಿತ್ಯವೂ ನಿಕಟವಾಗಿ ಸ್ಪರ್ಶಿಸುತ್ತಿರುತ್ತಾರೆ ಮತ್ತು ಹೆಚ್ಚಿನ ಬಾರಿ ಅವರ ಸಭ್ಯತೆ ಹಾಗೂ ಘನತೆಯ ಬಗ್ಗೆ ಯೋಚಿಸುವುದೂ ಇಲ್ಲ. ದುರ–ದೃಷ್ಟವಶಾತ್, ಇದರಿಂದಾಗಿ, ಮಕ್ಕಳಿಗೆ ತಮ್ಮನ್ನು ಯಾರಾದರೂ ದುರುಪಯೋಗ ಪಡಿಸಿಕೊಳ್ಳುತ್ತಿದ್ದಲ್ಲಿ, ಅದನ್ನು ಗುರುತಿಸುವುದೂ ಕಷ್ಟವಾಗುತ್ತದೆ.

ಹಲವಾರು ಸಂದರ್ಭಗಳಲ್ಲಿ ಹಲವಾರು ಆರೈಕೆದಾರರು ಅವರ ನಿಗಾವಹಿಸುವ ಸಾಧ್ಯತೆಗಳಿರುತ್ತವೆ. ಇದರರ್ಥ, ಅನೇಕರು ಅನೇಕ ರೀತಿಯಲ್ಲಿ ಬೇರೆ ಬೇರೆ ಕಾರಣಗಳಿಗಾಗಿ ಅವರನ್ನು ಸ್ಪರ್ಶಿಸುತ್ತಾರೆ.

ಕೆಲವೊಮ್ಮೆ ಅವರ ಅಸಮಂಜಸವಾದ ಸಾಮಾಜಿಕ ಕೌಶಲಗಳು ಹಾಗೂ ತೀರ್ಮಾನಿಸುವ ಶಕ್ತಿಯಲ್ಲಿನ  ಕೊರತೆಗಳು ಅವರನ್ನು ಶೋಷಣೆಗೊಳಗಾಗುವ ಸನ್ನಿವೇಶಕ್ಕೆ ದೂಡಬಹುದು. ಪಾಲಕರು ಮತ್ತು ಆರೈಕೆದಾರರು ಲೈಂಗಿಕ ದುರುಪಯೋಗದ ಭಯದಿಂದಾಗಿ ಅವರನ್ನು ಮೇಲ್ವಿಚಾರಣೆಯಿಲ್ಲದ ಯಾವುದೇ ಸಾಮಾಜಿಕ ಸಂಪರ್ಕಗಳಿಂದ ದೂರವಿಟ್ಟು ರಕ್ಷಿಸಲು ಪ್ರಯತ್ನಿಸಬಹುದು. ಆ ಮೂಲಕ ತಮಗರಿವಿಲ್ಲದಂತೆಯೇ ಸಾಮಾಜಿಕ ಕೌಶಲಗಳನ್ನು ಬೆಳೆಸಿಕೊಳ್ಳಲು ಹಾಗೂ ಸಮಂಜಸವಾದ ವೈಯಕ್ತಿಕ ಗಡಿ ರೇಖೆಗಳನ್ನು ರೂಪಿಸಿಕೊಳ್ಳಲು ಅವರಿಗೆ ಒದಗುವ ಬಹುಮುಖ್ಯ ಅವಕಾಶಗಳಿಂದ ಅವರನ್ನು ವಂಚಿತರನ್ನಾಗಿಸುತ್ತಾರೆ.

ಅವರಿಗೆ ತಮ್ಮ ವೈಕಲ್ಯಗಳ ಕಾರಣ ಸಹಾಯವನ್ನು ಪಡೆದುಕೊಳ್ಳಲು ಅಥವಾ ದೌರ್ಜನ್ಯವನ್ನು ವರದಿಮಾಡಲು ಆಗದಿರಬಹುದು. ಬಹಳಷ್ಟು ಸಂದರ್ಭಗಳಲ್ಲಿ ಮಕ್ಕಳು ದೌರ್ಜನ್ಯವನ್ನು ವರದಿ ಮಾಡುವುದಿಲ್ಲ ಅಥವಾ ದೂರು ಸಲ್ಲಿಸುವುದಿಲ್ಲ. ಏಕೆಂದರೆ, ಅವರಿಗೆ ಏನು ಹೇಳಬೇಕೆಂಬುದೇ ತಿಳಿದಿರುವುದಿಲ್ಲ.

ದೌರ್ಜನ್ಯ ಅಥವಾ ದುರುಪಯೋಗದಿಂದ ತಮ್ಮನ್ನು ತಾವು ರಕ್ಷಿಸಿಕೊಳ್ಳುವ ತಂತ್ರಗಳು ಅವರಿಗೆ ಗೊತ್ತಿರುವುದಿಲ್ಲ.

ವೈಕಲ್ಯಗಳನ್ನು ಹೊಂದಿರುವ ಮಕ್ಕಳಿಗೆ ತುಂಬಾ ಚಿಕ್ಕವಯಸ್ಸಿನಿಂದಲೇ ಹೇಳಿದ್ದನ್ನು ಕೇಳಲು ಮತ್ತು ಅನುಸರಿಸಿ–ಕೊಂಡು ಹೋಗಲು ಕಲಿಸಲಾಗಿರುತ್ತದೆ. ಹೇಳಿದ್ದನ್ನು ಮಾಡುವುದು ಅವರಿಗೆ ಅಭ್ಯಾಸವಾಗಿ ಹೋಗಿರುತ್ತದೆ. ಅವರಿಗೆ ಬೇಡ, 'ಇಲ್ಲ' ಎಂದು ಹೇಳಲು ಕಲಿಸಿರುವುದೇ ಇಲ್ಲ.

ಈ ಕಾರಣಗಳು ಆರೈಕೆದಾರರು ತಮ್ಮ ಮಕ್ಕಳ ಒಳಿತಿನ ದೃಷ್ಟಿಯಿಂದ ಕಲಿಯಬೇಕಾದ ಮತ್ತು ಮರೆಯಬೇಕಾದ ಕೆಲವು ಸಂಗತಿಗಳನ್ನು ಬೆಳಕಿಗೆ ತರುತ್ತವೆ. ಅವರು ಹೊಂದಿರುವ ವೈಕಲ್ಯಗಳ ಪ್ರಮಾಣವನ್ನು ಆಧರಿಸಿ, ಮಕ್ಕಳು ತಮ್ಮ ದೇಹವನ್ನು ದೃಢಪೂರ್ವಕವಾಗಿ ರಕ್ಷಿಸಿಕೊಳ್ಳಲು ಮತ್ತು ಅದಕ್ಕೆ ಅಡ್ಡಿಯುಂಟಾದ ಯಾವುದೇ ಸಂದರ್ಭದಲ್ಲಿ ಅದನ್ನು ಗುರುತಿಸಿ, ತಾವು ವಿಶ್ವಾಸವಿಟ್ಟಿರುವ ಹಿರಿಯರಿಗೆ ವರದಿ ಮಾಡಲು  ಕಲಿಯಬಹುದು. ಉದ್ದೇಶಪೂರ್ವಕವಾಗಿ ಕಲಿಸಿದಾಗಷ್ಟೇ ಅವರು ಕಲಿಯಬಲ್ಲರು. ವಿಶ್ವಸಂಸ್ಥೆಯ, 'ಮಗುವಿನ ಹಕ್ಕುಗಳ ಮೇಲಿನ ಸಮಾವೇಶ'ವು (Convention on the Rights of the Child) ಸುಲಭದಲ್ಲಿ ಲಭ್ಯವಿರುವ ಸೂಕ್ತವಾದ ಶಿಕ್ಷಣ, ಮಾರ್ಗದರ್ಶನ, ಬೆಂಬಲ ಹಾಗೂ ಆಟದ ಅವಕಾಶಗಳನ್ನು ಪಡೆದುಕೊಳ್ಳಲು ಎಲ್ಲಾ ಮಕ್ಕಳೂ ಬಾಧ್ಯಸ್ಥರಾಗಿದ್ದಾರೆ (ಹಕ್ಕನ್ನು ಹೊಂದಿದ್ದಾರೆ) ಎಂದು ಹೇಳಿದೆ. ಅವರು ತಮ್ಮ ಮಾತು ಕೇಳಲ್ಪಡುವ ಮತ್ತು ಇತರರ ಮಾತನ್ನು ಕೇಳಿಸಿಕೊಳ್ಳುವ, ಗೌರವಿಸಲ್ಪಡುವ ಹಾಗೂ ಶೋಷಣೆ, ದೌರ್ಜನ್ಯಗಳಿಂದ ರಕ್ಷಿಸಲ್ಪಡುವ ಹಕ್ಕನ್ನು ಹೊಂದಿದ್ದಾರೆ.

**ಲೈಂಗಿಕ ಆರೋಗ್ಯ ಶಿಕ್ಷಣ**

ವೈಕಲ್ಯಗಳನ್ನು ಹೊಂದಿರುವ ಮಕ್ಕಳ ಜೀವನದಲ್ಲಿ ಪ್ರಮುಖ ಭಾಗೀದಾರರೆಂದರೆ ಪಾಲಕರು ಮತ್ತು ಶಿಕ್ಷಕರು. ತಮ್ಮ ಮಕ್ಕಳಿಗೆ ಲೈಂಗಿಕತೆಯನ್ನು ಕುರಿತು ತಿಳಿಸಿಕೊಡುವ ವಿಷಯದಲ್ಲಿ ಪಾಲಕರು ಜವಾಬ್ದಾರಿಯುತ ಸ್ಥಾನದಲ್ಲಿದ್ದಾರೆ. ಆದರೆ ತಮ್ಮ ಮಕ್ಕಳು ಹೊಂದಿರುವ ವೈಕಲ್ಯಗಳಿಗೆ ಸಂಬಂಧಿಸಿದಂತೆ ಇನ್ನಿತರ ಅಂಶಗಳಲ್ಲಿ ಅವರು ಎಷ್ಟು ಮುಳುಗಿ ಹೋಗಿರುತ್ತಾರೆಂದರೆ, ಅವರಲ್ಲಿ ತಮ್ಮ ಮಗುವಿಗೆ ಈ ಕುರಿತು ಸಮರ್ಪಕ ರೀತಿಯಲ್ಲಿ ತಿಳಿಸಿ ಹೇಳಲು ಬೇಕಾದ ಜ್ಞಾನ, ಮಾಹಿತಿ ಅಥವಾ ಕೌಶಲಗಳ ಕೊರತೆ ಇರಬಹುದು. ಜೊತೆಗೆ, ತಮ್ಮ ಮಗುವಿನೊಡನೆ ಲೈಂಗಿಕತೆಯ ಬಗ್ಗೆ ಚರ್ಚಿಸಲು ಅವರಿಗೆ ಮುಜುಗರ ಉಂಟಾಗಬಹುದು. ಆಗ ಅವರು, ಬಹುತೇಕ ಸಂದರ್ಭದಲ್ಲಿ ಶಿಕ್ಷಕರ ನೆರವನ್ನು ನಿರೀಕ್ಷಿಸುತ್ತಾರೆ. ಆದ್ದರಿಂದ ಸಾಧಾರಣವಾಗಿ, ಶಿಕ್ಷಕರು ಮತ್ತು ಶಾಲೆಗಳು ಲೈಂಗಿಕ ಆರೋಗ್ಯ ಶಿಕ್ಷಣವನ್ನು ನೀಡುವುದಕ್ಕಾಗಿ ಸುಸಜ್ಜಿತರಾಗಿರಬೇಕಿದೆ. UNESCO (ಸಂಯುಕ್ತ ರಾಷ್ಟ್ರಗಳ ಶೈಕ್ಷಣಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಘ) ಆರೋಗ್ಯ ಮತ್ತು ಸ್ವಾಸ್ಥ್ಯಕ್ಕಾಗಿ ಶಿಕ್ಷಣ (Strategy on Education for Health and Wellbeing) ಎನ್ನುವ ವಿಷಯದ ಕುರಿತಾದ ಕಾರ್ಯನೀತಿಯಲ್ಲಿ, ಉತ್ತಮ ಗುಣಮಟ್ಟದ, ಶಾಲಾ ಆಧಾರಿತ, ಸಮಗ್ರ ಸ್ವರೂಪದ ಲೈಂಗಿಕತೆಯ ಶಿಕ್ಷಣವು ಅತ್ಯಗತ್ಯ ಎಂಬುದನ್ನು ವಿಶೇಷವಾಗಿ ಉಲ್ಲೇಖಿಸಲಾಗಿದೆ. ಇಂತಹ ಶಿಕ್ಷಣವು ಯುಕ್ತ ಜ್ಞಾನವನ್ನು ಹೆಚ್ಚಿಸುತ್ತದೆ, ಸಕಾರಾತ್ಮಕ ಧೋರಣೆ ಮತ್ತು ಮೌಲ್ಯಗಳನ್ನು ವರ್ಧಿಸುತ್ತದೆ ಹಾಗೂ ಮಾಹಿತಿಯುಕ್ತ ಆಯ್ಕೆಗಳನ್ನು ಮಾಡುವ ಕೌಶಲವನ್ನು ಬೆಳೆಸುತ್ತದೆ. ಸಮಗ್ರವಾದ ಲೈಂಗಿಕತೆಯ ಶಿಕ್ಷಣವನ್ನು, 'ವಯಸ್ಸಿಗನುಗುಣವಾಗಿ, ಸಾಂಸ್ಕೃತಿಕವಾಗಿ ಪ್ರಸ್ತುತವಾದ, ವೈಜ್ಞಾನಿಕವಾಗಿ ನಿಖರವಾದ, ವಾಸ್ತವಿಕವಾದ, ಸರಿತಪ್ಪುಗಳಿಗೆ ಹೊರತಾದ ಮಾಹಿತಿಗಳನ್ನು ಒದಗಿಸುವುದರ ಮೂಲಕ ಲೈಂಗಿಕ ವಿಷಯಗಳನ್ನು ಮತ್ತು ಸಂಬಂಧಗಳನ್ನು ಕುರಿತು ಕಲಿಸುವ ಒಂದು ವಿಧಾನ,' ಎಂದು ವ್ಯಾಖ್ಯಾನಿಸಲಾಗಿದೆ.

ಲೈಂಗಿಕ ಆರೋಗ್ಯ ಶಿಕ್ಷಣವನ್ನು ನೀಡುವುದಕ್ಕೆ ಶಿಕ್ಷಕರು ತಮ್ಮ ಆರಾಮದಾಯಕ ವಲಯಗಳಿಂದ ಹೊರಬರಲೇಬೇಕಾದ ಅಗತ್ಯವಿದೆ ಹಾಗೂ ಲೈಂಗಿಕತೆಯನ್ನು ಕುರಿತು ಮುಕ್ತ, ಸವಿವರ ಚರ್ಚೆಯನ್ನು ನಡೆಸುವುದಕ್ಕೆ ಇರುವ ಯಾವುದೇ ಅಡೆತಡೆ, ಮುಜುಗರವನ್ನು ಹೋಗಲಾಡಿಸಿಕೊಳ್ಳಲು ಸಿದ್ಧತೆಯನ್ನು ಮಾಡಿಕೊಳ್ಳಬೇಕಾಗಿದೆ. ಲೈಂಗಿಕ ಅಂಗಗಳ ಜೀವಶಾಸ್ತ್ರೀಯ ವಿವರ, ಗರ್ಭಧಾರಣೆ ಮತ್ತು ಶಿಶುಜನನ ಮುಂತಾದವುಗಳ ಪಠ್ಯರೂಪದ ಶಿಕ್ಷಣವನ್ನು ನೀಡುವುದು ಸುಲಭವಾಗಿರಬಹುದು. ಆದರೆ ದುರದೃಷ್ಟವಶಾತ್ ಬಹಳಷ್ಟು ಬಾರಿ ವೈಕಲ್ಯಗಳನ್ನು ಹೊಂದಿರುವ ಮಕ್ಕಳು ಇವುಗಳನ್ನು ಅರ್ಥ ಮಾಡಿಕೊಳ್ಳಲು ಅಸಮರ್ಥರಾಗಿರುತ್ತಾರೆ. ಅವರಿಗೆ ಲೈಂಗಿಕತೆಯ ಕುರಿತು ತಮ್ಮ ಸಮವಯಸ್ಕರಂತೆಯೇ ಶಿಕ್ಷಣದ ಅಗತ್ಯವಿದೆ. ಆದರೆ ಅವರು ತಮ್ಮ ಇತಿಮಿತಿಯಲ್ಲಿಯೂ ಅದರಿಂದ ಲಾಭ ಪಡೆದುಕೊಳ್ಳುವ ರೀತಿಯಲ್ಲಿ ಮಾಹಿತಿಯನ್ನು ನೀಡಲು ಅನುಕೂಲವಾಗುವಂತೆ ಶಿಕ್ಷಣದಲ್ಲಿ ಮಾರ್ಪಾಡುಗಳನ್ನು ಮಾಡಿಕೊಳ್ಳಬೇಕು. ವೈಕಲ್ಯಗಳನ್ನು ಹೊಂದಿರುವ ಮಕ್ಕಳಿಗೆ ಸೂಕ್ತವಾದ ಲೈಂಗಿಕ ಆರೋಗ್ಯ ಶಿಕ್ಷಣ

ಕಾರ್ಯಕ್ರಮವು ಶಾರೀರಿಕ ಅಂಗಗಳು, ಪ್ರೌಢಾವಸ್ಥೆಯ ಬದಲಾವಣೆಗಳು, ವೈಯಕ್ತಿಕ ಕಾಳಜಿ ಮತ್ತು ಸ್ವಚ್ಛತೆ, ವೈದ್ಯಕೀಯ ತಪಾಸಣೆಗಳು, ಸಾಮಾಜಿಕ ಕೌಶಲಗಳು, ಲೈಂಗಿಕ ಅಭಿವ್ಯಕ್ತಿ, ದೌರ್ಜನ್ಯ ತಡೆ ಕೌಶಲಗಳು, ಲೈಂಗಿಕ ವರ್ತನೆಯ ಹಕ್ಕು ಮತ್ತು ಹೊಣೆಗಾರಿಕೆಗಳಂತಹ ವಿಷಯಗಳನ್ನು ಒಳಗೊಂಡಿರಬೇಕು.

ಸಾಮಾನ್ಯ ತರಗತಿಯಲ್ಲಿ ನಡೆಯುವ ಬೋಧನೆಯನ್ನು ವೈಕಲ್ಯಗಳಿರುವ ಮಕ್ಕಳ ವ್ಯಕ್ತಿಗತ ಅಗತ್ಯಗಳಿಗೆ ಹೊಂದುವಂತೆ ಮಾರ್ಪಡಿಸಿಕೊಂಡ ರೀತಿಯಲ್ಲಿಯೇ ಸಾಮಾನ್ಯ ಲೈಂಗಿಕ ಆರೋಗ್ಯ ಶಿಕ್ಷಣವನ್ನೂ ವೈಕಲ್ಯಗಳಿರುವ ಮಕ್ಕಳಿಗೆ ಬೋಧಿಸಲು ಅನುಕೂಲವಾಗುವ ರೀತಿಯಲ್ಲಿ ಮಾರ್ಪಡಿಸಬೇಕು. ಮಾಹಿತಿಗಳನ್ನು ಸರಳೀಕರಿಸುವ ಮೂಲಕ, ಸಚಿತ್ರ ವಿವರಣೆ, ಸೂತ್ರದ ಬೊಂಬೆಗಳು, ಕತೆಗಳು, ಅಂಗಶಾಸ್ತ್ರೀಯವಾಗಿ ಸಮಂಜಸವಾದ ಗೊಂಬೆಗಳು ಮುಂತಾದ ವಿಶೇಷ ಬೋಧನಾ ಸಾಮಗ್ರಿಗಳನ್ನು ಬಳಸುವುದರ ಮೂಲಕ ಮತ್ತು ಕಲಿಸಿದ್ದನ್ನು ಆಗಾಗ ಪರಾಮರ್ಶಿಸುವುದರ ಮೂಲಕ ಮಾರ್ಪಾಟುಗಳನ್ನು ಮಾಡಬಹುದು. ವ್ಯಕ್ತಿನಿರ್ದಿಷ್ಟ ಶಿಕ್ಷಣ ಯೋಜನೆಗಳನ್ನು (Individualised Education Plans-IEPs) ತಯಾರಿಸುವಾಗ ಶಿಕ್ಷಕರು ಅದರಲ್ಲಿ ವೈಕಲ್ಯಗಳಿರುವ ಮಕ್ಕಳಿಗಾಗಿ ವಯಸ್ಸು ಮತ್ತು ಅಗತ್ಯಕ್ಕೆ ಸೂಕ್ತವಾದ ಲೈಂಗಿಕತೆಯ ಶಿಕ್ಷಣವನ್ನು ಸೇರಿಸಿಕೊಳ್ಳಬಹುದು. ಕಲಿಯುವವರಿಗೆ ಲೈಂಗಿಕ ಅರೋಗ್ಯ ಶಿಕ್ಷಣವು ಹೆಚ್ಚು ಅರ್ಥಪೂರ್ಣವಾಗಬೇಕಾದರೆ ಅದನ್ನು ಸಾಕಷ್ಟು ಮೊದಲೇ ಆರಂಭಿಸಬೇಕು ಎನ್ನುವುದೊಂದು ಸರಳ ಹಾಗೂ ಮುಖ್ಯವಾದ ಸಲಹೆ. ಮಕ್ಕಳಿಗೆ ದೇಹದ ಎಲ್ಲಾ ಭಾಗಗಳ ಹೆಸರನ್ನೂ ಅಂದರೆ, ನಾವು ಸಾಮಾನ್ಯವಾಗಿ ಬಿಟ್ಟುಬಿಡುವ ಶಿಶ್ನ, ಸ್ತನ ಮುಂತಾದವುಗಳನ್ನೂ ಕೂಡ ಕಲಿಸಬೇಕು. ಲೈಂಗಿಕತೆಯ ಕುರಿತು ಹೆಚ್ಚಿನದನ್ನು ತಿಳಿದುಕೊಳ್ಳಲು ದೇಹದ ಭಾಗಗಳ ಬಗ್ಗೆ ತಿಳಿದುಕೊಂಡಿರುವುದು ತುಂಬಾ ಮುಖ್ಯ.

ಜೊತೆಗೆ, ನಮ್ಮ ಸಮಾಜದಲ್ಲಿ, ಲೈಂಗಿಕ ಆರೋಗ್ಯ ಶಿಕ್ಷಣವನ್ನು ನೀಡುವ ವಿಧಾನವು ಪ್ರತಿಕ್ರಿಯಾತ್ಮಕ (Reactive) ರೀತಿಯಿಂದ ಸಕ್ರಿಯಾತ್ಮಕ (Proactive) ರೀತಿಗೆ ಬದಲಾಗಬೇಕು. ಹೆಚ್ಚಿನ ಪಾಲಕರು ಮತ್ತು ಶಿಕ್ಷಕರು ಮಕ್ಕಳ ವರ್ತನೆಯು ಸಮಸ್ಯಾತ್ಮಕವಾದ ಮೇಲಷ್ಟೇ ಅಥವಾ ಮಗು ಅಸಮಂಜಸವಾದದ್ದೇನನ್ನೋ ಮಾಡಿದ ಮೇಲಷ್ಟೇ ಅವರ ಲೈಂಗಿಕ ಆರೋಗ್ಯದ ಕುರಿತು ಆಲೋಚಿಸುತ್ತಾರೆ, ಕಾಳಜಿ ವಹಿಸಲು ಆರಂಭಿಸುತ್ತಾರೆ. ಪಾಲಕರು ಮತ್ತು ಶಿಕ್ಷಕರು ಹೆಚ್ಚಾಗಿ ಹೆಣ್ಣು–ಮಕ್ಕಳೊಂದಿಗೆ ಲೈಂಗಿಕ ಆರೋಗ್ಯ ಶಿಕ್ಷಣದ ಕುರಿತು ಮಾತನಾಡುತ್ತಾರೆ. ಏಕೆಂದರೆ, ಋತುಸ್ರಾವವು ಮಗುವಿನ ಬದುಕಿನಲ್ಲಿ ಹೆಚ್ಚು ಎದ್ದುಕಾಣುವ ವಿದ್ಯಮಾನ. ಇನ್ನೊಂದೆಡೆಗೆ, ಗಂಡುಮಕ್ಕಳಿಗೆ ಹೆಚ್ಚಿನ ಬಾರಿ ಲೈಂಗಿಕ ಆರೋಗ್ಯದ ಕುರಿತು ಏನನ್ನೂ ಕಲಿಸಿರುವುದೇ ಇಲ್ಲ. ಅವರು ಇದನ್ನು ತಾವೇ ವಿವಿಧ ಮೂಲಗಳಿಂದ ಹುಡುಕಿಕೊಳ್ಳಬೇಕು ಎಂದು ನಿರೀಕ್ಷಿಸಲಾಗುತ್ತದೆ. ಆದರೆ, ವೈಕಲ್ಯಗಳನ್ನು ಹೊಂದಿರುವ ಯುವ ಜನತೆಯ ವಿಷಯದಲ್ಲಿ ಅವರ ಆರೋಗ್ಯವನ್ನು ಉತ್ತಮಪಡಿಸಲು ಮತ್ತು ಅವರನ್ನು ಸಬಲೀಕರಿಸಲು ಲೈಂಗಿಕ ಆರೋಗ್ಯವನ್ನು ಉದ್ದೇಶ–ಪೂರ್ವಕವಾಗಿ ಸಕ್ರಿಯಾತ್ಮಕ ರೀತಿಯಲ್ಲಿ ಬೋಧಿಸ–ಬೇಕಾಗುತ್ತದೆ ಮತ್ತು ತಪ್ಪು ಸಂಭವಿಸಿದಾಗ ಮಾತ್ರ ಕೈಗೊಳ್ಳುವ ಒಂದು ತಿದ್ದುಪಡಿಯ ಕ್ರಮವಾಗಬಾರದು.

**ಉಪಸಂಹಾರ**

ಲೈಂಗಿಕತೆಯ ವಿಷಯಕ್ಕೆ ಬಂದಾಗ ವೈಕಲ್ಯಗಳನ್ನು ಹೊಂದಿರುವ ಮಕ್ಕಳು ವೈಕಲ್ಯಗಳನ್ನು ಹೊಂದಿರದ ಮಕ್ಕಳಿಗಿಂತ ಭಿನ್ನರೇನಲ್ಲ. ಅವರಿಗೆ ತಮ್ಮ ಬದುಕಿನ ಸಂಕೀರ್ಣ ಅಂಶವಾದ ಈ ಸಂಗತಿಯನ್ನು ನಿಭಾಯಿಸಲು ಹೆಚ್ಚುವರಿ ನೆರವು, ಬೆಂಬಲ ಮತ್ತು ಶಿಕ್ಷಣದ ಅಗತ್ಯವಿದೆ ಅಷ್ಟೇ. ವೈಕಲ್ಯವೊಂದರ ಉಪಸ್ಥಿತಿಯು ತಮ್ಮ ಲೈಂಗಿಕತೆಯನ್ನು ಅಭಿವ್ಯಕ್ತಿಸುವ, ಘನತೆಯಿಂದ ನಡೆಯಿಸಿ–ಕೊಳ್ಳುವ ಅಥವಾ ಸೂಕ್ತ ಆರೋಗ್ಯಕರ ಲೈಂಗಿಕ ಶಿಕ್ಷಣವನ್ನು ಪಡೆದುಕೊಳ್ಳುವ ವಿಷಯದಲ್ಲಿ ಮಕ್ಕಳು ಮತ್ತು ಕಿಶೋರ ವಯಸ್ಕರಿಗಿರುವ ಹಕ್ಕನ್ನು ತೊಡೆದುಹಾಕುವುದಿಲ್ಲ. ಪಾಲಕರು, ಆರೈಕೆದಾರರು ಮತ್ತು ಶಿಕ್ಷಕರು ವೈಕಲ್ಯಗಳಿರುವ ಮಕ್ಕಳ ಲೈಂಗಿಕ ಆರೋಗ್ಯಕ್ಕೆ ಸಂಬಂಧಿಸಿದ ಸಂಗತಿಗಳನ್ನು ಕುರಿತಂತೆ ತಮ್ಮ ತಿಳುವಳಿಕೆಯನ್ನು ಹೆಚ್ಚಿಸಿಕೊಳ್ಳುವ ಅಗತ್ಯವಿದೆ. ಅವರ ಸಮಗ್ರ ಸ್ವಾಸ್ಥ್ಯವನ್ನು ಹೆಚ್ಚಿಸುವುದಕ್ಕಾಗಿ ನಾವೆಲ್ಲರೂ ಒಟ್ಟಾಗಿ ಕೆಲಸ ಮಾಡಬೇಕಾದ ಅಅತ್ಯವಿದೆ. ಶಿಕ್ಷಕರು ಈ ಮಕ್ಕಳ ಬದುಕಿನಲ್ಲಿ ಬದಲಾವಣೆಗಳನ್ನು ತರಬಲ್ಲರು ಎನ್ನುವುದು ನನ್ನ ನಂಬಿಕೆ. ಈ ವಿಷಯವನ್ನು ಕುರಿತಂತೆ ಹೆಚ್ಚಿನ ತಿಳುವಳಿಕೆಯನ್ನು ಪಡೆದು–ಕೊಳ್ಳುವಂತೆ ಹಾಗೂ ತಾವು ಪಡೆದುಕೊಂಡ ಜ್ಞಾನವನ್ನು ಇತರರೊಡನೆ ಹಂಚಿಕೊಳ್ಳಲು ಸಮಯ, ಅವಕಾಶವನ್ನು ಕಂಡುಕೊಳ್ಳುವಂತೆ ವೃತ್ತಿಪರರು ಹಾಗೂ ಕುಟುಂಬದ ಸದಸ್ಯರನ್ನು ನಾನು ಪ್ರಬಲವಾಗಿ ಬೆಂಬಲಿಸುತ್ತೇನೆ.

***References***


Anna C. Treacy, Shanon S. Taylor, Tammy V. Abernathy. (2018) Sexual Health Education for Individuals with Disabilities: A Call to Action. American Journal of Sexuality Education 13:1, pages 65-93.

Lansdown, G. (2000). Implementing Children's Rights and Health. *Archives of disease in childhood*, 83(4), 286-288.

Moss, K., & Blaha, R. (2001). Introduction to Sexuality Education for Individuals Who Are Deaf-Blind and Significantly Developmentally Delayed.

Murphy, N., & Young, P. C. (2005). Sexuality in children and adolescents with disabilities. *Developmental medicine and child neurology*, 47(9), 640-644.

UNESCO (2016) UNESCO Strategy on Education for Health and Well-being: Contributing to the Sustainable Development Goals.





**ಡಾ. ಗಿಫ್ಟಿ ಜೋಯಲ್** ಅವರು ಬೆಂಗಳೂರು ವಿಶ್ವವಿದ್ಯಾಲಯದಿಂದ, ಮಾನವ ಅಭಿವೃದ್ಧಿ ಕ್ಷೇತ್ರದಲ್ಲಿ ಪಿ.ಹೆಚ್‌ಡಿ ಪದವಿ ಪಡೆದಿರುತ್ತಾರೆ. ಅವರು 'ಗೈಡ್ ಬುಕ್ ಆನ್ ಸೆಕ್ಷುವಲ್ ಹೆಲ್ತ್ ಎಜುಕೇಶನ್ ಫಾರ್ ಪೇರೆಂಟ್ಸ್ ಎಂಡ್ ಟೀಚರ್ಸ್ ಆಫ್ ಚಿಲ್ಡ್ರನ್ ವಿಥ್ ಆಟಿಸಂ' ಎಂಬ ಪುಸ್ತಕದ ಸಹಲೇಖಕರಾಗಿದ್ದು, ಇದನ್ನು amazon.in ಮೂಲಕ ಖರೀದಿಸಬಹುದು. ಅವರು ಹಲವಾರು ವಿಶೇಷ ಶಾಲೆಗಳಲ್ಲಿ ಲೈಂಗಿಕ ಆರೋಗ್ಯ ಶಿಕ್ಷಣದ ಕುರಿತಾಗಿ ಕಾರ್ಯಾಗಾರಗಳನ್ನು ನಡೆಸಿಕೊಟ್ಟಿದ್ದಾರೆ. ಅವರನ್ನು giftyjewel@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ಸಹನಾ ಹೆಗಡೆ** । ಪರಿಶೀಲನೆ: **ನಾಗಮಣಿ ಎಸ್ ಎನ್**

# ಸಂಪೂರ್ಣ ಸ್ವೀಕಾರ

ಕಮಲಾ ಮುಕುಂದ

ನಮ್ಮನ್ನೇ ಕುರಿತ ಒಂದು ಸತ್ಯಸಂಗತಿಯನ್ನು ಪ್ರಸ್ತಾಪಿಸುತ್ತಾ ನಾನು ಈ ಲೇಖನವನ್ನು ಆರಂಭಿಸುತ್ತೇನೆ: ಬೇರೆಯವರು ನಮ್ಮನ್ನು ಸ್ವೀಕರಿಸುತ್ತಾರೋ ಇಲ್ಲವೋ ಎಂದು ನಾವು ಸದಾ ಚಿಂತಿಸುತ್ತಿರುತ್ತೇವೆ. ಸ್ವೀಕೃತವಾಗುವ (Acceptable) ಎಂಬ ಪದವೇ ವಾಸ್ತವಿಕವಾಗಿ ಸ್ವಲ್ಪ ದುರ್ಬಲವಾದದ್ದು. ನಮ್ಮನ್ನು ಪ್ರೀತಿಸಬೇಕು, ಆದರದಿಂದ ಕಾಣಬೇಕು, ಮೆಚ್ಚಬೇಕು ಎಂದು ನಾವು ಬಯಸುತ್ತೇವೆ… ನಮ್ಮ ಜೊತೆಗಾರರು ನಮ್ಮ ತಪ್ಪನ್ನು ಸೇರಿಸಿ ನಮ್ಮನ್ನು ಒಪ್ಪಿಕೊಳ್ಳುತ್ತಿಲ್ಲವೆಂಬ ಅನುಮಾನ ಬಂದಾಗ ಅಥವಾ ಅರಿವಾದಾಗ ಎಲ್ಲರೂ ಮೆಚ್ಚಬೇಕೆಂಬ ನಮ್ಮಲ್ಲಿ ಸದಾ ಮೊರೆಯುವ ಈ ಬಯಕೆ ತೀವ್ರವಾಗಿ ಬಾಧಿಸುತ್ತದೆ. ಇದೇ ರೀತಿಯಲ್ಲಿ ಮಕ್ಕಳ ಒಳಗಿನ ಚೈತನ್ಯವೂ ಕೂಡಾ ಚಿಕ್ಕ ವಯಸ್ಸಿನಲ್ಲೇ ಬೇಷರತ್ತಾಗಿ ಸ್ವೀಕರಿಸಬೇಕೆಂಬ ಅಗತ್ಯತೆಯನ್ನು ಹೊಂದಿರುತ್ತದೆ.

ಅವರು ಇದನ್ನೆಲ್ಲ ತಮ್ಮ ಸಮಾನ ವಯಸ್ಕರಿಂದ ಬಯಸುತ್ತಾರೆ ಮತ್ತು ಈ ಸಮಾನ ವಯಸ್ಕರೆಲ್ಲ ಇಷ್ಟು ಹೊತ್ತಿಗಾಗಲೇ ನಾವು ಮತ್ತು ಅವರು ಎಂಬ ಗುಂಪನ್ನು ಕಟ್ಟಿಕೊಂಡು ಎಲ್ಲರನ್ನೂ ಒಳಗೊಳ್ಳುವ ಮತ್ತು ಹೊರಗಿಡುವ ಪ್ರವೃತ್ತಿಯನ್ನು ಬೆಳೆಸಿ-ಕೊಂಡಿರುತ್ತಾರೆ. ಇವರ ಮಧ್ಯೆ, ರೇಖೆಗಳು ಮತ್ತು ವಿಭಜನೆಗಳು ಆ ಕಡೆಯಿಂದ ಈ ಕಡೆಗೆ ಓಲಾಡುತ್ತಲೇ ಇರುವುದರಿಂದ ಮಕ್ಕಳಿಗೆ ಆಗೀಗ ಹೊರಗುಳಿದಂತೆ ಅನುಭವವಾಗುತ್ತದೆ. ಒಂದು ರೀತಿಯಲ್ಲಿ ಇದು ಒಳ್ಳೆಯದೇ ಆದರೂ, ಇದು ಅವರಲ್ಲಿ ನಿರಂತರವಾಗಿ ಅಭದ್ರತೆಯ ಭಾವನೆ ಮೂಡಿಸುತ್ತದೆ. ಆದಾಗ್ಯೂ, ವಿಭಿನ್ನ ಎಂದು ತರಗತಿಯಿಂದ ಹೊರಗುಳಿಯುವ ಮಗು ಕೊನೆಯದಾಗಿ ದೀರ್ಘಾವಧಿಯ ಬಹಿಷ್ಕಾರಕ್ಕೆ ಗುರಿಯಾಗುವ ಅಪವಾದವೂ ಇದೆ.

**ತರಗತಿಯಲ್ಲಿ ಯಾರು ಭಿನ್ನರಾಗಿರುತ್ತಾರೆ?**

ಕೆಲವು ಗುರುತಿಸಲಾಗದ ಸಂಸ್ಕೃತಿ, ಕೆಲವು ಮಾತಿಗೆ ನಿಲುಕದ ನಿಯಮಗಳಿಗೆ ಅಂದರೆ ಕೆಲವು ನಿರ್ದಿಷ್ಟ ಮಾನದಂಡಗಳಿಗೆ ಒಳಪಡದ ಯಾವುದೇ ಮಗು ಅವನು ಅಥವಾ ಅವಳು ವಿಭಿನ್ನ ಎನಿಸಿಕೊಳ್ಳಬಹುದು. ಆ ಮಗುವಿನ ಓದುವ ಕೌಶಲ ಅಥವಾ ಗಣಿತದ ಕೌಶಲಗಳು ತರಗತಿಯಲ್ಲಿ ಇತರರಿಗಿಂತ ಅತ್ಯಂತ ಕೆಳಮಟ್ಟದಲ್ಲಿ ಇರಬಹುದು ಅಥವಾ ಆ ಮಗುವು ತರಗತಿಯ ಒಳಗೆ ಮತ್ತು ಹೊರಗೆ ಗಮನ ಮತ್ತು ನಡವಳಿಕೆಯನ್ನು ನಿಭಾಯಿಸುವಲ್ಲಿ ಕಷ್ಟಪಡುತ್ತಿರಬಹುದು. ಆ ಮಗುವಿಗೆ ಯಾವುದೇ ರೀತಿಯ ದೈಹಿಕ ತೊಂದರೆಗಳಿರಬಹುದು ಅಥವಾ ಆ ಮಗುವು ಸ್ವಪ್ರಚೋದನೆ (Stimming) ಯಲ್ಲಿ (ಆಟಿಸಂ ಪ್ರವೃತ್ತಿ ಹೊಂದಿರುವ ಮಕ್ಕಳ ಒಂದು ಪುನರಾವರ್ತಿತ ನಡವಳಿಕೆ, ಕೆಲವೊಮ್ಮೆ ಅದು ಒಂದು ನಿಭಾಯಿಸುವ ಯಾಂತ್ರಿಕತೆಯಂತೆ ಪ್ರದರ್ಶಿತವಾಗುತ್ತದೆ) ತೊಡಗಿ-ಕೊಂಡಿರಬಹುದು. ಕಾರಣ ಏನೇ ಆಗಿರಬಹುದು, ಇಂತಹ ಸ್ಥಿತಿಗಳಲ್ಲಿ ಇರುವ ಮಕ್ಕಳು ಹೆಚ್ಚು ಕಷ್ಟವನ್ನು ಅನುಭವಿಸುತ್ತಾರೆ. ಅವರಿಗೆ ಒಂದು ಮೂಲ ತೊಂದರೆಯಿದೆ ಮತ್ತು ಇತರ ಮಕ್ಕಳಿಗೆ ಅದ್ಯಾವುದೂ ಇಲ್ಲ ಎನ್ನುವ ಅರಿವೂ ಅವರಿಗಿದೆ. ಆದರೆ ತಮ್ಮ ಸಮಾನ ವಯಸ್ಕ ಮಕ್ಕಳಿಂದ ಸ್ವೀಕಾರ ಮನೋಭಾವ ಮತ್ತು ಪ್ರೀತಿ ಪಡೆಯುವ ಬದಲು ತಿರಸ್ಕಾರ, ಮೂದಲಿಕೆ ಮತ್ತು ಒಂಟಿತನದ ಶಿಕ್ಷೆಗೆ ಅವರು ಒಳಗಾಗುತ್ತಾರೆ. ಇವೆಲ್ಲ ಅನುಚಿತ ಎಂಬುದು ಮುಖ್ಯ ಸಂಗತಿಯಲ್ಲ. ಆದರೆ, ಹೆಸರು ಕರೆದು ಗೇಲಿ ಮಾಡುವುದು ಅಥವಾ ಅವರ ಬಗ್ಗೆ ಗುಟ್ಟಾಗಿ ಮಾತನಾಡಿಕೊಳ್ಳುವುದು ಮಾತ್ರ ಅವರನ್ನು ಘಾಸಿಗೊಳಿಸುತ್ತದೆ.

ಇಂತಹ ಪ್ರತಿಕ್ರಿಯೆಗಳ ಬಗ್ಗೆ ಚರ್ಚಿಸಲು ಈ ಮಕ್ಕಳು ತುಂಬಾ ಚಿಕ್ಕವರು ಎನ್ನುವುದಾದರೆ, ಮಕ್ಕಳು ಎಂಥ ತೊಂದರೆಗಳಿದ್ದರೂ ಲೆಕ್ಕಿಸದೆ, ಎಲ್ಲರನ್ನೂ ಸಂಪೂರ್ಣವಾಗಿ ಒಪ್ಪಿಕೊಳ್ಳುವಂತೆ ಮಾಡಲು ಯಾವ ರೀತಿಯ ಶಾಲಾ ಸಂಸ್ಕೃತಿ ಇರಬೇಕೆಂದು ನನಗೂ ಮತ್ತು ನನ್ನ ಸಹೋದ್ಯೋಗಿಗಳಿಗೂ ಆಸಕ್ತಿಯ ವಿಚಾರವಾಗಿದೆ. ಹೀಗೆ ಭಿನ್ನವಾಗಿರುವ ಮಕ್ಕಳನ್ನು ಒಪ್ಪಿಕೊಳ್ಳುವಂತೆ ಇತರ ಸಾಮಾನ್ಯ ವಿದ್ಯಾರ್ಥಿಗಳಿಗೆ ಉತ್ತೇಜನ ನೀಡುವಂತಹ ಮಾದರಿಯಿಂದ ಆಚೆಗೆ ಯೋಚಿಸುವ ಬಗ್ಗೆ ನಾವು ಆಸಕ್ತರಾಗಿದ್ದೆವು. ಪೂರ್ಣವಾಗಿ ಒಪ್ಪಿಕೊಳ್ಳುವ ಪ್ರಕ್ರಿಯೆಯು ಒಂದು ವಿಭಿನ್ನವಾದ ವಿಷಯವಾಗಿರಬಹುದು ಮತ್ತು ಅಂತಹ ಸಂಸ್ಕೃತಿಯು ಮನುಷ್ಯರ ಅನುಭವಗಳಲ್ಲಿರುವ ಸಾಮ್ಯತೆಯನ್ನು ಎತ್ತಿ ಹಿಡಿಯುತ್ತದೆ. ಅಲ್ಲದೆ ಗೌರವವನ್ನು ಗಳಿಸುವುದು ಅಥವಾ ಅರ್ಹವಾಗಿರುವುದಷ್ಟೇ ಅಲ್ಲ ಎಂಬುದನ್ನು ಸಮರ್ಥಿಸುತ್ತದೆ. ಜೊತೆಗೆ ನಮ್ಮ ಹವ್ಯಾಸ, ನೆನಪುಗಳು ಮತ್ತು ಧೋರಣೆಗಳೇ ನಮ್ಮ ವ್ಯಕ್ತಿತ್ವ ಎಂಬುದನ್ನು ಮೀರಿ ಯೋಚಿಸುವುದಕ್ಕೆ ಸಂಬಂಧಿಸಿ ಆಳವಾಗಿ ಬೇರೂರಿರುವ ಭಾವನೆಯನ್ನು ಪ್ರಶ್ನಿಸುವ ಮನೋಭಾವವನ್ನು ಕೂಡ ಎತ್ತಿ ಹಿಡಿಯಬಲ್ಲದು.

**ಏಕರೂಪತೆ**

ಮನೋವೈಜ್ಞಾನಿಕ ಸಂಶೋಧನೆಯ ಪ್ರಕಾರ, ಸಣ್ಣ ಮಗುವೂ ಕೂಡ ಒಂದಲ್ಲ ಒಂದು ರೀತಿಯಲ್ಲಿ ತನ್ನನ್ನು ಇಷ್ಟಪಡುವವರನ್ನೇ ಆಯ್ಕೆ ಮಾಡಿಕೊಳ್ಳುವ ಪ್ರವೃತ್ತಿಯನ್ನು ಹೊಂದಿರುತ್ತದೆ. ತನ್ನ ನೆಚ್ಚಿನ ತಿಂಡಿಯನ್ನು ಇಷ್ಟಪಡುವ ಅಥವಾ ಇಷ್ಟಪಡದಿರುವ ಒಂದು ಮಗು ಎರಡು ಗೊಂಬೆಗಳನ್ನು ಹೊಂದಿರುವುದನ್ನು ಸಂಶೋಧಕರು ತೋರಿಸುತ್ತಾರೆ. ತನ್ನನ್ನು ಯಾವ ಗೊಂಬೆ ಇಷ್ಟಪಡುತ್ತದೆ ಅದರೊಂದಿಗೇ ಆಟವಾಡಲು ಬಯಸುವ ಮಗು ಇನ್ನೊಂದು ಗೊಂಬೆಯನ್ನು ಒಂದಲ್ಲ ಒಂದು ರೀತಿಯಲ್ಲಿ ದಂಡಿಸಲು ಬಯಸುತ್ತದೆ!*

ತೀರಾ ತೆಳುವಾದ ವಿಚಾರಗಳ ಆಧಾರದ ಮೇಲೆ 'ನಾವು ಮತ್ತು ಅವರು' ಎಂಬ ವಿಭಾಗಗಳನ್ನು ಮಾಡುವ ತೀವ್ರವಾದ ಪ್ರಚೋದನೆ ನಮ್ಮಲ್ಲಿ ಹುಟ್ಟಿನಿಂದಲೇ ಬಂದಿದೆ ಎಂಬುದನ್ನು ಹಲವು ಶಿಶುಗಳ ಕುರಿತು ನಡೆದ ಇಂತಹ ಅಧ್ಯಯನಗಳು ಸಾಬೀತುಪಡಿಸಿವೆ. ಭಿನ್ನತೆಗಳಿಗೆ (Differences) ಬದಲಾಗಿ ಸಮಾನರೂಪತೆಗೆ (Similarities) ಒತ್ತು ನೀಡಿದಾಗ ಮಕ್ಕಳು ಒಬ್ಬರಿಗೊಬ್ಬರು ಅನುಕಂಪ, ಅಕ್ಕರೆ ಮತ್ತು ಒಡನಾಟದಿಂದ ಇರಲು ಸುಲಭವಾಗುತ್ತದೆ ಎಂಬುವುದು ಈ ಸಂಶೋಧನೆಯಿಂದ ಸಿಕ್ಕಿರುವ

ಒಂದು ಸುಳಿವು. ನಮ್ಮ ಸಮಾನರೂಪತೆಗಳು ಹೆಚ್ಚಾಗಿ ಸ್ಫುಟಗೊಳ್ಳುವುದಾದರೂ ಎಲ್ಲಿ? ಹೆಚ್ಚಿನ ಶಾಲಾಶಿಕ್ಷಣವನ್ನು ಎಲ್ಲಿ ಎಚ್ಚರಿಕೆಯಿಂದ ಸ್ಪಷ್ಟವಾಗಿ ವಿನ್ಯಾಸಗೊಳಿಸಲಾಗಿದೆಯೋ ಅಲ್ಲಿ! ಸಾಮಾಜಿಕ ಸಂವಹನ ಮತ್ತು ಭಾವನಾತ್ಮಕ ಅಭಿವ್ಯಕ್ತಿ ಯಾವುದೇ ಶಾಲಾ ಪರಿಸರದಲ್ಲಿ ಢಾಳಾಗಿ ಕಾಣಬಹುದು. ಆದರೆ, ದೊಡ್ಡವರು ಇವುಗಳನ್ನು ಶಿಕ್ಷಣದ ಮೇಲೆ ಕೇಂದ್ರೀಕರಿಸುವುದು ಅಪರೂಪ. ಅದೇ ಸಾಮಾಜಿಕ ಸಂವಹನ ಮತ್ತು ಭಾವನಾತ್ಮಕ ಅಭಿವ್ಯಕ್ತಿಯು ಶಿಕ್ಷಣದ ಹೃದಯವಾದರೆ ಏನಾಗುತ್ತದೆ? ಎಲ್ಲರಿಗೂ ಅವರವರದ್ದೇ ಆದ ಮನೋವೃತ್ತಿಗಳು ಇರುತ್ತವೆ, ಅವರದ್ದೇ ಆದ ಸಂಕೀರ್ಣ ಸಂಬಂಧಗಳಿರುತ್ತವೆ; ಅವರದ್ದೇ ಆದ ಸವಾಲು ಮತ್ತು ಮಿತಿಗಳಿರುತ್ತವೆ, ಅವರದ್ದೇ ಆದ ಆಟದ ಮೇಲಿನ ಪ್ರೀತಿ ಮತ್ತು ಸಣ್ಣ ಪುಟ್ಟ ತಮಾಷೆ ಹೀಗೆ ಎಲ್ಲವೂ ಇರುತ್ತವೆ ಎನ್ನುವುದು ಮಕ್ಕಳ ವಿಚಾರದಲ್ಲಿ ಬೇಗನೆ ಸ್ಪಷ್ಟವಾಗುತ್ತದೆ. ಕೇವಲ ಕಲಿಕೆಯಲ್ಲಿ ತೊಂದರೆಯಿರುವ ಮಗುವಿಗೆ ಮಾತ್ರವಲ್ಲ, ಪ್ರತಿಯೊಬ್ಬರಿಗೂ ಒಂದಲ್ಲ ಒಂದು ಕಾಲಕ್ಕೆ ಸಹಾನುಭೂತಿ ಮತ್ತು ನೆರವಿನ ಹಸ್ತ ಬೇಕೇಬೇಕಾಗುತ್ತದೆ. ವಾಸ್ತವವಾಗಿ ನಮ್ಮ ಭಾವನೆಗಳು ನಮ್ಮೆಲ್ಲರನ್ನೂ ಒಂದುಗೂಡಿಸುತ್ತವೆ; ಅದಕ್ಕೆ ಮಕ್ಕಳು ಮತ್ತು ದೊಡ್ಡವರು ಎಂಬ ಭೇದವಿರುವುದಿಲ್ಲ. ಯಾಕೆಂದರೆ ಎಲ್ಲರ ಬದುಕಿನಲ್ಲೂ ಏರಿಳಿತಗಳು ಇದ್ದೇ ಇರುತ್ತವೆ; ಎಲ್ಲರಿಗೂ ಅವರದ್ದೇ ಆದ ಕಷ್ಟಗಳಿರುತ್ತವೆ. ಒಂದು ಶಾಲೆ ಶೈಕ್ಷಣಿಕ ವಿಷಯಗಳಿಗಿಂತ ಹೆಚ್ಚು ಮಹತ್ವದ್ದು ಎಂಬುದು ಗೊತ್ತಾದಾಗ, ವಿಶೇಷ ಆದ್ಯತೆಯ ಅಗತ್ಯವಿರುವ ಯಾವ ಮಗುವನ್ನೂ ನಿರ್ದಿಷ್ಟವಾಗಿ ಪ್ರತ್ಯೇಕಗೊಳಿಸುವ ಕಾರಣವೇ ಇರುವುದಿಲ್ಲ. ಒಂದು ಮಗು ಆಟಗಳ ವಿಚಾರದಲ್ಲಿ ಶಿಕ್ಷಕರ ಗಮನ ಬೇಕು ಎಂದು ಒತ್ತಾಯಿಸುತ್ತದೆ, ಇನ್ನೊಂದು ಮಗು ಕುಂಬಾರಿಕೆ (ಮಣ್ಣಿನ ಪಾತ್ರೆ) ಮಾಡುವುದಕ್ಕೆ ಸಂಬಂಧಿಸಿದ ತರಗತಿಯಲ್ಲಿ ಹೆಚ್ಚಿನ ಸಹಾಯವನ್ನು ಬಯಸುತ್ತದೆ ಮತ್ತು ಮತ್ತೊಂದು ಮಗುವಿಗೆ ಊಟ ಮಾಡುವುದರಲ್ಲಿಯೇ ಕಷ್ಟವಾಗಿ ಸಹಾಯಕ್ಕಾಗಿ ಯಾಚಿಸುತ್ತಿರುತ್ತದೆ!. ಇದೇ ರೀತಿಯಲ್ಲಿ "ನಮಗೆಲ್ಲರಿಗೂ ನಮ್ಮದೇ ಆದ ಶಕ್ತಿ ಮತ್ತು ದೌರ್ಬಲ್ಯವಿದೆ" ಎಂಬ ಕ್ಲೀಷೆಯ ಮಾತನ್ನು ಎಳೆದಾಡಲು ಹೋಗದೇ ಏಕರೂಪತೆ ಎಂಬುದು ಸ್ಪಷ್ಟವಾಗಬೇಕು.

**ಗೌರವ ಮತ್ತು ಪ್ರೀತಿ**

ನೂರು ವರ್ಷಗಳ ಹಿಂದೆ ಲೇಖಕ ಮ್ಯಾಕ್ಸ್ ಎರ್‌ಮನ್ ಎಂಬವರು Desiderata ಎಂಬ ಒಂದು ಸುಂದರ ಗದ್ಯ ಪದ್ಯವನ್ನು ಬರೆದಿದ್ದು, ಅದರ ಒಂದು ಸಾಲು ಸದಾ ನನ್ನೊಂದಿಗೆ ಸ್ಥಿರವಾಗಿದೆ; **ನೀನು ಈ ಸೃಷ್ಟಿಯ ಒಂದು ಮಗು, ಮರಗಳು ಮತ್ತು ನಕ್ಷತ್ರಗಳಿಗಿಂತ ಕಮ್ಮಿಯೇನಿಲ್ಲ; ಇಲ್ಲಿರಲು ನಿನಗೆ ಹಕ್ಕಿದೆ**. ತೀರಾ ಸರಳವಾದ ಈ ಸಾಲುಗಳು ಶಿಕ್ಷಕಿಯಾಗಿರುವ ನನಗೆ ಬಹಳ ದೊಡ್ಡ ರೀತಿಯಲ್ಲಿ ಸಹಾಯ ಮಾಡಿದೆ. ಭಾರತೀಯ ಸಮಾಜವು ಎಷ್ಟು ಅಸಾಧ್ಯವಾದ ರೀತಿಯಲ್ಲಿ ಶ್ರೇಷ್ಠತೆಯ ಗೀಳಿಗೆ ಒಳಗಾಗಿದೆ. ನಾವು ಗೌರವ ಮತ್ತು ಮೆಚ್ಚುಗೆಯನ್ನುಗಳಿಸಬೇಕು ಅಥವಾ ಒಂದು ಸಮರ್ಥನೀಯವಾದ ರೂಪದಲ್ಲಿ ಮೆಚ್ಚುಗೆಗೆ, ಗೌರವಕ್ಕೆ ಅರ್ಹತೆಯನ್ನು ಪಡೆಯಬೇಕು. ಆದರೆ ನಾವು ಅಂತಹ ನೆವದಲ್ಲಿ ಮಾರಾಟವಾಗಿದ್ದೇವೆ.

ವ್ಯತಿರಿಕ್ತವಾಗಿ, ದೊಡ್ಡವರು ಎಲ್ಲ ಮಕ್ಕಳಿಗೆ ಅವರೆಲ್ಲರ ಭಿನ್ನತೆಗಳನ್ನು ಬದಿಗಿಟ್ಟು, ಸಹಜವಾಗಿಯೇ ಪ್ರೀತಿ ಮತ್ತು ಗೌರವವನ್ನು ನೀಡುವ, ಒಂದು ಮಾದರಿ ಶಾಲಾ ಸಂಸ್ಕೃತಿಯ ಚಿತ್ರಣವನ್ನು ನಾನು ಮುಂದಿಡುತ್ತೇನೆ. ನಾನಿಲ್ಲಿ ಕೇವಲ ಹೊಗಳಿಕೆಗಾಗಿ ಅಥವಾ ಮೆಚ್ಚಿಸಲು ಹೇಳುತ್ತಿಲ್ಲ. ಕೇಳಿಸಿಕೊಳ್ಳುವ ರೂಪದಲ್ಲಿ, ಸಮರ್ಪಕವಾದ ಗಂಭೀರತೆಯೊಂದಿಗೆ ಮಗು ಹೇಳಿದ್ದನ್ನು ಸ್ವೀಕರಿಸುವುದರಲ್ಲಿ, ಮಗುವನ್ನು ನಿರ್ಲಕ್ಷಿಸದಿರುವುದು ಇತ್ಯಾದಿಗಳ ರೂಪದಲ್ಲಿ ಗೌರವ (Respect) ಇದೆ. ಹಾಗಂತ ಇದರಿಂದ ಮಕ್ಕಳು ಬಲವಾದ ಬೇಡಿಕೆಗಳನ್ನು ಮುಂದಿಡುವುದನ್ನು ಮತ್ತು ತಮ್ಮ ನಡವಳಿಕೆಯನ್ನು ಸವಾಲಿಗೊಡ್ಡುವುದನ್ನು ದೊಡ್ಡವರು ತಪ್ಪಿಸಬೇಕಾಗಿಲ್ಲ. ಇಂತಹ ಶಾಲೆಯಲ್ಲಿ ಮಕ್ಕಳು ಯಾವುದೇ ಉದ್ದೇಶ ಪೂರ್ವಕವಾದ ನಿರ್ದೇಶನವಿಲ್ಲದೆ ತಮಗೆ ಬೇಕಾದ ಸಂಸ್ಕೃತಿಯನ್ನು ಅಳವಡಿಸಿಕೊಳ್ಳಬಲ್ಲರೇ? ಇದು ವಿಶಾಲ ಮನಸ್ಸಿನ ಎಲ್ಲರನ್ನೂ ಒಪ್ಪಿಕೊಳ್ಳುವಂತಹ ವಾತಾವರಣವನ್ನು ಸೃಷ್ಟಿಸಲು ಸಹಾಯ ಮಾಡುತ್ತದೆ.

ಇದು ನಿಜಕ್ಕೂ ಎಷ್ಟೊಂದು ಸರಳ ಸುಂದರವಾಗಿದೆ! ನನ್ನ ಅನುಭವದಿಂದ ಹೇಳುವ ಮಾತು ಏನೆಂದರೆ, ಶಾಲೆಯಲ್ಲಿ ವಯಸ್ಕರ ನಡುವೆ ಇಂತಹುದೊಂದು ಸಂಸ್ಕೃತಿಯನ್ನು ಹುಟ್ಟು ಹಾಕಲು ಸಾಧ್ಯವಿರುವುದು ನಿಜವಾದರೂ ಮಕ್ಕಳು ಇದನ್ನು ದೃಢ–ನಿಶ್ಚಯದಿಂದ ಮಾಡುವುದಿಲ್ಲ ಎಂದೇನೂ ಅಲ್ಲ. ಕೆಲವೊಮ್ಮೆ ಬಲಶಾಲಿಯಾದ ಜತೆಗಾರರನ್ನು ಕೆಳಕ್ಕೆಳೆದು ನಾನೇ ಮೇಲು ಎಂಬ ಭಾವನೆಗೆ ಸಂಬಂಧಿಸಿದ ಪ್ರಲೋಭನೆಯು ಮತ್ತೆ ಮತ್ತೆ ಪುನರಾವರ್ತನೆಯಾಗುವಂತೆ ಮಾಡುತ್ತದೆ; ಅವೇ ಗುರಿಗಳು ಮತ್ತು ಅದೇ ಅಪರಾಧಿಗಳು. ಹಾಗಾದರೆ ಪ್ರತಿಯೊಬ್ಬರೂ 'ಈ ಸೃಷ್ಟಿಯಮಗು', ಪ್ರತಿಯೊಬ್ಬರೂ ನನ್ನನ್ನು ಒಪ್ಪಿಕೊಳ್ಳಬೇಕು ಎಂಬುದಕ್ಕೆ ಯಾವುದೇ ಸಮರ್ಥನೆ ಅಥವಾ ಕಾರಣದ ಅಗತ್ಯವಿರುವುದಿಲ್ಲ ಎಂಬ ವಯಸ್ಕರ ಬಲವಾದ ಮತ್ತು ನಿರಂತರ ಸಂದೇಶದ ಮೌಲ್ಯವಾದರೂ ಏನು? ಇಂತಹ ಒಂದು ಪರಿಸರದಲ್ಲಿ, ಕಲಿಕೆಯಲ್ಲಿ ಸಮಸ್ಯೆ ಇರುವ ಮಗುವಿಗೆ ಆತ ಅಥವಾ ಆಕೆಯ ಶಿಕ್ಷಕರ ಪ್ರೀತಿ ಮತ್ತು ವಿಶ್ವಾಸದ ಸುಭದ್ರತೆಯಲ್ಲಿ ತಾನಿದ್ದೇನೆ ಎಂಬ ಭಾವನೆ ಬರಬಹುದು. ಹಾಗಿದ್ದೂ, ತನ್ನ ಸಮಾನ–ಮನಸ್ಕರೊಂದಿಗೆ ಹೋಲಿಕೆ ಮಾಡಿಕೊಳ್ಳುವ ಮಗುವಿಗೆ ಕೊರತೆಯ ಅನುಭವ ಆಗಬಹುದು.

ಹಾಗಾದರೆ ಹೊರಬರುವ ದಾರಿ ಯಾವುದು? ಇನ್ನೊಬ್ಬರಿಗೆ ಹೋಲಿಕೆ ಮಾಡಿಕೊಳ್ಳುವ ವಿಧ್ವಂಸಕ ಸ್ವರೂಪದ ಬಗ್ಗೆ ವಿದ್ಯಾರ್ಥಿಗಳು ಮತ್ತು ಶಿಕ್ಷಕರಿಂದ ಆಗಾಗ ಮಾತುಗಳನ್ನು ಕೇಳುತ್ತಿರುತ್ತೇವೆ. ನಾವು ಇನ್ನೊಬ್ಬರಿಗೆ ಹೋಲಿಕೆ ಮಾಡಿಕೊಂಡು ಕೀಳರಿಮೆ ಮತ್ತು ಮೇಲರಿಮೆಗೆ ಒಳಗಾಗಿ ಹೇಗೆ ತೊಂದರೆಗೆ ಒಳಗಾಗಿದ್ದೇವೆ ಎಂಬುದು ಗೊತ್ತಿದೆ. ಹೀಗೆ ಹೋಲಿಕೆ ಮಾಡಿಕೊಳ್ಳುವುದು ನಿಜಕ್ಕೂ ನಿರರ್ಥಕ ಎಂಬುದು ನಮಗೆಲ್ಲರಿಗೂ ಗೊತ್ತಿದ್ದರೂ, ಕಾಲ ಕಾಲಕ್ಕೆ ನಾವೀಗಲೂ ಅದನ್ನು ಮಾಡುತ್ತಲೇ ಇದ್ದೇವೆ. ಆದರೆ ಮಕ್ಕಳು ಬೆಳೆಯುತ್ತ ಹೋದ ಹಾಗೆ ಅವರ ಮೇಲೆ ಇಂಥ ಸಂಸ್ಕೃತಿಯ ಪರಿಣಾಮ ಬೀಳದೆ ಇರುವುದಿಲ್ಲ. ಒಬ್ಬ ವ್ಯಕ್ತಿ ಏನನ್ನು ಮಾಡಬಹುದು ಅಥವಾ ಏನನ್ನು ಮಾಡಲು ಸಾಧ್ಯವಿಲ್ಲ ಎಂಬುದರ ಮೂಲಕ ಆ ವ್ಯಕ್ತಿಯ ಮೌಲ್ಯವನ್ನು ಅಳೆಯಬೇಕು ಎಂದು ಅವರು ನಿಜಕ್ಕೂ ಯೋಚಿಸಲು ಹೋಗುವುದಿಲ್ಲ ಎಂಬುದು ನನ್ನ ನಂಬಿಕೆ. ಅವರ ನಡುವಿನ ಸಂಬಂಧಗಳು ಸಂಕೀರ್ಣವಾಗಿರುತ್ತದೆ ಮತ್ತು ಅವರ ನಡುವಿನ ಬಾಂಧವ್ಯಕ್ಕೆ ಸಾಮರ್ಥ್ಯ ಅಥವಾ ಅಸಾಮರ್ಥ್ಯಗಳು ಸಂಪೂರ್ಣವಾಗಿ ಅಪ್ರಸ್ತುತವಾಗಿರುತ್ತವೆ.

**ತನ್ನದೇ ಕಥೆಗಳನ್ನು ಕಟ್ಟುವುದು**

'ಯಾರು ನೀನು' ಎಂಬ ಮಾತಿನೊಂದಿಗೆ ಸಂಪೂರ್ಣ ಸ್ವೀಕೃತಿಯ ಮಾತನ್ನು ಪೂರ್ಣಗೊಳಿಸುವುದು ಉತ್ತೇಜನಕಾರಿ ಕೆಲಸ. ನಮಗೂ ವೈಯಕ್ತಿಕ ಸ್ವರೂಪದ, ನಾವು ಯಾರು ಎಂಬ ನಮ್ಮ ಕಥೆಗಳು, ನಮ್ಮದೇ ಆದ ನಿರ್ದಿಷ್ಟ ಪ್ರಿಯ ಮತ್ತು ಅಪ್ರಿಯ

ಸಂಗತಿಗಳು; ಸಂಕ್ಷಿಪ್ತವಾಗಿ ಹೇಳಬೇಕೆಂದರೆ ನಮ್ಮದೇ ವಿಚಾರಗಳನ್ನು ಒಪ್ಪಿಕೊಳ್ಳಬೇಕು ಎಂಬ ಗೀಳೂ ಇರುತ್ತದೆ. ಆದರೆ, ನಾನು ಯಾರು ಎಂಬ ಚಿತ್ರಗಳನ್ನು ನಾನು ಎಲ್ಲಿಯವರೆಗೆ ನನ್ನಲ್ಲೇ ಹಿಡಿದಿಟ್ಟುಕೊಳ್ಳುತ್ತೇನೋ ಅಲ್ಲಿಯ ತನಕ ಅವು ನನಗೆ ನೋವು ತರುವುದು ಸುಲಭ ಎಂಬುವುದು ನನ್ನ ಭಾವನೆ. ಹೌದು, ಒಂದು ಮಗು 'ನಾನು ಕೆಟ್ಟದಾಗಿ ಬರೆಯುತ್ತೇನೆ' ಎಂಬ ಚಿತ್ರದ ಬದಲಿಗೆ ನಾನು ಚೆನ್ನಾಗಿ ಫುಟ್‌ಬಾಲ್ ಆಡುತ್ತೇನೆ' ಎಂಬುದಾಗಿ ಒಂದು ಚಿತ್ರವನ್ನು ಬದಲಿಸಲು ಬಯಸಬಹುದು; ನಮ್ಮ ಬಗ್ಗೆ ನಾವೇ ಹೇಳಿಕೊಳ್ಳುವ, ನಾವು ಯಾರು ಮತ್ತು ನಾವು ಏನಾಗಲು ಬಯಸಿದ್ದೇವೆ ಎಂಬ ಬಗ್ಗೆ ಕಥೆಗಳನ್ನು ಹೇಳುವ ಕುರಿತಂತೆ ನಾವು ನಮ್ಮ ಶಾಲೆಯಲ್ಲಿ ಒಂದು ಪ್ರಯತ್ನವನ್ನು ಮಾಡಿದೆವು. ಹೀಗೆ ಕಟ್ಟುವ ಕಥೆಗಳ ಮೂಲಕ ಅವಮಾನದಿಂದ ರಕ್ಷಿಸಿ ಮತ್ತು ಹೊಗಳಿಕೆಯಿಂದ ತಲೆ ಎತ್ತುವಂತೆ ಮಾಡಿ ವ್ಯಕ್ತಿತ್ವವನ್ನು ರೂಪಿಸುತ್ತದೆ. ಎಲ್ಲ ಕಾಲದಲ್ಲಿಯೂ ನಾವು ಇಂತಹುದನ್ನೇ ಮಾಡುವ ಮೂಲಕ ಜೀವನಕ್ಕೆ ಪ್ರತಿಸ್ಪಂದಿಸುವ ಅಭ್ಯಾಸವನ್ನು ಬೆಳೆಸಿಕೊಂಡಿದ್ದರೂ ಕೂಡ ಇವೆಲ್ಲವೂ ಭ್ರಾಂತಿಯನ್ನು ಉಂಟುಮಾಡುವ ಕ್ಷಣಗಳು.

ಪ್ರತಿಯೊಬ್ಬರೂ ಹೇಳುವ ಇನ್ನೊಂದು ಮಾತು ಏನೆಂದರೆ ಕಲಿಕೆಯಲ್ಲಿ ಸಮಸ್ಯೆಗಳನ್ನು ಎದುರಿಸುತ್ತಿರುವ ಮಕ್ಕಳ ಬಹುದೊಡ್ಡ ಮಾನಸಿಕ ಸವಾಲು ಅವರಲ್ಲಿರುವ ಆತ್ಮಾಭಿಮಾನದ ಕೊರತೆ. ಕೇವಲ ಅಧಿಕ ಆತ್ಮಾಭಿಮಾನಕ್ಕೆ ಮನ್ನಣೆ ನೀಡುವ ಜಗತ್ತು ಮಾತ್ರ 'ಆತ್ಮಾಭಿಮಾನದ ಕೊರತೆ'ಯಂತಹ (Low self-esteem) ಸಮಸ್ಯೆಗೆ ಕಾರಣವಾಗುತ್ತದೆ. ಕಲಿಕೆಯಲ್ಲಿನ ತೊಂದರೆ ಇಂದಿನ ಶೈಕ್ಷಣಿಕ ವಿದ್ಯಮಾನದಲ್ಲಿ ನಿಜಕ್ಕೂ ಸವಾಲು ಎಂಬುದರಲ್ಲಿ ಅನುಮಾನವಿಲ್ಲ, ಆದರೆ ಅದನ್ನೊಂದು ಸಮಸ್ಯೆಯಾಗಿ ಪರಿಗಣಿಸಬೇಕಾದ ಅಗತ್ಯವೇನೂ ಇಲ್ಲ. ಮಾನಸಿಕ ಘಾಸಿಗೆ ಬಹುಬೇಗ ಒಳಗಾಗುವ ವ್ಯಕ್ತಿತ್ವವನ್ನು ಸೃಷ್ಟಿ ಮಾಡುವುದು ನೀವು ಸಮಸ್ಯೆಯನ್ನು ಸೃಷ್ಟಿ ಮಾಡಿದಂತೆ; ಆರಾಮದಾಯಕ ಬದುಕು, ಹುಸಿ ಪ್ರಶಂಸೆ, ಮಗುವನ್ನು ಭಾವನಾತ್ಮಕವಾಗಿ ಸರಿದೂಗಿಸುವ ಏನನ್ನಾದರೂ ಹುಡುಕುವಂತಹ ಸ್ಥಿತಿಯಲ್ಲಿ ಸಿಕ್ಕಿಹಾಕಿಕೊಂಡಂತೆ. ಪದವಿಯನ್ನು ಮುಗಿಸಿ ಎಷ್ಟೋ ವರ್ಷಗಳ ಬಳಿಕ ನಮ್ಮ ವಿದ್ಯಾರ್ಥಿಗಳಲ್ಲಿ ಒಬ್ಬಾತ ತನ್ನ ಅನುಭವವನ್ನು ಹೇಳಿ–ಕೊಂಡಿರುವುದು ಈಗಲೂ ನನಗೆ ನೆನಪಿದೆ; ಆತ ಅತ್ಯಂತ ಕಷ್ಟದಲ್ಲಿ ಓದಿದ್ದ, ಓದು ಅವನಿಗೆ ಸುಲಭವಾಗಿರಲಿಲ್ಲ, ಹಾಗಾಗಿ ತನ್ನ ಓದನ್ನು ಯಾರಾದರೂ ಹೊಗಳಿದರೆ ಅವನಿಗೆ ಭಾರೀ ಕಿರಿಕಿರಿಯಾಗುತ್ತಿತ್ತು. ಇದು ತನ್ನನ್ನು ಪ್ರೋತ್ಸಾಹಿಸಿದಂತೆ ಅನಿಸುತ್ತಿತ್ತು ಎಂದು ಆತ ಹೇಳಿಕೊಂಡಿದ್ದ. ಆತನನ್ನು ಹೊಗಳಲು ಪ್ರೇರಣೆಯಾದರೂ, ನಮ್ಮಲ್ಲಿರುವ ಅಗತ್ಯವಾದರೂ ಏನು? ಕೆಲವರಿಗೆ ತಮ್ಮ ವ್ಯಕ್ತಿತ್ವದ ಬಲವಾದ ಪ್ರಜ್ಞೆಗೆ ಊರುಗೋಲಿನ ಅಗತ್ಯವಿರುತ್ತದೆಯೇ? ಹೀಗೆ ಆಸರೆ ನೀಡಬೇಕಾದ ವ್ಯಕ್ತಿತ್ವ ಇಲ್ಲದೇ ಇದ್ದಾಗ ಎಲ್ಲರೂ ಹೆಚ್ಚು ನಿರಾಳರಾದಂತೆ.

ಅನೇಕ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿರುವ ಮಕ್ಕಳ ಕಲಿಕೆಗೆ ಹೇಗೆ ನಾವು ಪ್ರೋತ್ಸಾಹ ನೀಡಬೇಕು ಎಂಬ ಬಗ್ಗೆ ದೊಡ್ಡ ಮಟ್ಟದ ಸಂಶೋಧನೆ ನಡೆಯುತ್ತಿದ್ದು ಮುಂದಿನ ಒಂದು ದಶಕದ ಹೊತ್ತಿಗೆ ಅದರ ಫಲಿತಾಂಶ ತರಗತಿಯಲ್ಲಿ ಕಾಣಬಹುದು ಎಂಬ ಆಶಾವಾದವಿದೆ. ಪ್ರತಿಯೊಬ್ಬರ ಮನಸ್ಸಿನಲ್ಲಿಯೂ ಉದ್ಭವಿಸುವ ಭಿನ್ನ ಭಾವನೆಗಳಿಗೆ ಕಾರಣವಾಗುವ ಮಾನಸಿಕ ಸ್ಥಿಮಿತವನ್ನು ನಿಭಾಯಿಸುವುದು ಅತ್ಯಂತ ಮಹತ್ವದ ಕೆಲಸವಾಗಲಿದೆ. ಒಂದು ಮಗುವಿನ ವೈಯಕ್ತಿಕ ಮಟ್ಟದಲ್ಲಿ ಇರುವ ಕೊರತೆಯ ಭಾವನೆಯನ್ನು ನಿಭಾಯಿಸಲು ಆಪ್ತಸಮಾಲೋಚನೆ ಮತ್ತು ಥೆರಪಿ ಮಾಡಬಹುದಾದರೂ ಅದರ ಪರಿಣಾಮಗಳು ತೀರಾ ಸೀಮಿತ ಎಂಬುದು ನನ್ನ ಭಾವನೆ. ಇಡೀ ತರಗತಿ ಅಥವಾ ಶಾಲೆಯಲ್ಲಿಯೇ ವಾಸವಿದ್ದಾರೆ ಎನ್ನುವ ರೀತಿಯಲ್ಲಿ ಮಾನಸಿಕ ಸೌಖ್ಯದ ಬಗ್ಗೆ ಯಾಕೆ ಗಮನ ಹರಿಸಬಾರದು? ಒಂದು ಪರಿಸರದ ಕಾರಣದಿಂದ ಚೇತರಿಕೆ ಕಂಡುಬಂದರೆ ಅಲ್ಲಿ ವೈಯಕ್ತಿಕಕ್ಕಿಂತ ಹೆಚ್ಚಾಗಿ ಸಮೂಹವೇ ಸಮಗ್ರತೆಯ ರೂಪದಲ್ಲಿ ಹೆಚ್ಚಿನ ಸಹಾನುಭೂತಿಯನ್ನು ಒದಗಿಸಬಲ್ಲದು. ವೈಯುಕ್ತಿಕ ಮಟ್ಟದಲ್ಲಿ ನಡೆಯುವ ಆಪ್ತಸಮಾಲೋಚನೆ ಮತ್ತು ಥೆರಪಿ ಶಾಲೆಯ ಸಂಸ್ಕೃತಿಯಲ್ಲಿ ಬದಲಾವಣೆಯನ್ನು ತರುವುದಿಲ್ಲ. ಈ ವಿಚಾರದಲ್ಲಿ ನಾವು ಹೆಚ್ಚಿನ ಒತ್ತು ನೀಡಬೇಕಾಗಿದೆ ಎಂಬುದು ನನ್ನ ಭಾವನೆ. ಈ ಲೇಖನದಲ್ಲಿ ವ್ಯಕ್ತಪಡಿಸಲಾದ ಕೆಲವು ಚಿಂತನೆಗಳು ಸರ್ವ ಸಮ್ಮತಿಯ ಶಾಲಾ ಸಂಸ್ಕೃತಿಯನ್ನು ಸೃಷ್ಟಿಸಲು ಶಿಕ್ಷಣ ತಜ್ಞರಿಗೆ ಸಹಾಯ ಮಾಡುತ್ತವೆ ಎಂದು ನಾನು ಭಾವಿಸುತ್ತೇನೆ.

[1]ಇಂತಹ ಇನ್ನೂ ಹೆಚ್ಚಿನ ಆಸಕ್ತಿದಾಯಕ ಅಧ್ಯಯನಗಳಿಗಾಗಿ https://www.youtube.com/watch?v=FRvVFW85IcU ನೋಡಿರಿ.



**ಕಮಲಾ ಮುಕುಂದ** ಅವರಿಗೆ ಬೋಧನೆ ಎಂದರೆ ಅಚ್ಚುಮೆಚ್ಚು. ಸೆಂಟರ್ ಫಾರ್ ಲರ್ನಿಂಗ್ ಕೇಂದ್ರದಲ್ಲಿ ಅವರು 1995 ರಿಂದಲೂ ಕೆಲಸ ಮಾಡಿಕೊಂಡು ಬಂದಿದ್ದಾರೆ. ಕಮಲಾ ಅವರು ಎರಡು ಕೃತಿಗಳನ್ನು ಬರೆದಿದ್ದಾರೆ; 'ವಾಟ್ ಡಿಡ್ ಯೂ ಆಸ್ಕ್ ಅಟ್ ಸ್ಕೂಲ್‌ಟುಡೆ'– ಭಾಗ–1 ಮತ್ತು ಭಾಗ–2 (ಹಾರ್ಪರ್ ಕಾಲಿನ್ಸ್ ಪ್ರಕಾಶನ) ಎಂಬ ಈ ಕೃತಿಗಳು ಕಲಿಕೆ ಮತ್ತು ಬೆಳವಣಿಗೆಯ ಮನೋವಿಜ್ಞಾನಕ್ಕೆ ಸಂಬಂಧಿಸಿದ್ದಾಗಿದೆ. ಅವರನ್ನು kamala.mukunda@gmail.com ಈ ಮಿಂಚಂಚೆಯಲ್ಲಿ ಸಂಪರ್ಕಿಸಬಹುದು.

ಅನುವಾದ: **ಮಂಜುನಾಥ್ ಚಾಂದ್** । ಪರಿಶೀಲನೆ: **ನಾಗಮಣಿ ಎಸ್ ಎನ್**

# ಅವರಿಗೆ ಯಾವುದೇ ದುರುದ್ದೇಶಗಳಿಲ್ಲ...

## ಸ್ವಲೀನತೆ(ಆಟಿಸಂ) ಇರುವ ಮಗನ ಪಾಲನೆ

ಗೋದಾವರಿ ವರ್ಮಾ

2010 ಸೆಪ್ಟೆಂಬರ್ 29 ರಂದು ಭೋಪಾಲ್‌ನ ಆಸ್ಪತ್ರೆಯೊಂದರಲ್ಲಿ ಒಂದು ಶಸ್ತ್ರಚಿಕಿತ್ಸಾ ವಿಧಾನದ ಮೂಲಕ ಗೌರವ್ ಜನಿಸಿದನು. ಹುಟ್ಟಿದ ಸಮಯದಲ್ಲಿ 1.8 ಕೆಜಿ ತೂಕ ಹೊಂದಿದ್ದರಿಂದ ಅವನನ್ನು ಒಂದು ವಾರದತನಕ ಇನ್‌ಕ್ಯೂಬೇಟರ್‌ನಲ್ಲಿ ಇಡಲಾಗಿತ್ತು. ಹುಟ್ಟಿನಿಂದಲೇ ಗೌರವ್‌ಗೆ ಕಾಮಾಲೆ ರೋಗವಿತ್ತು. ಬೆಳಗ್ಗೆ ಸೂರ್ಯನ ಬೆಳಕಿಗೆ ಮೈಯೊಡ್ಡಿದರೂ ಅವನು ಗುಣವಾಗಲಿಲ್ಲ. ಆದ್ದರಿಂದ ಅವನನ್ನು ವೈದ್ಯರ ಬಳಿ ಕರೆದುಕೊಂಡು ಹೋದೆವು. ಆನಂತರ ಅವನನ್ನು ಆಸ್ಪತ್ರೆಯಲ್ಲಿ ಸೇರಿಸಲಾಯಿತು. ಬಹಳಷ್ಟು ಪರೀಕ್ಷೆಗಳನ್ನು ನಡೆಸಿದರೂ ವೈದ್ಯರಿಗೆ ಕಾಮಾಲೆ ರೋಗದ ಕಾರಣವನ್ನು ಪತ್ತೆ ಹಚ್ಚಲಾಗಲಿಲ್ಲ. ಕೊನೆಗೆ, ಒಂದು ಕ್ಯಾನ್ಸರ್ ಆಸ್ಪತ್ರೆಯಲ್ಲಿ ಎಚ್‌ಐಡಿಎ ಸ್ಕ್ಯಾನ್(1) ನಡೆಸಿದ ನಂತರ, ಗೌರವ್‌ಗೆ ಒಂದು ಲಕ್ಷ ಜನರಲ್ಲಿ ಒಬ್ಬರಿಗೆ ಬರುವ ಬೈಲಿಯರಿ ಅಟ್ರೇಸಿಯಾ(2) (Biliary atresia) ಇದೆಯೆಂಬ ನಿರ್ಣಯಕ್ಕೆ ಬಂದರು.

ಗೌರವ್‌ನು ಹುಟ್ಟಿದ 60 ದಿನಗಳ ಒಳಗೆ ಶಸ್ತ್ರಕ್ರಿಯೆಗೆ ಒಳಗಾಗಬೇಕು ಎಂದು ವೈದ್ಯರು ನಮಗೆ ಹೇಳಿದರು. ಅದರಂತೆ ಶಸ್ತ್ರಕ್ರಿಯೆಯು ನಡೆದು, ಅದು ಯಶಸ್ವಿಯಾಯಿತು ಎಂದು ವೈದ್ಯರು ನಮಗೆ ತಿಳಿಸಿದರು. ಗೌರವ್ ನಿಧಾನವಾಗಿ ಚೇತರಿಸಿಕೊಂಡನು ಹಾಗೂ ನಾಲ್ಕು ತಿಂಗಳ ನಂತರ ಆಸ್ಪತ್ರೆಯಿಂದ ಹೊರಬಂದನು. ಸುಮಾರು ಎಂಟು ತಿಂಗಳ ತನಕವೂ ಔಷಧೋಪಚಾರ ನಡೆದ ನಂತರ ಅವನು ಬೈಲಿಯರಿ ಅಟ್ರೇಸಿಯಾ (Biliary atresia) ಕಾಯಿಲೆಯಿಂದ ಸಂಪೂರ್ಣವಾಗಿ ಗುಣಹೊಂದಿದನು. ನಿಧಾನವಾಗಿ ಸಮಯ ಕಳೆಯಿತು. ಗೌರವ್ ಎರಡು ವರ್ಷದವನಾದರೂ ಮಾತನಾಡಲು ಆರಂಭಿಸಿರಲಿಲ್ಲ. ಮಾತನಾಡಲು ಪ್ರಯತ್ನವನ್ನೂ ಮಾಡುತ್ತಿರಲಿಲ್ಲ. ಅವನು ಕುಟುಂಬದವರ ಹತ್ತಿರ ಹೋಗುತ್ತಿದ್ದನೇ ಹೊರತು ಹೊರಗಿನವರ ಹತ್ತಿರ ಹೋಗುತ್ತಿರಲಿಲ್ಲ. ರೈಲುಗಾಡಿ, ಆಟೊ ಅಥವಾ ಯಂತ್ರಗಳು ಮಾಡುವ ಶಬ್ದವನ್ನು ಕೇಳಿದರೆ ಅವನು ಹೆದರುತ್ತಿದ್ದನು. ಅವನಿಗೆ ಆಟಿಕೆಗಳ ಮೇಲೆ ಹೆಚ್ಚೇನೂ ಒಲವಿರಲಿಲ್ಲ. ಹಾಗಾಗಿ ಅವುಗಳೊಡನೆ ಹೆಚ್ಚು ಆಡುತ್ತಲೂ ಇರಲಿಲ್ಲ. ಅವನು ಗುಂಡಗಿನ ವಸ್ತುಗಳನ್ನು ತುಂಬ ಇಷ್ಟಪಡುತ್ತಿದ್ದ. ಹಾಗಾಗಿ ತನ್ನ ಕೈಗಳನ್ನು ವೃತ್ತಾಕಾರದಲ್ಲಿ ತಿರುಗಿಸುತ್ತಿದ್ದನು. ಆದರೆ ಹಾಗೇಕೆ ಮಾಡುತ್ತಾನೆಂದು ನಮಗೆ ತಿಳಿಯುತ್ತಿರಲಿಲ್ಲ. ಸಮಯ ಕಳೆಯುತ್ತಿದ್ದಂತೆ ಗೌರವ್‌ಗೆ ಮೂರು ವರ್ಷ ತುಂಬಿತು. ಗೌರವ್ ಶಾಲೆಗೆ ಸೇರಿಸಿದರೆ ಅವನು ಇತರ ಮಕ್ಕಳೊಡನೆ ಬೆರೆತು ಮಾತನಾಡಲು ಆರಂಭಿಸುತ್ತಾನೆ ಎಂದುಕೊಂಡೆವು. ಒಂದು ಖಾಸಗಿ ಶಾಲೆಗೆ ಅವನನ್ನು ಸೇರಿಸಿದೆವು. ಆದರೆ ಮೂರು ತಿಂಗಳು ಶಾಲೆಗೆ ಹೋದರೂ ಗೌರವನಲ್ಲಿ ಯಾವುದೇ ಬದಲಾವಣೆಕಾಣಲಿಲ್ಲ. ಆನಂತರ ಗೌರವನನ್ನು 'ಸಮರ್ಪಣ್' (Samarpan) ಸಂಸ್ಥೆಗೆ ಕರೆದುಕೊಂಡು ಹೋದಾಗ ಅವನಿಗೆ ಸ್ವಲೀನತೆ (Autism) ಇದೆಯೆಂದು ನಮಗೆ ಗೊತ್ತಾಯಿತು. ಹಾಗೆಂದರೇನು ಎಂದು ನಮಗೆ ತಿಳಿದಿರಲಿಲ್ಲ. ಈ ರೀತಿಯ ನ್ಯೂನತೆಯಿರುವ ಮಕ್ಕಳಿಗೆ ಚಿಕಿತ್ಸೆಗಳು, ವಿಶೇಷ ಶಿಕ್ಷಣ ಹಾಗೂ ಇತರ ವಿಧಾನಗಳ ಮೂಲಕ ತರಬೇತಿ ನೀಡಲಾಗುವ. 'ಅರುಶಿ' (Arushi) ಎಂಬ ಒಂದು ಸಂಸ್ಥೆಯ ಬಗ್ಗೆ ನಮಗೆ 'ಸಮರ್ಪಣ'ದಲ್ಲಿ ತಿಳಿಸಲಾಯಿತು. ಗೌರವ್ ಸುಮಾರು ನಾಲ್ಕು ವರ್ಷದವನಿದ್ದಾಗ 'ಅರುಶಿ'ಗೆ ಹೋಗಲು ಆರಂಭಿಸಿದನು. ನಂತರದಲ್ಲಿ ಅವನ ಪರಿಸ್ಥಿತಿ ಕ್ರಮೇಣ ಸುಧಾರಿಸಿತು. ವಾಕ್ ಚಿಕಿತ್ಸೆಯ (Speech therapy) ಬಲದಿಂದ ಅವನು ಸ್ವಲ್ಪಮಟ್ಟಿಗೆ ಮಾತನಾಡಲು ಆರಂಭಿಸಿದನು. ಮೊದಲಿಗೆ, ಅವನಿಗೆ ಏನೊಂದೂ ಅರ್ಥವಾಗುತ್ತಿರಲಿಲ್ಲ, ಆದರೆ ಕ್ರಮೇಣ ಸುಧಾರಿಸಿದನು. ಶಾಲೆಯಲ್ಲಿ ಗೌರವ್ ಎದುರಿಸುತ್ತಿದ್ದ ಸಮಸ್ಯೆಗಳನ್ನು ವ್ಯಕ್ತಪಡಿಸಲು ಅವನಿಗೆ ಕಷ್ಟವಾಗುತ್ತಿತ್ತು. ಅವನು 'ಅರುಶಿ' ಹಾಗೂ ತನ್ನ ಶಾಲೆಗೆ ಹೋಗುವುದನ್ನು ಮುಂದುವರೆಸಿದನು. ನಿಧಾನವಾಗಿ ಹಿಂದಿ ಹಾಗೂ ಇಂಗ್ಲಿಷ್ ಓದಲು ಮತ್ತು ಬರೆಯಲು ಕಲಿತನು. 'ಅರುಶಿ'ಯಲ್ಲಿ, ಅವನನ್ನು ಕೇಂದ್ರೀಯ ವಿದ್ಯಾಲಯಕ್ಕೆ ಸೇರಿಸಲು ನಮಗೆ ಸಲಹೆ ನೀಡಿದರು. ಪ್ರಸ್ತುತ, ಅವನು 'ಅರುಶಿ' ಹಾಗೂ ಕೇಂದ್ರೀಯ ವಿದ್ಯಾಲಯ ಎರಡೂ ಕಡೆ ಹೋಗುತ್ತಾನೆ. 'ಅರುಶಿ'ಯಲ್ಲಿ ಅವನಿಗೆ ವಿಶೇಷ ಶಿಕ್ಷಣದ ತರಬೇತಿ ಮುಂದುವರಿಯಿತು. ಈಗ ಗೌರವ್ ಎರಡನೇ ತರಗತಿಯಲ್ಲಿದ್ದಾನೆ. ಬೇರೆ ಮಕ್ಕಳಿಗೆ ಹೋಲಿಸಿದರೆ ಅವನ ಬಗ್ಗೆ ನಾನು ಈಗಲೂ ಹೆಚ್ಚು ಕಾಳಜಿ ವಹಿಸಬೇಕಾಗುತ್ತದೆ. ಏಕೆಂದರೆ ಇವತ್ತಿಗೂ ಸಂಪೂರ್ಣವಾಗಿ ತನ್ನ ಆರೈಕೆಯನ್ನು ತಾನೇ ಮಾಡಿಕೊಳ್ಳಲು ಆಗುವುದಿಲ್ಲ. ಹುಟ್ಟಿನಿಂದ ಇಂದಿನವರೆಗೂ, ಅವನ ಕಡೆಗೆ ಹೆಚ್ಚಿನ ಗಮನ ಕೊಡಬೇಕಾಗಿದೆ. ಏಕೆಂದರೆ ಇಂದಿಗೂ ತನ್ನ ಪಾಲಿಗೆ ಯಾವುದು ಒಳಿತು ಮತ್ತು ಯಾವುದು ಕೆಡುಕು ಎಂಬ ತಿಳುವಳಿಕೆಯನ್ನು ಹೊಂದಲು ಅವನಿಗೆ ಸಾಧ್ಯವಾಗಿಲ್ಲ. ಅವನೆಡೆಗೆ ಗಮನ ಕೊಡದಿದ್ದರೆ ಅನೇಕ ಬಗೆಯ ಪುನರಾವರ್ತಿತ ವರ್ತನೆಗಳನ್ನು (Repetitive behavior) ತೋರಿಸುತ್ತಾನೆ. ಅವನಿಗೆ ಪದೇಪದೇ ಊಟ ಮಾಡಲು, ಓದಲು ಅಥವಾ ಬರೆಯಲು ಹೇಳಬೇಕಾಗುತ್ತದೆ.

ಗೌರವ್ ಈಗ ಒಂಬತ್ತು ವರ್ಷದವನು. ಅವನು ಹುಟ್ಟಿದಂದಿನಿಂದ ಎಂದೂ ನಾನು ಅವನನ್ನು ಒಂಟಿಯಾಗಿ ಬಿಟ್ಟಿಲ್ಲ. ಅವನನ್ನು ಸರಿಪಡಿಸಲು ನನ್ನ ಕೈಲಾದದ್ದನ್ನೆಲ್ಲ ಮಾಡುತ್ತಿದ್ದೇನೆ. ಬಹಳಷ್ಟು ಕೆಲಸಗಳನ್ನು ಸ್ವಂತವಾಗಿ ತಾನೇ ಮಾಡಿಕೊಳ್ಳುತ್ತಿದ್ದರೂ, ಇನ್ನೂ ಕೆಲವಕ್ಕೆ ನನ್ನನ್ನು ಅವಲಂಬಿತನಾಗಿದ್ದಾನೆ. ಅವನಲ್ಲಿ ಬಹಳಷ್ಟು ಬದಲಾವಣೆಯನ್ನು ಕಂಡಿದ್ದರೂ ಇನ್ನೂ ಬಹಳ ಕಲಿಯಬೇಕಾಗಿದೆ. ನಮ್ಮ ಕುಟುಂಬದವರಿಗೆಲ್ಲ ಗೌರವ್ ಆಟಿಸ್ಟಿಕ್ (Autistic) ಎಂದು ಗೊತ್ತಿದೆ. ಹಾಗೂ ಅವನೆಡೆಗಿನ ಅವರ ವರ್ತನೆ ಬಹಳ ಸಹಜವಾಗಿದೆ. ನಮ್ಮ ಸಮಾಜದಲ್ಲಿ ಸ್ವಲೀನತೆ(ಆಟಿಸಂ) ಬಗೆಗೆ ಅರಿವಿನ ಕೊರತೆಯಿದೆ. ಒಂದು 'ಸಾಮಾನ್ಯ' ಮಗುವಿನೊಡನೆ ನಿಮ್ಮ ವರ್ತನೆ ಹೇಗಿರುತ್ತದೆಯೋ ಹಾಗೆಯೇ ಇವರೊಡನೆಯೂ ನೀವು ಅಷ್ಟೇ ಸಹಜವಾಗಿ

ವರ್ತಿಸಬೇಕೆಂಬುದು ಅವರ ಅಪೇಕ್ಷೆಯಾಗಿರುತ್ತದೆ ಎಂದು ಎಲ್ಲ ಪೋಷಕರಿಗೂ, ಶಿಕ್ಷಕರಿಗೂ ನಾನು ಹೇಳಬಯಸುತ್ತೇನೆ. ಅವರಿಗೆ ನಿಮ್ಮ ಸಹಾನುಭೂತಿ ಅಥವ ಅನುಕಂಪ ಬೇಡ. ಅವರಿಗೆ ನಿಮ್ಮ ಪ್ರೀತಿ ಹಾಗೂ ಸಹಜ ವರ್ತನೆಯಷ್ಟೇ ಬೇಕಾಗಿದೆ. ಅವರಿಗೆ ನಿಮ್ಮಿಂದ ಇನ್ನೇನೂ ನಿರೀಕ್ಷೆಯಿಲ್ಲ. ಸಮಾಜ ತಮಗೆ ಸಮಾನವಾದ ಹಕ್ಕನ್ನು ನೀಡಬೇಕೆಂಬುದು ಗೌರವ್ ಹಾಗೂ ಅವನಂತಿರುವ ಇನ್ನಿತರ ಮಕ್ಕಳ ಅಪೇಕ್ಷೆ. ಸಮಾಜವು ಅವರನ್ನು ಕೀಳಾಗಿ ನೋಡಬಾರದು. ಅವರಲ್ಲಿ ಕೆಲವು ಕೊರತೆಗಳಿರಬಹುದು, ಆದರೆ ಅವರಲ್ಲಿ ಯಾವುದೇ ರೀತಿಯ ಕುತಂತ್ರ ಅಥವಾ ದುರುದ್ದೇಶಗಳಿಲ್ಲ.



1. ಎಚ್‌ಐಡಿಎ ಪರೀಕ್ಷೆ ಎಂದರೆ ಹೆಪಟೊಬೈಲಿಯರಿ ಇಮಿನೊಡಯಾಸೆಟಿಕ್ ಆಸಿಡ್ ಪರೀಕ್ಷೆ (Hepatobiliary Iminodiacetic Acid scan): ಯಕೃತ್ತು, ಪಿತ್ತಕೋಶ ಹಾಗೂ ಪಿತ್ತರಸ ನಾಳಗಳ ಸಮಸ್ಯೆಗಳನ್ನು ಪತ್ತೆ ಹಚ್ಚಲು ಬಳಸುವ ಇಮೇಜಿಂಗ್ ವಿಧಾನ. (mayoclinic.org)

2. ಬೈಲಿಯರಿ ಆಟ್ರೇಸಿಯ (Biliary atresia) ಎನ್ನುವುದು ಒಂದು ಅಪರೂಪದ ಜಠರಗರುಳಿನ ಕಾಯಿಲೆಯಾಗಿದ್ದು, ಯಕೃತ್ತಿನ ಹೊರಭಾಗದಲ್ಲಿರುವ ಪಿತ್ತರಸ ನಾಳದ ಒಂದು ಭಾಗ ಅಥವಾ ಸಂಪೂರ್ಣ ಭಾಗದ ನಾಶ ಅಥವಾ ಅನುಪಸ್ಥಿತಿಯ ಗುಣಲಕ್ಷಣಗಳನ್ನು ಹೊಂದಿದೆ. (rarediseases.com)

---



**ಗೋದಾವರಿ ವರ್ಮಾ**
ಗೌರವ್ ವರ್ಮಾನ ತಾಯಿ

ಅನುವಾದ: **ವಿನಯಾ ವಿಠಲ** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ತಡವಾದ ಬೆಳವಣಿಗೆಯನ್ನು ಆರಂಭಿಕ ಹಂತದಲ್ಲಿಯೇ ಗುರುತಿಸುವಲ್ಲಿ ಶಿಕ್ಷಕರ ಪಾತ್ರ

ಕಿನ್ನರಿ ಪಾಂಡ್ಯ

**ಪ್ರಕರಣ –1**

ರಮಾ ಎರಡೂವರೆ ವರ್ಷದ ಹುಡುಗಿ. ಮೂವರು ಮಕ್ಕಳಲ್ಲಿ ಎರಡನೆಯವಳು. ಅವಳ ತಂದೆತಾಯಿ ಬೆಂಗಳೂರಿನ ಹೊರವಲಯದಲ್ಲಿರುವ ಕೃಷಿ ಭೂಮಿಯಲ್ಲಿ ತರಕಾರಿಗಳನ್ನು ಬೆಳೆಯುತ್ತಾರೆ. ಅವಳನ್ನು ಮತ್ತು ಅವಳ ಅಕ್ಕನನ್ನು ಸಮೀಪದಲ್ಲಿಯೇ ಇರುವ ಪರ್ಯಾಯ ಶಿಕ್ಷಣ ನೀಡುವ ಶಾಲೆಯೊಂದಕ್ಕೆ ಸೇರಿಸಿದರು. ಶ್ರವಣ ಶಕ್ತಿಗೆ ಸಂಬಂಧಿಸಿದಂತೆ ರಮಾ ಏನೋ ತೊಂದರೆ ಅನುಭವಿಸುತ್ತಿದ್ದಾಳೆ ಎಂಬುದು ಅವರಿಗೆ ಅರಿವಾಗತೊಡಗಿತ್ತು. ಆದರೂ ಉಳಿದೆಲ್ಲ ಮಕ್ಕಳಂತೆ ಅವಳು ಬೆಳೆಯಬೇಕು ಎಂಬುದು ಅವರ ಆಶಯ. ಮೌಖಿಕ ಭಾಷೆಯನ್ನು (Oral language) ಸಾಮಾನ್ಯ ಗತಿಗಿಂತಲೂ ಸ್ವಲ್ಪ ನಿಧಾನವಾಗಿ ಕಲಿಯುವ ಮಕ್ಕಳಲ್ಲಿ ಅವಳೂ ಒಬ್ಬಳು ಎಂದು ಅವರು ನಂಬಿದ್ದರು. ವಯಸ್ಕರು ಮತ್ತು ಮಕ್ಕಳ ನಡುವೆ ಮಾತುಕತೆಗಳು ಅತ್ಯಂತ ಕಡಿಮೆ ನಡೆಯುವ ಅಥವಾ ನಡೆಯುವುದೇ ಇಲ್ಲ ಎನ್ನಬಹುದಾದ ಸಂಸ್ಕೃತಿಯೊಂದನ್ನು ರಮಾಳ ಕುಟುಂಬವು ಪ್ರತಿನಿಧಿಸುತ್ತದೆ. ಮಾತುಕತೆಗಳು ನಡೆದರೂ ಅವು ಹೆಚ್ಚಿನ ವೇಳೆ ಉದ್ದೇಶ ಸಾಧಕ ಸ್ವರೂಪದವು.

ರಮಾ ಶಾಲೆಗೆ ಹೋಗಲು ಆರಂಭಿಸಿದ ಮೇಲೆ, ಹತ್ತಿರದ ಅಥವಾ ದೂರದ ಯಾವುದೇ ಶಬ್ದಕ್ಕೆ ಅವಳು ಪ್ರತಿಕ್ರಿಯಿಸುವುದಿಲ್ಲ ಎನ್ನುವುದು ಶಿಕ್ಷಕರಿಗೆ ಮನದಟ್ಟಾಯಿತು. ಅವಳ ಮುಖದಲ್ಲಿ ಯಾವ ಅಭಿವ್ಯಕ್ತಿಯೂ ಇರುತ್ತಿರಲಿಲ್ಲ. ಸಾಕಷ್ಟು ಗಮನಿಸಿದ ನಂತರ ಹಾಗೂ ಪ್ರಾಥಮಿಕ ತಪಾಸಣೆಯ ಬಳಿಕ, ರಮಾಳಿಗೆ 'ಸಂಪೂರ್ಣ ಶ್ರವಣ ಶಕ್ತಿನಷ್ಟ'ದ ('Total hearing loss) ಸಮಸ್ಯೆ ಇದೆ ಎನ್ನುವುದನ್ನು ಶಿಕ್ಷಕರು ತಿಳಿದುಕೊಂಡರು ಹಾಗಿದ್ದಲ್ಲಿ ಅವಳು ಮಾತನಾಡುತ್ತಿರಲಿಲ್ಲ ಅಥವಾ ಸ್ಪಂದನೆ, ಪ್ರತಿಕ್ರಿಯೆಗಳನ್ನು ನೀಡುತ್ತಿರಲಿಲ್ಲ ಎನ್ನುವುದರಲ್ಲಿ ಯಾವ ಆಶ್ಚರ್ಯವೂ ಇರಲಿಲ್ಲ. ಪಾಲಕ/ಪೋಷಕರ ಸಮುದಾಯದಲ್ಲಿದ್ದ ವೈದ್ಯರ ಸಹಾಯದಿಂದ, ಶಸ್ತ್ರಚಿಕಿತ್ಸೆಯ ಮೂಲಕ ಶ್ರವಣ ಸಾಧನ ಅಳವಡಿಕೆ (Cochlear implant) ಮಾಡಿದರೆ ಅವಳು ಭಾಗಶಃ ಶ್ರವಣ ಶಕ್ತಿಯನ್ನು ಪಡೆದು–ಕೊಳ್ಳಬಹುದು ಮತ್ತು ನಿಧಾನವಾಗಿ ಮಾತನಾಡಲೂ ಸಾಧ್ಯವಾಗಬಹುದು ಎಂಬುದನ್ನು ಅವರು ಕಂಡುಕೊಂಡರು. ಅವಳ ಪಾಲಕರಿಗೆ ತಮ್ಮ ಆರ್ಥಿಕ ಸ್ಥಿತಿಗತಿಯ ಹಿನ್ನೆಲೆಯಲ್ಲಿ ಈ ಚಿಕಿತ್ಸೆಯ ವೆಚ್ಚವನ್ನು ಭರಿಸಲು ಆಗುತ್ತಿರಲಿಲ್ಲ. ಶಿಕ್ಷಕರ ಗುಂಪುಗಳ ಕ್ರಿಯಾಶೀಲ ಒಳಗೊಳ್ಳುವಿಕೆಯಿಂದಾಗಿ ಸಾಮಾಜಿಕ ಮಾಧ್ಯಮ ಜಾಲ ಮತ್ತು ಅಂತರ್ಜಾಲ ವೇದಿಕೆಯ ಮೂಲಕ ಚಂದಾ ಎತ್ತಿ (Crowdsourcing) ಅವಳ ಚಿಕಿತ್ಸೆಗಾಗಿ 6 ಲಕ್ಷ ರೂಪಾಯಿಗಳನ್ನು ಒಟ್ಟುಗೂಡಿಸುವಲ್ಲಿ ಯಶಸ್ವಿಯಾದರು. ಕಾಕ್ಲಿಯರ್ ಜೋಡಣೆಯಾಗಿ ಒಂದು ವರ್ಷದ ನಂತರ, ಇಂದು ರಮಾ, ಅವಳ ಹೆಸರು ಹೇಳಿ ಕರೆದರೆ ಸ್ಪಂದಿಸುತ್ತಾಳೆ, ಕೆಲವು ಪದಗಳನ್ನು ಉಚ್ಚರಿಸುತ್ತಾಳೆ ಹಾಗೂ ತನ್ನ ಸುತ್ತಲಿನ ಪರಿಸರವನ್ನು ಹೆಚ್ಚು ಅರ್ಥಮಾಡಿಕೊಳ್ಳಲು ಆರಂಭಿಸಿದ್ದಾಳೆ. ನಿಯತ ವಾಕ್ ಚಿಕಿತ್ಸೆಯಿಂದಾಗಿ (Speech therapy routines) ಅವಳಿಗೆ ಶಬ್ದಗಳನ್ನು ಸ್ಪಷ್ಟವಾಗಿ ಉಚ್ಚರಿಸಲು ಸಾಧ್ಯವಾಗಿದೆ ಎಂದು ಅವಳ ಶಿಕ್ಷಕರು ಹೇಳುತ್ತಾರೆ. ಆದರೆ ಈ ಕಠಿಣ ದಿನಚರಿಯನ್ನು ನಿರಂತರವಾಗಿ ಪಾಲಿಸುವುದು ಮತ್ತು ಮನೆಯಲ್ಲಿಯೂ ಕೂಡ ಅವಳು ಮೌಖಿಕ ಭಾಷೆಯ (Verbal Language) ಸಮೃದ್ಧತೆಗೆ ತೆರೆದುಕೊಳ್ಳುವಂತೆ ಮಾಡುವುದು ತಮ್ಮೆದುರಿಗಿರುವ ಸವಾಲು ಎಂಬುದು ಅವರ ಅಭಿಪ್ರಾಯ.

**ಪ್ರಕರಣ –2**

ಈಗ 24 ವರ್ಷದ ಆಶಾಳ ಕುರಿತು. ಈಕೆ ವಡೋದರಾ ನಗರದ ಹೊರವಲಯದಲ್ಲಿನ ಹಳ್ಳಿಯೊಂದರಲ್ಲಿ ವಾಸಿಸುತ್ತಿರುವ ಕೃಷಿ–ಕುಟುಂಬದ ನಾಲ್ವರು ಮಕ್ಕಳಲ್ಲಿ ಎಲ್ಲರಿಗಿಂತ ಹಿರಿಯವಳು. 2004ರಲ್ಲಿ ನಾನು ಅವಳನ್ನು ಮೊದಲ ಬಾರಿಗೆ ನೋಡಿದಾಗ 9 ವರ್ಷದ ಹುಡುಗಿಯಾಗಿದ್ದಳು. ತೊಟ್ಟಿಲಲ್ಲಿ ಮಲಗಿಯೇ ಇದ್ದ, ಹೆಚ್ಚೆಂದರೆ ಒಂದೂವರೆ ಅಡಿಯಷ್ಟು ಎತ್ತರವಿದ್ದ, ಇಡೀ ದಿನಕ್ಕೆ ಅರ್ಧ ಚಪಾತಿಯಷ್ಟು ಆಹಾರವನ್ನು ಮಾತ್ರ ಸೇವಿಸುತ್ತಿದ್ದ, ತನ್ನ ಸುತ್ತಲೂ ನೊಣಗಳು ಮುತ್ತಿಕೊಂಡಿದ್ದು ನಾಲಿಗೆ ಮುಂಚಾಚಿಕೊಂಡಿದ್ದ ಅವಳನ್ನು ಮನೆಯ ಸದಸ್ಯರು 'ಹುಚ್ಚಿ' (Mentally retarded–ಬುದ್ಧಿಮಾಂದ್ಯ) ಎಂದು ಪರಿಗಣಿಸಲ್ಪಟ್ಟಿದ್ದಳು. ಅವಳಿಗೆ ಸದ್ದನ್ನು ಹೊರಡಿಸಲು, ಜನರನ್ನು ಗುರುತಿಸಲು ಸಾಧ್ಯವಾಗುತ್ತಿತ್ತು, ಸುತ್ತಮುತ್ತಲಿನ ಆಗು ಹೋಗುಗಳ ಅರಿವಿತ್ತು. ಆದರೆ ಯಾವುದೇ ದೈಹಿಕ ಚಟುವಟಿಕೆಗಳನ್ನು ಮಾಡಲು ಆಗುತ್ತಿರಲಿಲ್ಲ. ಸಾಮಾಜಿಕ ಸುರಕ್ಷಾ ಇಲಾಖೆಯ ಕಾರ್ಯಗಳು ಹಾಗೂ ಬಡವರು ಮತ್ತು ಮಕ್ಕಳಿಗಾಗಿ ಇರುವ ಇನ್ನಿತರ ಕಲ್ಯಾಣ ಸೇವಾ ಸೌಲಭ್ಯಗಳನ್ನು ಅಧ್ಯಯನ ಮಾಡಿದ ನಾನು, ಅವಳಿಗೆ ಮಾಸಿಕ ರೂ.200 ಪರಿಹಾರ ಧನವು ಲಭ್ಯವಾಗಬೇಕು ಎಂದುಕೊಂಡೆ. ಅವಳನ್ನು ಸಾಮಾಜಿಕ ಸುರಕ್ಷಾ ಕಚೇರಿಗೆ ಕರೆದೊಯ್ಯುವಂತೆ ಅವಳ ಅಜ್ಜಿಯ ಮನವೊಲಿಸಿದೆ. ಪರಿಹಾರವನ್ನು ಪಡೆಯುವುದಕ್ಕಾಗಿ ಅವಳಿಗೆ ಗಂಭೀರ ಸ್ವರೂಪದ ವೈಕಲ್ಯವಿರುವುದನ್ನು ದೃಢೀಕರಿಸುವ ಪ್ರಮಾಣಪತ್ರವೊಂದನ್ನು ವೈದ್ಯರಿಂದ ಪಡೆಯಬೇಕಾಗಿತ್ತು. ಈ ಪ್ರಮಾಣ ಪತ್ರವನ್ನು ಪಡೆಯುವ ಉದ್ದೇಶದಿಂದ ಮನಶ್ಶಾಸ್ತ್ರಜ್ಞರು ಮತ್ತು ಆ ಬಳಿಕ ಸಾರ್ವಜನಿಕ ಆಸ್ಪತ್ರೆಯೊಂದರಲ್ಲಿ ಮಕ್ಕಳ ವೈದ್ಯರೊಬ್ಬರ ಆಕಸ್ಮಿಕ ಭೇಟಿಯು ಆಶಾಳಿಗೆ ಸಂಪೂರ್ಣ ಹೊಸ ಜೀವನವನ್ನೇ ದಯಪಾಲಿಸಿತು. ಅವಳು ಕ್ರೆಟಿನಿಸಂ (Cretinism) ಎಂಬ ತೀವ್ರಸ್ವರೂಪದ ತೊಂದರೆಯಿಂದ ಬಳಲುತ್ತಿದ್ದಾಳೆ ಎಂಬುದು ತಿಳಿದುಬಂದಿತು. ಇದರಲ್ಲಿ ಅಯೋಡಿನ್ ಕೊರತೆಯ ಲಕ್ಷಣಗಳು ಜನ್ಮಜಾತವಾಗಿರುತ್ತವೆ (Congenital Hypothyroidism). 'ಅಯೋಡಿನ್ ರಸದೂತಗಳ ಜನ್ಮಜಾತ ಕೊರತೆ'ಯ ಸಮಸ್ಯೆಗೆ (Congenital iodine deficiency syndrome) ಚಿಕಿತ್ಸೆ ದೊರಕಿರದ ಕಾರಣ ಮಗುವಿನ ದೈಹಿಕ ಮತ್ತು ಮಾನಸಿಕ ಬೆಳವಣಿಗೆಗಳು ತೀವ್ರ ಸ್ವರೂಪದಲ್ಲಿ ಕುಂಠಿತಗೊಂಡಿರುತ್ತವೆ. ಇದು ಸಾಧಾರಣವಾಗಿ ತಾಯಿಯಲ್ಲಿರುವ ಹೈಪೋಥೈರಾಡಿಸಂನಿಂದಲೇ (Maternal hypothyroidism) ಉಂಟಾಗಿರುತ್ತದೆ.

ಅವಳ ಪ್ರಕರಣವು ಕಣ್ಣುತೆರೆಸುವಂತಹದ್ದಾಗಿದ್ದು, ಸ್ಥಳೀಯ ವೈದ್ಯಕೀಯ ಮಹಾವಿದ್ಯಾಲಯವು ಈ ಕುರಿತು ಅಧ್ಯಯನ ಕೈಗೊಳ್ಳಲು ಕಾರಣವಾಯಿತು. ದೀರ್ಘವಾದ ಕತೆಯನ್ನು ಚುಟುಕಾಗಿ ಹೇಳಬೇಕೆಂದರೆ, 10 ಮಿ.ಗ್ರಾಂ. ಥೈರಾಯಿಡನ್ನು ನೀಡುವಂತಹ ಚಿಕಿತ್ಸೆಯು ಅವಳ ಚಯಾಪಚಯ ಕ್ರಿಯೆ, ಹಸಿವು ಹಾಗೂ ಬೆಳವಣಿಗೆಯ ಹಂತಗಳಲ್ಲಿ ಗಮನಾರ್ಹ ಬದಲಾವಣೆಗಳನ್ನು ತಂದಿತು. ಆಶಾ ಎತ್ತರಕ್ಕೆ ಬೆಳೆದಳು. ಮಾತನಾಡಲು ಆರಂಭಿಸಿದಳು. ಅವಳ ಭಾಷೆಯೂ ಬೆಳೆಯಿತು. ಕಾಲಕ್ರಮೇಣ ಅವಳು ತನ್ನ ಕಾಳಜಿಯನ್ನು ತಾನೇ ತೆಗೆದುಕೊಳ್ಳುವಷ್ಟು ಸ್ವತಂತ್ರಳಾದಳು. 13ನೆಯ ವಯಸ್ಸಿನಲ್ಲಿ, 4 ವರ್ಷದ ತನ್ನ ತಮ್ಮನೊಡನೆ ಅಂಗನವಾಡಿ ಕೇಂದ್ರಕ್ಕೆ ಹೋಗಲು ಆರಂಭಿಸಿದಳು. ಈಗ ಅವಳು ಬಹುಶಃ ಶಾಲಾ ಶಿಕ್ಷಣವನ್ನು ಪೂರ್ಣಗೊಳಿಸಿ, ವಯಸ್ಕಳಾಗಿ ಸ್ವತಂತ್ರ ಬದುಕನ್ನು ಬದುಕುತ್ತಿರಬೇಕು.

ಹನ್ನೊಂದು ವರ್ಷಗಳ ಕಾಲ ಆಶಾ, 'ಗುರುತಿಸುವಿಕೆಯ' (Identification) ಭಾರೀ ಕೊರತೆಯಿಂದಾಗಿ ಅವಳಂತೆಯೇ ನಲುಗುವ ಇನ್ನಿತರ ಪ್ರಕರಣಗಳ ಹಾಗೆ ಮೂಲಭೂತ ಅಗತ್ಯಗಳಾದ ಆರೋಗ್ಯಸೇವೆ, ಪೌಷ್ಟಿಕಾಂಶ, ಪ್ರೋತ್ಸಾಹ, ಬೆಂಬಲಗಳಿಂದ ವಂಚಿತಳಾಗಿದ್ದಳು. ಸನಿಹದಲ್ಲಿಯೇ ಶಾಲೆ, ಅಂಗನವಾಡಿ ಕೇಂದ್ರ ಮತ್ತು ಗ್ರಾಮೀಣ ಆರೋಗ್ಯ ಕೇಂದ್ರಗಳು ಇದ್ದಾಗಲೂ ಹೀಗಾಯಿತು. ಅಂದಹಾಗೆ, ಅವಳು ಬದುಕಿ ಉಳಿದಳು ಎನ್ನುವುದೇ ನನಗೆ ಮುಖ್ಯವಾದ ಸಂಗತಿಯಾಗಿತ್ತು!

ಆಶಾಳ ಕತೆಯು ಇಂತಹ ಅದೆಷ್ಟೋ ಕತೆಗಳಲ್ಲಿ ಕೇವಲ ಒಂದು ಅಷ್ಟೇ. ಆಶಾಳ ಪ್ರಕರಣವು ಹನ್ನೊಂದು ವರ್ಷಗಳಷ್ಟು ಹಳೆಯದಾದರೂ, ಈಗಲೂ ನನಗೆ ಆರೋಗ್ಯವಂತ ಮಗುವೊಂದರ ಬೆಳವಣಿಗೆಯಲ್ಲಿ ಪರಿಣಾಮ ಬೀರುವ ಅದರ ಸುತ್ತಲಿನ ಪರಿಸರದ ಅನೇಕಾನೇಕ ಅಂಶಗಳ ಬಗ್ಗೆ ಬೆರಗಾಗುತ್ತದೆ. ಆಶಾಳ ಸೂಕ್ಷ್ಮ–ಪರಿಸರದಲ್ಲಿದ್ದ ಪ್ರಮುಖ ವ್ಯಕ್ತಿಗಳು ಅವಳ ಅಜ್ಜಿ, ತಂದೆ ತಾಯಿ ಹಾಗೂ ಸಮುದಾಯ ಅವಳು ಬದುಕುಳಿಯುವಂತೆ ನೋಡಿಕೊಂಡಿದ್ದರು. ತಮಗೆ ಸಾಧ್ಯವಾದಷ್ಟು ಕಾಳಜಿ ವಹಿಸಿದ್ದರು. ಅವಳು ಗುಣಮುಖಳಾಗುವ ಸಾಧ್ಯತೆಯಿದೆ ಎಂದು ತಿಳಿದಾಗ ಅದಕ್ಕೆ ಪೂರ್ವಭಾವಿಯಾಗಿ ಆರೋಗ್ಯ ವೃತ್ತಿಯಲ್ಲಿರು–ವವರಿಂದ ಮಾರ್ಗದರ್ಶನ ಪಡೆದರು. ಅವಳು ಅಂಗನವಾಡಿ ಕೇಂದ್ರ ಮತ್ತು ಶಾಲೆಗೆ ಹೋಗುವಂತೆ ಹಾಗೂ ಸ್ವತಂತ್ರವಾಗಿ ತನ್ನ ಬದುಕನ್ನು ತಾನು ನಿಭಾಯಿಸುವಂತೆ, ಸಾಮಾಜಿಕ ತರಬೇತಿಯನ್ನೂ ಪಡೆಯುವಂತೆ ನೋಡಿಕೊಂಡರು. ಮೇಲಿನ ಎರಡೂ ಉದಾಹರಣೆಗಳು, ಮಗುವೊಂದರ ಆರೋಗ್ಯಪೂರ್ಣ ಬಾಲ್ಯಕ್ಕೆ ಅದರ ಅತ್ಯಂತ ಹತ್ತಿರದ ಪರಿಸರದ ಪ್ರಭಾವ ತುಂಬಾ ಮಹತ್ವ ಪೂರ್ಣವಾದುದು ಎಂಬುದನ್ನು ಪ್ರತಿಬಿಂಬಿಸುತ್ತವೆ. ಮಕ್ಕಳು ಗರಿಷ್ಠ ಬೆಳವಣಿಗೆ ಮತ್ತು ಪ್ರಗತಿಯನ್ನು ಹೊಂದುವ ಹಾಗೆ ಅವರಿಗೆ ನೆರವಾಗುವುದು ಪಾಲಕರ ಮತ್ತು ಶಿಕ್ಷಕರ ಅತ್ಯಂತ ಪ್ರಮುಖ ಜವಾಬ್ದಾರಿಯಾಗಿದೆ. ಎಲ್ಲಾ ವಯಸ್ಸಿನ ಹಾಗೂ ತರಗತಿಯ ಮಕ್ಕಳ, ವಿಶೇಷವಾಗಿ ಬಾಲ್ಯದ ಆರಂಭಿಕ ವರ್ಷಗಳಲ್ಲಿರುವ ಮಕ್ಕಳ ಒಟ್ಟಾರೆ ಆರೋಗ್ಯ ಹಾಗೂ ಸ್ವಾಸ್ಥ್ಯವು ಚೆನ್ನಾಗಿರುವಂತೆ ನೋಡಿ–ಕೊಳ್ಳುವುದರಲ್ಲಿ ಶಿಕ್ಷಕರ ಪಾತ್ರವು ಮಹತ್ತರವಾದುದು. ಆರಂಭಿಕ ವರ್ಷಗಳಲ್ಲಿ ಮಕ್ಕಳಿಗೆ ಶಿಕ್ಷಣವೆಂದರೆ, ಅವರ ಸಮಗ್ರ ಬೆಳವಣಿಗೆ–ಯಾಗುವಂತೆ ನೋಡಿಕೊಳ್ಳುವುದು. ಪ್ರತಿಯೊಂದು ಮಗುವೂ ಅನನ್ಯವಾದ ಗತಿಯಲ್ಲಿ ಬೆಳವಣಿಗೆ ಹೊಂದುವುದರಿಂದ ಮತ್ತು ವ್ಯಕ್ತಿವಿಶಿಷ್ಟ ಭಿನ್ನತೆಗಳು ಇರುವುದರಿಂದ ಯಾವುದೇ ಮಗುವಿನ ಬೆಳವಣಿಗೆಯಲ್ಲಿ ವಿಳಂಬಗತಿ ಅಥವಾ ಬೆಳವಣಿಗೆಯ ಯಾವುದೇ ಕ್ಷೇತ್ರದಲ್ಲಿ ಸಾಧಾರಣವಲ್ಲದ ವರ್ತನೆ ಕಂಡುಬಂದಲ್ಲಿ ಅದನ್ನು ಗಮನಿಸಿ, ಸಕಾಲಿಕ ನೆರವು ದೊರೆಯುವಂತೆ ಮಾಡಲು ತಜ್ಞರ ಸಲಹೆಯನ್ನು ಪಡೆಯುವುದು ಅತ್ಯಂತ ಮುಖ್ಯವಾಗಿದೆ. ಇವು ಸೂಕ್ಷ್ಮ, ಚಿಂತನಶೀಲ ಹಾಗೂ ಎಲ್ಲರನ್ನೂ ಒಳಗೊಂಡು ಮುನ್ನಡೆಸುವಂತಹ ಶಿಕ್ಷಕ/ಕಿ ತೆಗೆದುಕೊಳ್ಳಬಹುದಾದ ಕ್ರಮಗಳು

**ನಿಮ್ಮ ವಿದ್ಯಾರ್ಥಿಗಳನ್ನು ಅರಿಯಿರಿ**

ಮನೆಯ ನಂತರದಲ್ಲಿ ಮಕ್ಕಳು ಗರಿಷ್ಠ ಸಮಯವನ್ನು ಕಳೆಯುವುದು ಶಾಲೆಯಲ್ಲಿಯೇ. ಮಗುವಿಗೆ ಯಾವುದಾದರೂ ತೀವ್ರ ಕಾಯಿಲೆ/ ಕಾಯಿಲೆಗಳು ಇತ್ತೇ ಅಥವಾ ಇದ್ದವೇ, ಹುಟ್ಟಿನಿಂದಲೂ ಅದು ಯಾವುದಾದರೂ ಸಮಸ್ಯೆಯಿಂದ ಬಳಲುತ್ತಿದೆಯೇ ಮತ್ತು ಶಾಲೆಯಿಂದ ಹೊರಗೆ ಮಗುವಿನ ಬದುಕಿನಲ್ಲಿ ಏನಾದರೂ ಪದೇಪದೇ ಸಂಭವಿಸುತ್ತಿದೆಯೇ ಎಂಬುದನ್ನು ತಿಳಿಯಲು ಒಬ್ಬ ಶಿಕ್ಷಕನಾ(ಳಾ)ಗಿ, ಪ್ರತಿಯೊಂದು ಮಗುವಿನ ಹಿನ್ನೆಲೆ ಮತ್ತು ವೈದ್ಯಕೀಯ / ಚಿಕಿತ್ಸೆಯ ಮಾಹಿತಿಯನ್ನು ಅರಿತಿರುವುದು ತುಂಬಾ ಮುಖ್ಯವಾಗುತ್ತದೆ. ಚಿಕ್ಕ ಮಕ್ಕಳ ಶಿಕ್ಷಕರಾಗಿ, ಮಗುವಿನ ಕೌಟುಂಬಿಕ ಹಿನ್ನೆಲೆ, ಪಾಲಕರ ಉದ್ಯೋಗ, ಮನೆಯಲ್ಲಿ ಅವರು ಮಕ್ಕಳೊಂದಿಗೆ ಎಷ್ಟು ಸಮಯವನ್ನು, ಯಾವ ರೀತಿಯಲ್ಲಿ ಕಳೆಯುತ್ತಾರೆ, ಶಾಲೆಯ ನಂತರ ಮಗುವಿನ ನಿತ್ಯದ ಚಟುವಟಿಕೆಗಳೇನು ಮುಂತಾದ ಮಾಹಿತಿಗಳನ್ನು ಕೂಡ ಹೊಂದಿರಬೇಕಾದುದು ಅತಿ ಮುಖ್ಯ. 30–40 ಮಕ್ಕಳಿರುವ ಪ್ರತಿಯೊಂದು ತರಗತಿಯಲ್ಲಿ ಇದೊಂದು ಸವಾಲಾಗಿ ಕಾಣಿಸಬಹುದು. ಆದರೆ ಮಗು ಮತ್ತು ಅದರ ಕುಟುಂಬದ ಕುರಿತಾದ ಮಾಹಿತಿಯು ಮಗುವಿನ ದಿನನಿತ್ಯದ ವರ್ತನೆ ಮತ್ತು ಪ್ರಗತಿಯನ್ನು ಗ್ರಹಿಸಲು, ಅರ್ಥಮಾಡಿಕೊಳ್ಳಲು ಶಿಕ್ಷಕರಿಗೆ ನೆರವಾಗುತ್ತದೆ. ಇಂತಹ ವೈದ್ಯಕೀಯ ಮಾಹಿತಿಗಳು ಶಿಕ್ಷಕರಿಗಿದ್ದರೆ ಅಸಹಜ, ತುರ್ತು ಕಾಳಜಿ ನೀಡಬೇಕಾದ ಯಾವುದೇ ಲಕ್ಷಣಗಳು ಮಗುವಿನಲ್ಲಿ ಕಂಡುಬಂದರೆ ಅದನ್ನು ಗುರುತಿಸಲು ಸಹಾಯವಾಗುತ್ತದೆ.

**ಗಮನಿಸುವುದು**

ಶಿಕ್ಷಕರಾಗಿ, ತರಗತಿಯಲ್ಲಿ ನಡೆಸಲಾಗುವ ವಿವಿಧ ಚಟುವಟಿಕೆಗಳ ಮೂಲಕ ಪ್ರತಿಯೊಂದು ಮಗುವನ್ನೂ ಗಮನಿಸುವುದು ಬೋಧನೆ–ಕಲಿಕೆಯ ಪ್ರಕ್ರಿಯೆಯಲ್ಲಿ ಅತ್ಯಂತ ಮುಖ್ಯವಾದ ಪರಿಪಾಠ. ಅವಲೋಕನದ ಅವಧಿಯಲ್ಲಿ, ಮಗುವಿಗಿರುವ, ಕಲಿಸಿದ ನಿರ್ದಿಷ್ಟ 'ವಿಷಯವಸ್ತು'ವಿಗೆ ಸ್ಪಂದಿಸುವ ಶಕ್ತಿ ಮತ್ತು ಶೈಕ್ಷಣಿಕ ಸಾಮರ್ಥ್ಯದ ಹೊರತಾಗಿ, ಅದರ ಮನಸ್ಥಿತಿ, ವಿವಿಧ ಚಟುವಟಿಕೆಗಳ ಮೇಲೆ ಗಮನವನ್ನು ಕೇಂದ್ರೀಕರಿಸುವ, ಸೂಚನೆಗಳನ್ನು ಅನುಸರಿಸುವ, ಎಲ್ಲರೊಂದಿಗೆ ಬೆರೆಯುವ ಮತ್ತು ಕಣ್ಣಲ್ಲಿ ಕಣ್ಣಿಟ್ಟು ನೋಡುವ, ತನ್ನ ಕೋಪತಾಪಗಳನ್ನು, ಅನೈಚ್ಛಿಕ ಚಲನೆಗಳನ್ನು (Involuntary Movements) ನಿಭಾಯಿಸುವ, ಕೆಲವು ಪುನರಾವರ್ತನೆಗಳೊಂದಿಗೆ ಗ್ರಹಿಸುವ, ತನ್ನ ಸುತ್ತಲಿನ ಅಂಶಗಳನ್ನು ಅರ್ಥಮಾಡಿಕೊಳ್ಳುವ, (Perceive spatial aspects) ಭಾಷೆ ಮತ್ತು ತಾರ್ಕಿಕತೆಯ ಸಾಮರ್ಥ್ಯ ಮೊದಲಾದ ಕೆಲವು ಅಂಶಗಳು ಮಗುವಿನ ಸಮಗ್ರ ಬೆಳವಣಿಗೆಯ ಬಹುಮುಖ್ಯ ಸೂಚಕಗಳಾಗುತ್ತವೆ.

ಬೆಳವಣಿಗೆಯ ಹಂತಗಳ ಬಗ್ಗೆ ಒಳನೋಟವನ್ನು ಪಡೆದು–ಕೊಳ್ಳುವುದು

ಮಕ್ಕಳೊಂದಿಗೆ ಕೆಲಸ ಮಾಡಿ ಸಾಕಷ್ಟು ಅನುಭವವಿರುವ ಹಾಗೂ ಶಿಕ್ಷಣದ ಸಿದ್ಧಾಂತಗಳ ಜ್ಞಾನವನ್ನು ಹೊಂದಿರುವ ಶಿಕ್ಷಕರು, ವಿಭಿನ್ನ

ವಯೋಗುಂಪುಗಳಲ್ಲಿರುವ–ಕನಿಷ್ಠಪಕ್ಷ ಒಂದೆರಡು ವರ್ಷಗಳ ಕಾಲ ತಾನು ಪಾಠಮಾಡಿದ ತರಗತಿಗಳಲ್ಲಿನ ಮಕ್ಕಳ ಬೆಳವಣಿಗೆಯ ಹಂತಗಳನ್ನು ಚೆನ್ನಾಗಿ ತಿಳಿದಿರಬಲ್ಲರು. ಹೀಗೆ ವಿಕಾಸಾತ್ಮಕ ಅಭಿವೃದ್ಧಿ ಮತ್ತು ದೈಹಿಕ, ಪರಿಕಲ್ಪನಾತ್ಮಕ ಹಾಗೂ ಸಾಮಾಜಿಕವಾಗಿ ತೊಡಗಿಕೊಳ್ಳುವಂಥ ವಿವಿಧ ಚಟುವಟಿಕೆಗಳಲ್ಲಿ ಮಕ್ಕಳು ಹೊಂದಿರುವ ಕಾರ್ಯಸಾಮರ್ಥ್ಯವನ್ನು ಅರಿತು–ಕೊಳ್ಳುವುದರಿಂದ, ಯಾವುದೇ ಮಗುವಿನಲ್ಲಿ ಕಂಡುಬರುವ ಸಾಮಾನ್ಯ ರೀತಿಗೆ ಹೊರತಾದ, ಸಕಾರಾತ್ಮಕವಾದ ಮತ್ತು ಸುಧಾರಿತ ಬೆಳವಣಿಗೆಯನ್ನು ಅಥವಾ ವಿಳಂಬವನ್ನು ಗ್ರಹಿಸಿ, ಅರ್ಥಮಾಡಿಕೊಳ್ಳಲು ಶಿಕ್ಷಕರಿಗೆ ಸಾಧ್ಯವಾಗುತ್ತದೆ. ಮಗುವಿನಲ್ಲಿ ಸತತವಾಗಿ ಕಾಣಿಸಿಕೊಳ್ಳುವ, ಸಾಮಾನ್ಯವಲ್ಲದ ಯಾವುದೇ ರೀತಿ–ವಿಧಾನವನ್ನು ಗಮನಿಸಲು, ಅದರ ವ್ಯಕ್ತಿಗತ ಬೆಳವಣಿಗೆಯನ್ನು ಹೀಗೆ ಸೂಕ್ಷ್ಮವಾಗಿ ಅರ್ಥಮಾಡಿಕೊಳ್ಳುವುದು ಶಿಕ್ಷಕರಿಗೆ ಅತ್ಯಂತ ಮುಖ್ಯ.

**ದಾಖಲಿಸುವುದು**

ಅವಲೋಕನದ ನಂತರದ ಮುಖ್ಯ ಹೆಜ್ಜೆಯೆಂದರೆ, ಮಕ್ಕಳು ಶಾಲೆಯಲ್ಲಿ ಕೈಗೊಂಡ ಕಾರ್ಯಚಟುವಟಿಕೆಗಳನ್ನು ದಾಖಲಿಸುವುದು. ಉದಾಹರಣೆಗೆ, ಮಗುವಿನ ದಿನಚರಿಯಲ್ಲಿ ಶಿಕ್ಷಕರು ಗಮನಿಸಿದ ನಿರ್ದಿಷ್ಟ ಸಂಗತಿಗಳನ್ನು ದೃಷ್ಟಾಂತದ ರೂಪದಲ್ಲಿ ದಾಖಲಿಸುವುದನ್ನು (Anecdotal Records) ಉಪಯುಕ್ತ ವಿಧಾನವೆಂದು ಪರಿಗಣಿಸಲಾಗಿದೆ. ಶಿಕ್ಷಕರ ದೈನಂದಿನ ಅವಲೋಕನದ ಅಥವಾ ವಿಶೇಷವಾಗಿ ಘಟಿಸಿದ ಸಂಗತಿಗಳ ಕುರಿತಾದ ನಿಯಮಿತ ಟಿಪ್ಪಣಿಗಳು ಮಗುವಿಗಿರಬಹುದಾದ ತೊಂದರೆಗಳತ್ತ ಗಮನವನ್ನು ಬೀರುವಂತೆ ಮಾಡಬಹುದು. ಉದಾಹರಣೆಗೆ, ಮಗು ಸತತವಾಗಿ ಕಣ್ಣಿಗೆ ಕಣ್ಣಿಟ್ಟು ನೋಡುವುದನ್ನು ತಪ್ಪಿಸುವುದು, ಅನೈಚ್ಛಿಕ, ಅಸಹಜ ಚಲನೆಗಳನ್ನು ಪುರಾವರ್ತಿಸುವುದು (Repeated involuntary Movements) ಅಥವಾ ಮಗುವಿನ ಲಿಖಿತ ಪಠ್ಯದಲ್ಲಿನ ವಿನ್ಯಾಸಗಳು ಡಿಸ್ಲೆಕ್ಸಿಯಾ ತೊಂದರೆಯ ಸೂಚನೆಯನ್ನು ನೀಡಬಹುದು. ಬೆಳವಣಿಗೆಯ ಪರಿಶೀಲನಾ ಪಟ್ಟಿ (Checklist), ಪ್ರತಿಯೊಂದು ಮಗುವಿನ ಕಾರ್ಯ ಚಟುವಟಿಕೆಯನ್ನೂ ಒಳಗೊಂಡ ಖಾತೆವಿವರ ಮುಂತಾದ ದಾಖಲೆಯ ಇನ್ನಿತರ ಸ್ವರೂಪಗಳು ಕೂಡ ಮಗುವಿನ ಬೆಳವಣಿಗೆ ಮತ್ತು ಪ್ರಗತಿಯಲ್ಲಿನ ವಿನ್ಯಾಸಗತಿಗಳನ್ನು ನೋಡಲು ಉಪಯುಕ್ತ ಪುರಾವೆಗಳಾಗಿವೆ.

**ಹಂಚಿಕೊಳ್ಳುವುದು ಮತ್ತು ಪಾಲುದಾರರಾಗುವುದು**

ಶಿಕ್ಷಕರ ವೈಯಕ್ತಿಕ ಅವಲೋಕನವು, ಮಗುವಿನ ಸಾಮರ್ಥ್ಯ, ಬೆಳವಣಿಗೆಯ ಶ್ರೇಣಿಯಲ್ಲಿನ ಯಾವ ಯಾವ ಅಂಶಗಳಲ್ಲಿ ಹೇಗಿದೆ ಎನ್ನುವುದನ್ನು ಗುರುತಿಸಲು ಆರಂಭ ಬಿಂದುವಾಗಿರುತ್ತದೆ. ಒಬ್ಬ ಶಿಕ್ಷಕರು ಏನನ್ನು ಗಮನಿಸಿದ್ದಾರೋ ಅದು ಆ ಸಂದರ್ಭಕ್ಕಷ್ಟೇ ವಿಶಿಷ್ಟವಾಗಿರುವ ಸಾಧ್ಯತೆ ಯಾವಾಗಲೂ ಇದೆ. ಮಗುವು ಸತತವಾಗಿ ಅದೇ ಮಾದರಿಯನ್ನು ಪ್ರದರ್ಶಿಸುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಶಿಕ್ಷಕರು ತಾವೊಬ್ಬರೇ ಕೈಗೊಂಡ ಮಕ್ಕಳ ಕುರಿತಾದ ಅವಲೋಕನವನ್ನು, ಅಂದರೆ ಗಮನಕ್ಕೆ ಬಂದ ನಿರ್ದಿಷ್ಟ ಅಂಶಗಳು, ಕಾಳಜಿಯ ಸಂಗತಿಗಳು ಅಥವಾ ಧನಾತ್ಮಕ ಅಂಶಗಳನ್ನು ಇತರ ಶಿಕ್ಷಕರು ಅಥವಾ ಶಿಕ್ಷಕರ ಗುಂಪಿನೊಂದಿಗೆ ಹಂಚಿಕೊಳ್ಳುವುದರಿಂದ ಇತರ ಸಂದರ್ಭಗಳಿಗೆ ಅನುಗುಣವಾಗುವಂತೆ ಅದಾಗಲೇ ಗಮನಿಸಲಾದ ವರ್ತನೆಯನ್ನು ದೃಢೀಕರಿಸಲು ನೆರವಾಗುತ್ತದೆ. ಘಟನೆಯೊಂದಕ್ಕೆ ಮಗುವಿನ ಪ್ರತಿಕ್ರಿಯೆಯನ್ನು ಅಥವಾ ಮಗುವಿನ ವಿವಿಧ ವಿಷಯ ಹಂತಗಳ ಬೆಳವಣಿಗೆಯ ವಿನ್ಯಾಸಗಳನ್ನು ಸಾಮೂಹಿಕವಾಗಿ ಅರ್ಥಮಾಡಿಕೊಳ್ಳುವುದು ಶಿಕ್ಷಕರ ಗುಂಪಿಗೆ ವಿವಿಧ ಹಂತಗಳಲ್ಲಿ ಉಪಯುಕ್ತವಾಗಿರುತ್ತದೆ :

ಮಗುವಿನ ಸ್ಥಿತಿಯನ್ನು ನಿಖರವಾಗಿ ತೀರ್ಮಾನಿಸಲು (ಇದು ತಾತ್ಕಾಲಿಕ ವಿದ್ಯಮಾನವೇ ಅಥವಾ ತುರ್ತು ಗಮನವನ್ನು ನೀಡಬೇಕಾದಂತಹುದೇ).

ಮಗುವಿಗೆ ತಮ್ಮದೇ ಮಟ್ಟದಲ್ಲಿ ನೆರವಾಗಲು ಸಹಯೋಗ ನೀಡುವುದು. ಉದಾಹರಣೆಗೆ, ಶೈಕ್ಷಣಿಕ ನೆರವು, ಮಕ್ಕಳು ಹೇಳುವುದನ್ನು ಆಲಿಸುವುದು, ವ್ಯಕ್ತಿನಿರ್ದಿಷ್ಟ ಕಾರ್ಯಕ್ರಮಗಳು ಮತ್ತು ವಿಭಿನ್ನ ಬೋಧನಾ ವಿಧಾನವನ್ನು ಯೋಜಿಸುವುದು.

ಮನೆಯಲ್ಲಿ ಸತತವಾಗಿ ಕಂಡುಬಂದ ಯಾವುದೇ ವರ್ತನೆ, ಮಾದರಿಯ ಕುರಿತಾಗಿ ಪಾಲಕರೊಂದಿಗೆ ಚರ್ಚಿಸುವುದು. ಮುಂದೆ ಯಾವುದಾದರೂ ಕ್ರಮಗಳನ್ನು ಕೈಗೊಳ್ಳುವ ಅಗತ್ಯವಿದೆ ಎಂದಾದರೆ, ಅವುಗಳನ್ನು ಎಲ್ಲಿ ಹೇಗೆ ಕೈಗೊಳ್ಳಬೇಕು ಎಂಬುದನ್ನು ನಿರ್ಧರಿಸುವುದು.

ವೈಕಲ್ಯಕ್ಕೆ ಸಂಬಂಧಿಸಿದಂತೆ ಯಾವುದೇ ತರಹದ ಕೆಲಸವನ್ನು ಕೈಗೊಳ್ಳುವುದಾದರೂ ಅದು ಸಾಮೂಹಿಕ ಪ್ರಯತ್ನವಾಗಿರಬೇಕು. ಒಂದು ನಿರ್ದಿಷ್ಟ ಹಂತದ ನಂತರ ಪಾಲಕರು ಮತ್ತು ಶಿಕ್ಷಕರು ತಮ್ಮ ವೈಯಕ್ತಿಕ ಮಟ್ಟದಲ್ಲಿ ಮಾಡುವ ಕೆಲಸಗಳು ಪರಿಣಾಮಕಾರಿ–ಯಾಗದೇ ಇರುವ ಸಾಧ್ಯತೆಯಿದೆ. ಮಗುವಿನ ವರ್ತನೆ, ಕಾರ್ಯಕ್ಷಮತೆ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಯಾವುದೇ ಗಂಭೀರ ತೊಂದರೆ ಇರುವುದು ಗುರುತಿಸಲ್ಪಟ್ಟ ಮೇಲೆ ಮಗುವಿಗೆ ನೆರವಾಗುವ ನಿಟ್ಟಿನಲ್ಲಿ ಪಾಲಕರು ಮತ್ತು ಶಿಕ್ಷಕರು ಒಟ್ಟಾಗಿ ಕೆಲಸ ಮಾಡುವುದು ಅತ್ಯಂತ ಮುಖ್ಯವಾಗುತ್ತದೆ. ಜೊತೆಗೆ, ಮಗುವಿಗೆ ಚಿಕಿತ್ಸೆ ಅಥವಾ ಥೆರಪಿಯನ್ನು ನೀಡುವ ಶಿಶುವೈದ್ಯರು (Paediatricians), ಫಿಸಿಯೋಥೆರಪಿಸ್ಟ್‌ಗಳು, ವಾಕ್ ಚಿಕಿತ್ಸಕರು ಮತ್ತು ಔದ್ಯೋಗಿಕ ಚಿಕಿತ್ಸಕರು (Speech and occupational therapists), ಹಿರಿಯ ಮಕ್ಕಳಿಗೆ ವೃತ್ತಿ ಶಿಕ್ಷಕರು ಇತ್ಯಾದಿ ವೃತ್ತಿಪರರವರೆಗೂ ಕೂಡ ಈ ಪಾಲುದಾರಿಕೆಯು ವಿಸ್ತರಿಸಿಕೊಳ್ಳ–ಬೇಕಾಗುತ್ತದೆ. ಶಿಕ್ಷಕರ ಗುಂಪಿನ ಸಾಮೂಹಿಕ ಪ್ರಯತ್ನಕ್ಕೆ ರಮಾಳ ಪ್ರಕರಣವು ಒಳ್ಳೆಯ ಉದಾಹರಣೆಯಾಗಿದೆ. ಅವಳ ಶ್ರವಣ ಶಕ್ತಿಯ ನಷ್ಟವನ್ನು ಹೋಗಲಾಡಿಸಲು ನೆರವಾಗುವುದಕ್ಕಾಗಿ ಸಮಸ್ಯೆಯನ್ನು ಗುರುತಿಸುವುದರಿಂದ ಆರಂಭಿಸಿ, ಸಂಬಂಧಿಸಿದ ಎಲ್ಲರೊಡನೆ ಪಾಲುದಾರಿಕೆಯಲ್ಲಿ ಒಟ್ಟಾಗಿ ಕೆಲಸ ಮಾಡಿದ್ದರು.

**ಸಂಪರ್ಕಜಾಲ ಮತ್ತು ಪರಾಮರ್ಶನೆ**

ವೈಕಲ್ಯ ಅಥವಾ ಅದಕ್ಕೆ ಸಂಬಂಧಿಸಿದ ಸಂಗತಿಗಳ ನಿರ್ವಹಣೆಯಲ್ಲಿ ತಜ್ಞರನ್ನು ಸಂಪರ್ಕಿಸುವುದು ಅತ್ಯಂತ ಮುಖ್ಯವಾದದ್ದು. ಮಕ್ಕಳನ್ನು ಗಮನಿಸುವವರಲ್ಲಿ ಅತ್ಯಂತ ನಿಕಟವಾಗಿರುವವರು ಶಿಕ್ಷಕರಾದ್ದರಿಂದ ಪಾಲಕರ ಮೇಲೂ ಅವರ ಪ್ರಭಾವ ತುಂಬಾ ಇರುತ್ತದೆ. ಮಗುವೊಂದಕ್ಕೆ ಅಂತಹ ಅಗತ್ಯ ಬಿದ್ದ ಸಂದರ್ಭದಲ್ಲಿ ನೆರವು ಪಡೆಯಲು ಸಾಧ್ಯವಾಗುವಂತೆ ವೃತ್ತಿಪರರ ಸಂಪರ್ಕ–ಜಾಲವೊಂದನ್ನು ಶಿಕ್ಷಕರು ಮತ್ತು ಶಾಲೆಗಳು ಹೊಂದಿರಬೇಕು. ಈ ಸಂಪರ್ಕಜಾಲವು ವಿವಿಧ ತರಹದ ವೈಕಲ್ಯವನ್ನು ಹೊಂದಿರುವ ಮಕ್ಕಳಿಗೆ ಲಭ್ಯವಿರುವ ಯಾವುದೇ ನಿರ್ದಿಷ್ಟ ಸೌಲಭ್ಯ, ಅನುಕೂಲತೆಗಳನ್ನು ಪಡೆದುಕೊಳ್ಳುವಲ್ಲಿ ಕೂಡ ಶಿಕ್ಷಕರು ಮತ್ತು ಪಾಲಕರಿಗೆ ಉಪಯುಕ್ತವಾಗುತ್ತದೆ. ಒಂದೊಮ್ಮೆ ಆಶಾಳನ್ನು ಸ್ಥಳೀಯ ಶಾಲಾ ಶಿಕ್ಷಕರು, ಅಂಗನವಾಡಿ ಕೇಂದ್ರದ

ಕಾರ್ಯಕರ್ತರು ಅಥವಾ ಆರೋಗ್ಯ ಕ್ಷೇತ್ರದ ವೃತ್ತಿಪರರು ಗುರುತಿಸಿದ್ದರೆ, ಅವಳು ತನ್ನ ಜೀವನದ ಅತ್ಯಮೂಲ್ಯವಾದ ಹನ್ನೊಂದು ವರ್ಷಗಳನ್ನು ತೊಟ್ಟಿಲಲ್ಲಿ ಮಲಗಿ ಕಳೆಯ-ಬೇಕಾಗುತ್ತಿರಲಿಲ್ಲ. ರಮಾಳ ವಿಷಯದಲ್ಲಿ, ಅವಳು ಮಾತನಾಡುವ ಸಾಮರ್ಥ್ಯ ಮತ್ತು ಭಾಷೆಯನ್ನು ಮರಳಿ ಪಡೆಯುವಲ್ಲಿ, ತನ್ನ ಸುತ್ತಮುತ್ತಲಿನ ಜಗತ್ತನ್ನು ಅರ್ಥಮಾಡಿಕೊಂಡು ಅದರಲ್ಲಿ ತೊಡಗಿಕೊಳ್ಳುವಲ್ಲಿ ಮೇಲಿನ ಎಲ್ಲಾ ಅಂಶಗಳ ಪಾತ್ರವಿದೆ. ಅವಳು ಸ್ವತಂತ್ರಳಾಗಬಹುದಾದ ಹಾಗೂ ಮುಂದುವರೆದು ಸಮಾಜಕ್ಕೆ ಕೊಡುಗೆ ನೀಡುವಂತಹ ಸದಸ್ಯಳಾಗುವಂತಹ ಸಾಧ್ಯತೆಯನ್ನು ಅವು ತೆರೆದು ತೋರಿದವು. ನಲವತ್ತು ಮಕ್ಕಳಿರುವ ಒಂದು ತರಗತಿಯಲ್ಲಿ ಬಹುಶಃ ಒಬ್ಬ ವಿದ್ಯಾರ್ಥಿ/ನಿಯು (ಅಥವಾ ಒಬ್ಬರೂ ಇಲ್ಲ) ಒಂದಲ್ಲ ಒಂದು ರೀತಿಯ ವಿಳಂಬಗತಿಯನ್ನು ಹೊಂದಿರ-ಬಹುದು. ಆದರೆ ಆ ಒಂದು ಮಗುವೂ ಕೂಡ ಸೂಕ್ತ ಸಮಯದಲ್ಲಿ ಅಗತ್ಯವಾದ ಗಮನವನ್ನು ಪಡೆದುಕೊಳ್ಳುವುದು ಹಾಗೂ ಆ ಮಗುವಿಗೆ ನೆರವಾಗುವ ದೃಷ್ಟಿಯಿಂದ ಕುಟುಂಬಕ್ಕೆ ಅಗತ್ಯ ಮಾರ್ಗದರ್ಶನವು ಸಿಗಬೇಕಾದದ್ದು ಅತಿ ಮುಖ್ಯ. ಶಿಕ್ಷಕರಾಗಿ ನಾವು ಮಕ್ಕಳ ಭವಿಷ್ಯವನ್ನು ರೂಪಿಸುವ ಜವಾಬ್ದಾರಿಯನ್ನು ಹೊಂದಿದ್ದೇವೆ. ಈ ನಿಟ್ಟಿನಲ್ಲಿ ಪ್ರತಿಯೊಂದು ಮಗು ಹಾಗೂ ಅದರ ಬೆಳವಣಿಗೆ, ಪ್ರಗತಿಯು ಮುಖ್ಯವಾಗಿರುತ್ತದೆ. ವಿದ್ಯಾರ್ಥಿ ಶಿಕ್ಷಕ ಅನುಪಾತವು ಹೆಚ್ಚಿರುವ ತರಗತಿಗಳುಳ್ಳ ನಮ್ಮ ಸಂದರ್ಭದಲ್ಲಿ ವೈಯಕ್ತಿಕ ಗಮನ ಹಾಗೂ ಕಾಳಜಿಗಳು ಸವಾಲಾಗಿ ಕಾಣಬಹುದು. ಆದರೆ ಅವು ಅಸಾಧ್ಯವೇನಲ್ಲ. ಅವಲೋಕನಶೀಲ, ಚಿಂತನಶೀಲ ಹಾಗೂ ಕ್ರಿಯಾಶೀಲರಾದ ಶಿಕ್ಷಕ/ಕಿಯೊಬ್ಬರು ಶಾಲೆಯ ಬೆಂಬಲದೊಂದಿಗೆ ಸಕಾಲಿಕ ನೆರವನ್ನು ನೀಡುವುದರ ಮೂಲಕ ಮಗುವಿನ ಬದುಕಿನಲ್ಲಿ ಅದ್ಭುತ ಬದಲಾವಣೆಗಳನ್ನು ತರಬಲ್ಲರು. ತಮ್ಮ ಪರಿಸರದಲ್ಲಿರುವ ಜನರೆಲ್ಲರಲ್ಲೂ ಪ್ರಬಲವಾದ ಸಾಮೂಹಿಕ ಇಚ್ಛಾಶಕ್ತಿ ಇದೆ ಎಂದಾದಲ್ಲಿ ರಮಾ ಮತ್ತು ಆಶಾಳಂತಹ ಎಲ್ಲ ಮಕ್ಕಳೂ ನೆರವನ್ನು ಪಡೆಯಬಲ್ಲರು ಮತ್ತು ನಾವೆಲ್ಲರೂ ಸೇರಿ ಅಂತಹ ಪರಿಸರವನ್ನು ಸೃಷ್ಟಿಸಲೇಬೇಕಿದೆ.

[i] https://www.merriam-webster.com/dictionary/cretinism Retrieved 4 November 2019.

* ಗೌಪ್ಯತೆಯನ್ನು ಕಾಪಾಡಲು ಹೆಸರನ್ನು ಬದಲಾಯಿಸಲಾಗಿದೆ.



**ಕಿನ್ನರಿ ಪಾಂಡ್ಯ** ಅವರು ಅಜೀಂ ಪ್ರೇಮ್‌ಜಿ ಯುನಿವರ್ಸಿಟಿಯಲ್ಲಿ ಶಿಶು ಅಭಿವೃದ್ಧಿ ಮತ್ತು ಆರಂಭಿಕ ಬಾಲ್ಯ ಶಿಕ್ಷಣ ವಿಷಯವನ್ನು ಬೋಧಿಸುತ್ತಾರೆ.ಅವರು ಆರಂಭಿಕ ಬಾಲ್ಯ ಶಿಕ್ಷಣಕ್ಕೆ ಸಂಬಂಧಿಸಿದಂತೆ ಅಜೀಂ ಪ್ರೇಮ್‌ಜಿ ಫೌಂಡೇಷನ್ ಕೈಗೊಳ್ಳುವ ಹಲವಾರು ಸಾರ್ವಜನಿಕ ವ್ಯವಸ್ಥೆಯ ಉಪಕ್ರಮಗಳಿಗೆ ಕೊಡುಗೆ ನೀಡುತ್ತಾರೆ. kinnari@apu.edu.in ಮೂಲಕ ಅವರನ್ನು ಸಂಪರ್ಕಿಸಬಹುದು.

ಅನುವಾದ: **ಸಹನಾ ಹೆಗಡೆ** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ಎಲ್ಲರಿಗೂ ಒಂದು ಘನತೆಯ ಜೀವನ

## ಶಿಶು ಸಾರಥಿಯ ಪಯಣ

ಮಮತಾ ಘೋಷ್ ಮತ್ತು ನೇಹಾ ದಾಸ್

ವಿಶ್ವದ ಒಟ್ಟು ಜನಸಂಖ್ಯೆಯಲ್ಲಿ ಸುಮಾರು ಶೇಕಡಾ 15ರಷ್ಟು ಮಂದಿ ವಿಶೇಷ ಅಗತ್ಯವುಳ್ಳವರಿದ್ದು, ಇವರಲ್ಲಿ ಶೇಕಡಾ ೮೦ರಷ್ಟು ಜನರು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಬದುಕುತ್ತಿದ್ದಾರೆ. 2011ರಲ್ಲಿ ನಡೆದ ಜನಗಣತಿಯ ಪ್ರಕಾರ, ಭಾರತದಲ್ಲಿ ಶೇಕಡಾ 2.21ರಷ್ಟು ಜನರು ಒಂದು ಅಥವಾ ಒಂದಕ್ಕಿಂತ ಹೆಚ್ಚು ಬಗೆಯ ನ್ಯೂನತೆಯೊಂದಿಗೆ ಬದುಕುತ್ತಿದ್ದಾರೆ. ಈ ಪಂಗಡವು ಸಮಾಜದಲ್ಲಿ ಅತ್ಯಂತ ತುಳಿತಕ್ಕೊಳಗಾದ ಮತ್ತು ದುರ್ಬಲ ವರ್ಗವಾಗಿದೆ. ಅವಕಾಶ ವಂಚಿತ ಪರಿಸರ, ತಾರತಮ್ಯದಿಂದ ಕೂಡಿದ ವ್ಯವಸ್ಥೆ ಮತ್ತು ಸಮಾಜದೊಳಗೆ ಅವರನ್ನು ಸೇರಿಸಿಕೊಳ್ಳದಿರುವುದೇ ಇದಕ್ಕೆ ಕಾರಣವಾಗಿದೆ. ಗುವಾಹಟಿಯಲ್ಲಿ ಇರುವ ಶಿಶು ಸಾರಥಿ ಬಹು ವಿಶೇಷ ಅಗತ್ಯವುಳ್ಳವರ ಪುನರ್ವಸತಿ ಕೇಂದ್ರ (Shishu Sarothi Centre for Training & Rehabilitation of Persons with Multiple Disability) ಎಂಬ ಸಂಸ್ಥೆಯು 1987 ರಿಂದಲೇ ವಿಶೇಷ ಅಗತ್ಯವುಳ್ಳ ಮಕ್ಕಳು ಮತ್ತು ವ್ಯಕ್ತಿಗಳ ಕಲ್ಯಾಣಕ್ಕಾಗಿ ದುಡಿಯುತ್ತಿದೆ. ಆರಂಭದ ದಿನಗಳಲ್ಲಿ ಕೇವಲ ಎರಡು ಮಕ್ಕಳೊಂದಿಗೆ ಒಂದೇ ಕೋಣೆಯೊಂದಿಗೆ ಪ್ರಾರಂಭಿಸಿದ ಈ ಕೇಂದ್ರವು ಪ್ರಾಥಮಿಕವಾಗಿ ಸೆರೆಬ್ರಲ್ ಪಾಲ್ಸಿ (ಸಿ.ಪಿ) (ಮೆದುಳುವಾತ) ನ್ಯೂನತೆಯಿಂದ ಬಳಲುತ್ತಿರುವ ಮಕ್ಕಳಿಗೆ ಸೇವೆಯನ್ನು ಒದಗಿಸುತ್ತಿತ್ತು. ಆದಾಗ್ಯೂ, ಕಳೆದ ಮೂರು ದಶಕಗಳಲ್ಲಿ ಇದು ಪ್ರಾದೇಶಿಕ ಮಟ್ಟದಲ್ಲಿ ಪ್ರಮುಖ ಸಂಸ್ಥೆಯಾಗಿ ಬೆಳೆದಿದ್ದು, ವಿಶೇಷ ಅಗತ್ಯವುಳ್ಳ ಮಕ್ಕಳು ಮತ್ತು ವ್ಯಕ್ತಿಗಳು ಸಹಜ ಘನತೆ ಮತ್ತು ಸ್ವಾಯತ್ತತೆಯನ್ನು ಗೌರವಿಸುವ ಒಂದು ಸಮನ್ವಯ ಸಮಾಜದಲ್ಲಿ ಸಂಪೂರ್ಣವಾಗಿ ಮತ್ತು ಪರಿಣಾಮಕಾರಿಯಾಗಿ ಭಾಗವಹಿಸುವಂತೆ ಅವರನ್ನು ಸಶಕ್ತರನ್ನಾಗಿಸಲು ಮತ್ತು ಸಬಲೀಕರಣಗೊಳಿಸುವ ಸಲುವಾಗಿ ಕೆಲಸ ಮಾಡುತ್ತಿದೆ.

ಇದು, ಮಕ್ಕಳು, ಮಹಿಳೆಯರು ಮತ್ತು ಪುರುಷರು ಸೇರಿದಂತೆ ಎಲ್ಲ ರೀತಿಯ ವೈಕಲ್ಯವುಳ್ಳವರೂ ಸಮಾನ ಗೌರವ ಮತ್ತು ಘನತೆಯಿಂದ ಬದುಕುವ ತಮ್ಮ ಹಕ್ಕುಗಳು ಮತ್ತು ಮೂಲಭೂತ ಸ್ವಾತಂತ್ರ್ಯವನ್ನು ಅನುಭವಿಸುತ್ತಾ, ಮಾನವ ವೈವಿಧ್ಯತೆ ಮತ್ತು ಮನುಕುಲದ ಅವಿಭಾಜ್ಯ ಅಂಗವಾಗಿ ಬದುಕಲು ಸಮನ್ವಯ ಸಮಾಜವೊಂದನ್ನು ರೂಪಿಸುವ ಉದ್ದೇಶವನ್ನು ಹೊಂದಿದೆ. ಮಕ್ಕಳು ಮತ್ತು ವೈಕಲ್ಯವುಳ್ಳ ವ್ಯಕ್ತಿಗಳ ಹಕ್ಕನ್ನು ಎತ್ತಿ ಹಿಡಿದು ಪ್ರತಿಪಾದಿಸುತ್ತಾ, ಸಮಾನ ಅವಕಾಶಗಳನ್ನು ಖಾತರಿಪಡಿಸಿ, ತಾರತಮ್ಯವಿಲ್ಲದ ಹಾಗೂ ಅಡ್ಡಿ–ಆತಂಕರಹಿತ ಸಮಾಜದಲ್ಲಿ ಅವರ ಸೇರ್ಪಡೆ ಮತ್ತು ಸಂಪೂರ್ಣ ಸಹಭಾಗಿತ್ವವನ್ನು ಉತ್ತೇಜಿಸುತ್ತಾ ಈ ಉದ್ದೇಶಕ್ಕೆ ಮೂರ್ತ ರೂಪ ನೀಡಲು ವೃತ್ತಿಪರರ ತಂಡವೊಂದು ಇಲ್ಲಿ ಹಗಲಿರುಳೆನ್ನದೆ ಶ್ರಮಿಸುತ್ತಿದೆ.

ವಿಶೇಷ ಅಗತ್ಯವುಳ್ಳ ಚಿಕ್ಕ ಮಕ್ಕಳಿಗೆ ಆರಂಭದಲ್ಲಿಯೇ ಮತ್ತು ಮೂರರಿಂದ ಹದಿನೆಂಟು ವರ್ಷದೊಳಗಿನ ಹದಿಹರೆಯದ ವೈಕಲ್ಯವುಳ್ಳವರಿಗೆ ವಿಶೇಷ ಶಿಕ್ಷಣವನ್ನು ನೀಡುವ ಬಹುಮುಖಿ ಕಾರ್ಯದಲ್ಲಿ ನಮ್ಮ ಮಾದರಿಯ ವಿಶಿಷ್ಟತೆ ಮತ್ತು ಸುಸ್ಥಿರತೆಯು ಅಡಗಿದೆ. ಬೌದ್ಧಿಕ ನ್ಯೂನತೆ, ಶ್ರವಣ ದೋಷ ಮತ್ತು ದೃಷ್ಟಿ ವೈಕಲ್ಯತೆ, ಮತ್ತು ಬಹು ಸಂವೇದನಾ ನ್ಯೂನತೆ ಹೊಂದಿರುವವರಿಗೆ ಮತ್ತು ಅಧಿಕ ಸಹಾಯ ಬೇಕಿರುವ ಮಕ್ಕಳು ಮತ್ತು ಹದಿಹರೆಯದರಿಗೆ ಹಕ್ಕು ಆಧಾರಿತ ಚೌಕಟ್ಟಿನೊಳಗೆ ಸೇವೆಗಳನ್ನು ಸಹ ನೀಡಲಾಗುತ್ತಿದೆ. ಅವರಿಗೆ ಜೋಡು ಹಾದಿಯ ವಿಧಾನದಲ್ಲಿ (Twin-track approach) ಎಲ್ಲಾ ರೀತಿಯ ಸೇವೆಗಳನ್ನು ಒದಗಿಸುವ ಜೊತೆಗೆ ಹಕ್ಕು ಆಧಾರಿತ ಪ್ರತಿಪಾದನೆ ಮಾಡುವ ಮೂಲಕ ನಾವು ಕಾರ್ಯ–ನಿರ್ವಹಿಸುತ್ತಿದ್ದೇವೆ. ಇದು ಶಿಕ್ಷಣ, ಆರೋಗ್ಯ, ಹಕ್ಕಿನ ಪ್ರತಿಪಾದನೆ ಮತ್ತು ಸಂಶೋಧನೆಯಂಥ ಪ್ರಮುಖ ವಿಷಯಾಧಾರಿತ ಕ್ಷೇತ್ರಗಳನ್ನು ಒಳಗೊಂಡಿದೆ.

### ಸಮನ್ವಯಶಿಕ್ಷಣ

ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಶಿಕ್ಷಣದ ಅಗತ್ಯತೆಯನ್ನು ಉಚಿತ ಮತ್ತು ಕಡ್ಡಾಯ ಶಿಕ್ಷಣ ಹಕ್ಕು ಕಾಯಿದೆ ೨೦೦೯ (Right to Free and Compulsory Education Act-RTE) ಮತ್ತು ವಿಶೇಷ ಅಗತ್ಯವುಳ್ಳ ವ್ಯಕ್ತಿಗಳ ಹಕ್ಕುಗಳ ಕಾಯಿದೆ (Rights of Persons with Disabilities Act-RPWD) ೨೦೧೬ರ ಜೊತೆ ಸರಿದೂಗಿಸುವುದಕ್ಕಾಗಿ ನಮ್ಮ ಶಿಕ್ಷಣದ ವ್ಯಾಪ್ತಿಯು ಈ ಕೆಳಗಿನ ಅನೇಕ ಕೇಂದ್ರಗಳು ಮತ್ತು ಘಟಕಗಳ ಮೂಲಕ ಸಮನ್ವಯ ಶಿಕ್ಷಣವನ್ನು ಉತ್ತೇಜಿಸುವುದನ್ನು ಒಳಗೊಂಡಿದೆ.

ಸಮನ್ವಯ ಮತ್ತು ವೃತ್ತಿಪರ ಶಿಕ್ಷಣ ಕೇಂದ್ರ (Centre for Inclusive and Vocational Education-CIVE) ಈ ಘಟಕವು, ಬೆಳವಣಿಗೆಯಲ್ಲಿ ನ್ಯೂನತೆ ಹೊಂದಿರುವ ಮಕ್ಕಳಿಗೆ ರಿವರ್ಸ್ ಇನ್‌ಕ್ಲೂಷನ್ ಪ್ಲೇಗ್ರೂಪ್, ಸುಸಜ್ಜಿತ ಮಾಹಿತಿ ಮತ್ತು ಸಂವಹನ ತಂತ್ರಜ್ಞಾನ (Information and Communication Technology (ICT) Lab)) ಪ್ರಯೋಗಾಲಯಗಳನ್ನು ಒಳಗೊಂಡ ಸರ್ವಾಂಗೀಣ ಶೈಕ್ಷಣಿಕ ಮತ್ತು ಚಿಕಿತ್ಸಕ ಅಗತ್ಯತೆಗಳನ್ನು ಪೂರೈಸುತ್ತದೆ. ಆಟಿಸಂ ಸ್ಪೆಕ್ಟ್ರಮ್ ಡಿಸಾರ್ಡರ್ (ಸ್ವಲೀನತೆ/ತಂತನತೆ) ಮತ್ತು ಇತರ ವ್ಯಾಪಕ ಬೆಳವಣಿಗೆ ನ್ಯೂನತೆಗಳನ್ನು (Pervasive Developmental Disorders) ಹೊಂದಿರುವ ಮಕ್ಕಳಿಗೆ ಶಾಲಾಪೂರ್ವ ಸಿದ್ಧತಾ ಕಾರ್ಯಕ್ರಮವನ್ನು ಒಳಗೊಂಡಿದೆ. ಈ ಕೇಂದ್ರದಲ್ಲಿ, ಸಮನ್ವಯ ಶಿಕ್ಷಣದ ಉದ್ದೇಶವನ್ನು ಈಡೇರಿಸುವುದಕ್ಕಾಗಿ, ವಿಶೇಷ ಶಿಕ್ಷಕರು, ಚಿಕಿತ್ಸಕರು, ಆಪ್ತ ಸಮಾಲೋಚಕರು ಮತ್ತು ಸಾಮಾಜಿಕ ಕಾರ್ಯಕರ್ತರು ಒಟ್ಟಾಗಿ ಕೆಲಸ ಮಾಡುತ್ತಾರೆ. ಸಮನ್ವಯ ಮತ್ತು ವೃತ್ತಿಪರ ಶಿಕ್ಷಣ ಕೇಂದ್ರದ (ಸಿ.ಐ.ವಿ.ಇ) ಅಡಿಯಲ್ಲಿ ಹಲವಾರು ಘಟಕಗಳಿವೆ. ಪ್ಲೇಗ್ರೂಪ್ ಯೂನಿಟ್ ಎನ್ನುವುದು 'ರಿವರ್ಸ್ ಇನ್‌ಕ್ಲೂಸಿವ್ ಕ್ಲಾಸ್' ಆಗಿದ್ದು, ಇದರಲ್ಲಿ ನ್ಯೂನತೆ ಇರುವ ಮತ್ತು ಸಾಮಾನ್ಯ ಮಕ್ಕಳು ಒಟ್ಟಿಗೆ ಕಲಿಯಬಹುದಾಗಿದೆ. ಸರ್ವತೋಮುಖ ಬೆಳವಣಿಗೆಗೆ ಅವಕಾಶ ನೀಡುವ ಸೂಕ್ತ ಸಾಧಿಸಬಹುದಾದ (Developmentally-appropriate) ಮತ್ತು ಮಗು ಕೇಂದ್ರಿತ

ವಿಧಾನಗಳ ಮೂಲಕ ಕಲಿಕೆಗೆ ಹೆಚ್ಚು ಒತ್ತು ನೀಡಲಾಗುತ್ತಿದೆ. ಕ್ರಿಯಾತ್ಮಕ ಶೈಕ್ಷಣಿಕ ಘಟಕ (Functional Academic Unit) ಎನ್ನುವುದು, ಮಕ್ಕಳು ತಮ್ಮ ದಿನನಿತ್ಯದ ಕಾರ್ಯ ಚಟುವಟಿಕೆಗಳನ್ನು ಸರಾಗವಾಗಿ ನಡೆಸಲು ಮತ್ತು ಕನಿಷ್ಠ ಸಹಾಯದೊಂದಿಗೆ ಸ್ವತಂತ್ರ ಜೀವನ ಸಾಗಿಸಲು ಅಗತ್ಯ ಓದುವ ಮತ್ತು ಬರೆಯುವ ಸಾಮರ್ಥ್ಯ ಮತ್ತು ಅಂಕಿ/ಸಂಖ್ಯಾ ಕೌಶಲ್ಯಗಳನ್ನು ಅಭಿವೃದ್ಧಿಪಡಿಸುವತ್ತ ಗಮನ ನೀಡುತ್ತದೆ.

ಕ್ರಿಯಾತ್ಮಕ ಘಟಕ (Functional Unit) ಎನ್ನುವುದು ವಿದ್ಯಾರ್ಥಿಯು ಯಾವುದೇ ಅಡೆತಡೆ ಇಲ್ಲದೆ ವೃತ್ತಿಪರ ತರಬೇತಿಯತ್ತ ಸಾಗಲು ಬೇಕಾಗುವ ವೃತ್ತಿಪರ ತರಬೇತಿಯ ಪೂರ್ವತಯಾರಿ ಕೌಶಲಗಳು, ಜೀವನ ಕೌಶಲಗಳು ಮತ್ತು ಕೆಲಸಕ್ಕೆ ಸಂಬಂಧಿಸಿದ ವರ್ತನೆಯನ್ನು ಅಭಿವೃದ್ಧಿಪಡಿಸುವತ್ತ ಗಮನ ನೀಡುತ್ತದೆ. ವಿಶೇಷ ಬೋಧನಾ ಘಟಕವು (Special Teaching Unit), ಬಹು ಸಂವೇದನಾ ವಿಧಾನಗಳ ಮೂಲಕ ಗ್ರಹಣಶಕ್ತಿ ಕೌಶಲಗಳ ಬೆಳವಣಿಗೆ ಮತ್ತು ತನ್ನ ಹಾಗೂ ಪರಿಸರದ ಬಗ್ಗೆ ಜಾಗೃತಿ ಮೂಡಿಸುವುದಕ್ಕಾಗಿ ಹೆಚ್ಚಿನ ಅಗತ್ಯ ಬೇಕಾದ ಎಳೆಯ ಪ್ರಾಯದ ಮಕ್ಕಳಿಗೆ ನೆರವಾಗುತ್ತದೆ. ವಿರಾಮ ಕಲಿಕಾ ಘಟಕ (Leisure Learning Unit) ಹೆಚ್ಚಿನ ಸಹಾಯದ ಅಗತ್ಯಬೇಕಾದ ಮತ್ತು ಅತ್ಯಧಿಕ ಬೆಂಬಲದ ಅಗತ್ಯವಿರುವ ಮಕ್ಕಳನ್ನು ಹೊಂದಿದೆ. ಈ ಘಟಕದಲ್ಲಿರುವ ವಿದ್ಯಾರ್ಥಿಗಳಿಗೆ ಬೆಳವಣಿಗೆಯ ಎಲ್ಲಾ ಕ್ಷೇತ್ರಗಳಲ್ಲಿ ಹೆಚ್ಚಿನ ಸಹಾಯ ಬೇಕು. ಅವರಿಗೆ ಘನತೆ, ಆತ್ಮಗೌರವ, ಆತ್ಮವಿಶ್ವಾಸ ಮತ್ತು ಸಮ್ಮತಿಯೊಂದಿಗೆ ದೈನಂದಿನ ಜೀವನ ನಡೆಸುವುದಕ್ಕಾಗಿ ಮೂಲಭೂತ ಕೌಶಲ್ಯಗಳನ್ನು ಅಭಿವೃದ್ಧಿಪಡಿಸಲು ಸಹಾಯ ಮಾಡಲಾಗುತ್ತದೆ.

ವೃತ್ತಿಪರ ಘಟಕವು (Vocational Unit), ವೈಕಲ್ಯವುಳ್ಳ ಹದಿ-ಹರೆಯದವರು ಸಬಲರಾಗಲು ಮತ್ತು ದೀರ್ಘಾವಧಿಯಲ್ಲಿ ಕೆಲಸ ಮಾಡಲು ಬೇಕಾಗುವ ಕೌಶಲ್ಯಕ್ಕಾಗಿ ಸಜ್ಜುಗೊಳಿಸಲು ಅವರಿಗೆ ವಿವಿಧ ವೃತ್ತಿಪರ ಕೋರ್ಸ್‌ಗಳಲ್ಲಿ ತರಬೇತಿಯನ್ನು ನೀಡುತ್ತದೆ. ದೈಹಿಕ ಪುನರ್ವಸತಿ ಘಟಕವು (Physical Rehabilitation Unit) ಚಿಕಿತ್ಸೆಯ ಸೇವೆಗಳನ್ನು ನೀಡುತ್ತದೆ. ಅಲ್ಪಕಾಲೀನ ಮತ್ತು ದೀರ್ಘ-ಕಾಲೀನ ಗುರಿಗಳ ಮೂಲಕ  ಅಗತ್ಯತೆ ಆಧಾರಿತ ವಿಧಾನವನ್ನು ಅನ್ವಯಿಸಿ ದೈಹಿಕ ಮತ್ತು ಬೆಳವಣಿಗೆಯ ಮೈಲಿಗಲ್ಲುಗಳನ್ನು ಸಾಧಿಸಲು ವಿದ್ಯಾರ್ಥಿಗಳಿಗೆ ಪ್ರತಿ ವಾರ ಕನಿಷ್ಠ ಎರಡು ದಿನಗಳ ಕಾಲ ತರಬೇತಿ ಪಡೆದ ವೃತ್ತಿಪರರಿಂದ ಭೌತ ಚಿಕಿತ್ಸೆ (Physiotherapy) ಮತ್ತು ವಾಕ್ ಚಿಕಿತ್ಸೆಯನ್ನು (Speech therapy) ನೀಡಲಾಗುತ್ತದೆ.

ಐ.ಸಿ.ಟಿ ಪ್ರಯೋಗಾಲಯವು (ಮಾಹಿತಿ, ಸಂವಹನ ಮತ್ತು ತಂತ್ರಜ್ಞಾನ) ವೈಕಲ್ಯವುಳ್ಳ ವ್ಯಕ್ತಿಗಳಿಗೆ ಕಂಪ್ಯೂಟರ್ ಸಾಕ್ಷರತೆ ಒದಗಿಸುವ ಉದ್ದೇಶವನ್ನು ಹೊಂದಿದೆ. ಪ್ರತ್ಯೇಕ ಅಗತ್ಯತೆಗಳಿಗೆ ಅನುಗುಣವಾಗಿ ವಿಶೇಷ ನೆರವು ಉಪಕರಣಗಳು ಮತ್ತು ಸಾಫ್ಟ್‌ವೇರ್‌ಗಳು ವಿದ್ಯಾರ್ಥಿಗಳಿಗೆ ಮೂಲ ಕಂಪ್ಯೂಟರ್ ಕೌಶಲ್ಯಗಳನ್ನು ಕಲಿಯಲು ಸಹಾಯ ಮಾಡುತ್ತವೆ.

ಈ ಸಂಸ್ಥೆಯು, ಸಮನ್ವಯ ಶಿಕ್ಷಣವನ್ನು ಉತ್ತೇಜಿಸುವುದಕ್ಕಾಗಿ ಬಹುಮುಖಿ ವಿಧಾನವನ್ನು ಅಳವಡಿಸಿಕೊಂಡಿದೆ. 2016ರಲ್ಲಿ ರಿವರ್ಸ್ ಇನ್‌ಕ್ಲೂಷನ್ ಅನ್ನು ಜಾರಿಗೆ ತರಲಾಯಿತು. ಇಲ್ಲಿ ವಿಶಿಷ್ಟ ಶಾಲಾಪೂರ್ವ ಶಿಕ್ಷಣದ ಪಠ್ಯಕ್ರಮವನ್ನು ಅನುಸರಿಸಲಾಗುತ್ತಿದ್ದು, ತಮ್ಮ ಸಾಮರ್ಥ್ಯಕ್ಕೆ ಅನುಗುಣವಾಗಿ ಎಲ್ಲಾ ವಿದ್ಯಾರ್ಥಿಗಳು ಅತ್ಯುತ್ತಮವಾಗಿ ಕಲಿಯುತ್ತಿದ್ದಾರೆ ಎನ್ನುವುದನ್ನು ಖಚಿತ-ಪಡಿಸಿಕೊಳ್ಳಲು ಇದರಲ್ಲಿ ವಿಶೇಷ ಶಿಕ್ಷಕರು ಮತ್ತು ಮಾಂಟೆಸ್ಸರಿಯಲ್ಲಿ ತರಬೇತಿ ಪಡೆದ ಶಿಕ್ಷಕರು ಜೊತೆಯಾಗಿ ಕಾರ್ಯ ನಿರ್ವಹಿಸುತ್ತಾರೆ. ವಿಶೇಷ ಅಗತ್ಯವುಳ್ಳ ಮತ್ತು ಸಾಮಾನ್ಯ ಮಕ್ಕಳು ಪರಸ್ಪರ ಸಂವಹನ ನಡೆಸುವ ಸಹಜ ರೀತಿಯನ್ನು ನೋಡಿದಾಗ ಕಣ್ಣು ತುಂಬಿ ಬರುತ್ತದೆ. ಹಲವಾರು ವರ್ಷಗಳಿಂದ, ಅನೇಕ ಮಕ್ಕಳನ್ನು ಶಾಲೆಯ ಮುಖ್ಯ ವಾಹಿನಿಗೆ ಕರೆತರಲಾಗಿದೆ. ಶಿಶು ಸಾರಥಿಯ ಶಿಕ್ಷಕರು ಈ ಶಾಲೆಗಳ ಶಿಕ್ಷಕರಿಗೆ ಸಹಕಾರ ನೀಡುತ್ತಲೇ ಬಂದಿದ್ದಾರೆ. ಹಾಗೂ ಆ ಮಕ್ಕಳು ಸಾಧಿಸಿರುವ ಪ್ರಗತಿಯ ಮೇಲೆ ನಿಗಾ ಇಡುತ್ತಾರೆ. ಸಮನ್ವಯ ಶಿಕ್ಷಣದ ಕಡೆಗೆ ಪ್ರಯಾಣ ಬೆಳೆಸುವ ಈ ಮುಖ್ಯವಾಹಿನಿಯ ಶಾಲೆಗಳಿಗೆ ದಾಖಲಾತಿ ಪೂರ್ವ ಸಂವೇದನಾಶೀಲತೆ ಮತ್ತು ಪುನಶ್ಚೇತನ ಕಾರ್ಯ-ಕ್ರಮಗಳನ್ನು ಆಯೋಜಿಸಲಾಗುತ್ತದೆ. 2018ರ ಸೆಪ್ಟೆಂಬರ್‌ನಲ್ಲಿ ಅಸ್ಸಾಂ ಸರ್ಕಾರ ಮತ್ತು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯದ ಅಡಿಯಲ್ಲಿರುವ ರಾಷ್ಟ್ರೀಯ ಆಯುಷ್ ಮಿಶನ್, 'ಜೀವಧಾರಾ ಯೋಜನೆ'ಯನ್ನು ಜಾರಿಗೆ ತಂದಿತು. ಇದೊಂದು ಪ್ರಾಯೋಗಿಕ ಯೋಜನೆಯಾಗಿದ್ದು, ಶಿಶು ಸಾರಥಿಯ ಸಹಯೋಗದೊಂದಿಗೆ ಅಸ್ಸಾಂನ ಕಾಮರೂಪ್ ಜಿಲ್ಲೆಯಲ್ಲಿ ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಯೋಗವನ್ನು ಪರಿಚಯಿಸುವ ಉದ್ದೇಶವನ್ನು ಹೊಂದಿದೆ. ಈ ಹೊಸ ಉಪಕ್ರಮವು ತುಂಬಾ ಪರಿಣಾಮ-ಕಾರಿಯಾಗಿ ಹೊರಹೊಮ್ಮಿದೆ. ಏಕೆಂದರೆ ಕೇಂದ್ರದಲ್ಲಿರುವ ಇತರ ಚಿಕಿತ್ಸೆಗಳಿಗೆ ಇದು ಪೂರಕವೆನಿಸಿದೆ ಹಾಗೂ ಸಾವಧಾನತೆಯನ್ನು ಉತ್ತೇಜಿಸುವುದಕ್ಕಾಗಿ ಮಕ್ಕಳ ಸ್ನೇಹಿ ಚಟುವಟಿಕೆಗಳೊಂದಿಗೆ ಪಠಣ/ಜಪ, ಪ್ರಾಣಾಯಾಮ (ಉಸಿರಾಟದ ಅಭ್ಯಾಸ), ಪುನಶ್ಚೇತನ ವ್ಯಾಯಾಮಗಳು ಮತ್ತು ಆಸನಗಳನ್ನು ಬಳಸಲಾಗುತ್ತದೆ. ಯೋಗಾಭ್ಯಾಸಗಳನ್ನು ಪ್ರತಿ ವಾರ ಒಂದು ಗಂಟೆಯ ಕಾಲ ನಡೆಸಲಾಗುತ್ತದೆ. ಯೋಗದ ಪರಿಕಲ್ಪನೆ ಮತ್ತು ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಇದರಿಂದ ಉಂಟಾಗುವ ಪ್ರಯೋಜನವನ್ನು ತಿಳಿಸಲು ಪೋಷಕರೊಂದಿಗೆ ನಿರಂತರ ಸಭೆಗಳನ್ನು ನಡೆಸಲಾಗುತ್ತದೆ. ವಿಶೇಷವೆಂದರೆ ಹೆಚ್ಚಿನ ಪೋಷಕರು ತಮ್ಮ ಮಕ್ಕಳೊಂದಿಗೆ ಯೋಗಾಭ್ಯಾಸದಲ್ಲಿ ಭಾಗವಹಿಸುತ್ತಾರೆ.

RAISE-NE ((Regional Action on Inclusive Education in the North East)

RAISE-NE ಈಶಾನ್ಯ ರಾಜ್ಯಗಳಲ್ಲಿ ಸಮನ್ವಯ ಶಿಕ್ಷಣದ ಪ್ರಾದೇಶಿಕ ಕಾರ್ಯ ಯೋಜನೆಯನ್ನು 2016ರಲ್ಲಿ ಜಾರಿಗೆ ತರಲಾಯಿತು. ಅಸ್ಸಾಂ, ಮಣಿಪುರ, ಮೇಘಾಲಯ, ನಾಗಾಲ್ಯಾಂಡ್ ಮತ್ತು ತ್ರಿಪುರದ ಆಯ್ದ ಜಿಲ್ಲೆಗಳ ಸರ್ಕಾರಿ/ಸರ್ಕಾರಿ ಅನುದಾನಿತ ಶಾಲೆಗಳಲ್ಲಿ ಕಲಿಯುತ್ತಿರುವ  ವಿಶೇಷ ಅಗತ್ಯವುಳ್ಳ ಮಕ್ಕಳ ಶಿಕ್ಷಣದ ಗುಣಮಟ್ಟವನ್ನು ಸುಧಾರಿಸುವ ಸಲುವಾಗಿ ಇರುವ ಸಮನ್ವಯ ಶಿಕ್ಷಣದ ಕುರಿತು  ಸರ್ವ ಶಿಕ್ಷಣ ಅಭಿಯಾನದ (ಎಸ್.ಎಸ್.ಎ) ಕಾರ್ಯಕ್ರಮಕ್ಕೆ ಪೂರಕವಾಗಿ ಈ ಯೋಜನೆಯನ್ನು ಜಾರಿ-ಗೊಳಿಸಲಾಯಿತು. ಈ ಸಂಬಂಧ ಶಿಶು ಸಾರಥಿಯು ಕಾಮರೂಪ್ (ಮಹಾನಗರ) ಜಿಲ್ಲೆಯಲ್ಲಿ 5 ಎಸ್.ಎಸ್.ಎ ಶಾಲೆಗಳೊಂದಿಗೆ ಕೈಜೋಡಿಸಿದೆ ಹಾಗೂ ಇನ್ನೊಂದು ಜಿಲ್ಲೆಗೆ ತನ್ನ ಸೇವೆಯನ್ನು ವಿಸ್ತರಿಸಲು ಸಿದ್ಧವಾಗಿದೆ. ಸಾಮರ್ಥ್ಯವೃದ್ಧಿ, ಸಂವೇದನಾಶೀಲತೆ, ಪಠ್ಯಕ್ರಮ ರೂಪುಗೊಳಿಸುವುದು ಜೊತೆಗೆ ಶಿಕ್ಷಕರ ತರಬೇತಿ, ಕಲಿಕೆ ಮತ್ತು ಪೂರಕ ಮೌಲ್ಯಮಾಪನ ವಿಧಾನಗಳಿಗಾಗಿ ಸಾರ್ವತ್ರಿಕ ವಿನ್ಯಾಸ ಮುಂತಾದುವುಗಳ ಮೂಲಕ ಗುಣಮಟ್ಟದ ಸಮನ್ವಯ ಶಿಕ್ಷಣವನ್ನು ಉತ್ತೇಜಿಸುವ ಮತ್ತು ಪ್ರತಿಪಾದಿಸುವ ಮುಖ್ಯ ಉದ್ದೇಶವನ್ನು ಈ ಕಾರ್ಯಕ್ರಮವು ಹೊಂದಿದೆ.

**ಸ್ಪರ್ಶ್ ಘಟಕ**

ಈ ಘಟಕವು ಶ್ರವಣ ಮತ್ತು ದೃಷ್ಟಿ ದೋಷ (ಡಿ.ಬಿ) ಇರುವ ವ್ಯಕ್ತಿಗಳಿಗೆ ಅಗತ್ಯತೆ ಆಧಾರಿತ ಸಮಗ್ರ ಸೇವೆಗಳನ್ನು ನೀಡುತ್ತದೆ. ಇದೊಂದು ಅಸಾಧಾರಣ ವೈಕಲ್ಯತೆಯಾಗಿದ್ದು, ದೃಷ್ಟಿ ಮತ್ತು ಶ್ರವಣ ದೋಷ (Deaf-blindness -Db) ಹಾಗೂ ಬಹು ಇಂದ್ರಿಯ ದೋಷಗಳ (Multi-Sensory Impairment -MSI) ಸಂಯೋಜನೆಯಾಗಿದೆ. ಈ ದೋಷವು ೦ಯಿಂದ 40ರ ವಯೋಮಾನದವರಲ್ಲಿ ಕಂಡುಬರುತ್ತದೆ. ಸೆನ್ಸ್ ಇಂಟರ್‌ನ್ಯಾಶನಲ್ ಇಂಡಿಯಾದ (Sense International India) ಸಹಕಾರದೊಂದಿಗೆ ಮುಖ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ ತನ್ನ ಸೇವೆಯನ್ನು ನೀಡುವ ಸಲುವಾಗಿ 2015ರಲ್ಲಿ ಅಸ್ಸಾಂನ ಎರಡು ಜಿಲ್ಲೆಗಳಲ್ಲಿ ಈ ಕಾರ್ಯಕ್ರಮವನ್ನು ಜಾರಿಗೆ ತರಲಾಯಿತು. ಆಪ್ತ ಸಮಾಲೋಚನೆ, ಪೋಷಕರ ತರಬೇತಿಯೊಂದಿಗೆ ಶೈಕ್ಷಣಿಕ ಸೌಲಭ್ಯಗಳನ್ನು ಒದಗಿಸುವುದು, ಶ್ರವಣ ಸಾಧನಗಳು ಮತ್ತು ಬ್ರೈಲ್ ಕಿಟ್‌ಗಳಂತಹ ಸಹಾಯಕ ಸಾಧನಗಳನ್ನು ವಿತರಿಸುವುದರ ಮೂಲಕ ಮನೆ ಆಧಾರಿತ ಸೇವೆಗಳನ್ನು ಒದಗಿಸುವ ಕಾರ್ಯಚಟುವಟಿಕೆಗಳನ್ನು ಈ ಘಟಕವು ಮಾಡುತ್ತಿದೆ.

ಮಾನವ ಸಂಪನ್ಮೂಲ ಅಭಿವೃದ್ಧಿ ವಿಭಾಗ (Human Resource Development Department)

ಈ ಹೆಚ್.ಆರ್.ಡಿ.ಯು, ತರಬೇತಿ ಪಡೆದ ಪುನರ್ವಸತಿ ವೃತ್ತಿಪರರ ತಂಡವನ್ನು ರಚಿಸುವ ಉದ್ದೇಶದಿಂದ ಭಾರತೀಯ ಪುನರ್ವಸತಿ ಮಂಡಳಿಯು (Rehabilitation Council of India-RCI)– ಅಂಗೀಕರಿಸಿರುವ ತರಬೇತಿ ಕಾರ್ಯ–ಕ್ರಮಗಳನ್ನು ನಡೆಸುತ್ತದೆ. ಈ ವಿಭಾಗವು, ಸೆರೆಬ್ರಲ್ ಪಾಲ್ಸಿ (ಮೆದುಳುವಾತ) ಇರುವ ಮಕ್ಕಳ ನಿರ್ವಹಣೆಗಾಗಿ ಪೋಷಕರಿಗೆ ಅಲ್ಪಕಾಲೀನ ತರಬೇತಿಯನ್ನು ನೀಡುವ ಮೂಲಕ ಕಾರ್ಯಾರಂಭ ಮಾಡಿತು. 2003ನೇ ಇಸವಿಯಿಂದ ವಿವಿಧ ಆರ್.ಸಿ.ಐ ಅಂಗೀಕೃತ ಕೋರ್ಸುಗಳು (ಕ್ರಾಸ್ ಡಿಸೆಬಿಲಿಟಿ ಮತ್ತು ಸಮನ್ವಯ ಶಿಕ್ಷಣದಲ್ಲಿ ಸುಧಾರಿತ ಸರ್ಟಿಫಿಕೇಟ್ ಕೋರ್ಸು), ಡಿಪ್ಲೊಮಾ (ಡಿ.ಎಡ್. ವಿಶೇಷ ಶಿಕ್ಷಣ – ಸೆರೆಬ್ರಲ್ ಪಾಲ್ಸಿ) ಮತ್ತು ಪದವಿ ಮಟ್ಟದ ಕೋರ್ಸುಗಳನ್ನು (ಬಿ.ಎಡ್. ವಿಶೇಷ ಶಿಕ್ಷಣ – ಬೌದ್ಧಿಕ ನ್ಯೂನತೆ) ಪ್ರಾರಂಭಿಸಲಾಗಿದೆ. ಆರ್.ಸಿ.ಐ ಅಂಗೀಕೃತ ಫೌಂಡೇಶನ್ ಕೋರ್ಸುಗಳ ಮೂಲಕ ಈ ಪ್ರದೇಶದ ಅನೇಕ ಸರ್ಕಾರಿ ಶಾಲೆಗಳ ಶಿಕ್ಷಕರಿಗೆ ವೈಕಲ್ಯವುಳ್ಳವರ ಕುರಿತು ತರಬೇತಿ ನೀಡಲಾಗಿದೆ. ನ್ಯಾಶನಲ್ ಟ್ರಸ್ಟ್‌ನ ಅಡಿಯಲ್ಲಿ ಶಿಕ್ಷಕರು ಮತ್ತು ಆರೈಕೆದಾರರ ತರಬೇತಿಗಾಗಿ ಮನೆ ಆಧಾರಿತ ತರಬೇತಿ ಕಾರ್ಯಕ್ರಮಗಳನ್ನು ನಡೆಸಲಾಗಿದೆ. ಹಲವಾರು ವರ್ಷಗಳಿಂದ ಶಿಶು ಸಾರಥಿಯು, ವೈಕಲ್ಯವುಳ್ಳವರ ಕುರಿತ ಸರ್ಕಾರದ ವಿವಿಧ ಸಾಮರ್ಥ್ಯ ವೃದ್ಧಿ ಉಪಕ್ರಮಗಳ ಮೂಲಕ ವೈದ್ಯರು, ದಾದಿಯರು, ಆರ್.ಎಂ.ಎಸ್.ಎ, ಎಸ್.ಎಸ್.ಎ, ಐ.ಸಿ.ಡಿ.ಎಸ್, ಆಶಾ ಮತ್ತು ಅಂಗನವಾಡಿ ಕಾರ್ಯ–ಕರ್ತೆಯರು ಸೇರಿದಂತೆ 5000ಕ್ಕೂ ಹೆಚ್ಚಿನ ಜನರನ್ನು ತಲುಪಿದೆ.

**ಭಾರತಿ ಇನ್‌ಫ್ರಾಟೆಲ್ ವಿದ್ಯಾರ್ಥಿವೇತನ ಕಾರ್ಯಕ್ರಮ (ಬಿ.ಐ.ಎಸ್.ಪಿ)**

ಶಿಶು ಸಾರಥಿಯು ಭಾರತಿ ಇನ್‌ಫ್ರಾಟೆಲ್ ಲಿಮಿಟೆಡ್‌ನ ಸಿ.ಎಸ್.ಆರ್. ವಿಭಾಗದ ಸಹಭಾಗಿತ್ವದೊಂದಿಗೆ ಭಾರತಿ ಇನ್‌ಫ್ರಾಟೆಲ್ ವಿದ್ಯಾರ್ಥಿವೇತನ ಕಾರ್ಯಕ್ರಮ (ಬಿ.ಐ.ಎಸ್.ಪಿ)ದ ಅನುಷ್ಠಾನದಲ್ಲಿ ಸಹಭಾಗಿತ್ವ ಹೊಂದಿದೆ. ಈ ಕಾರ್ಯಕ್ರಮವನ್ನು ಎಂಟು ಈಶಾನ್ಯ ರಾಜ್ಯಗಳಲ್ಲಿರುವ ವಿಶೇಷ ಅಗತ್ಯವುಳ್ಳ ಮಕ್ಕಳಿಗೆ, ಪ್ರತಿ ರಾಜ್ಯದಲ್ಲಿ ಗುರುತಿಸಲಾದ ಸಹಭಾಗಿ ಸಂಸ್ಥೆಗಳಲ್ಲಿ ಉನ್ನತ ಶಿಕ್ಷಣ ಒದಗಿಸುವುದಕ್ಕಾಗಿ 2016ರಲ್ಲಿ ಜಾರಿಗೆ ತರಲಾಯಿತು. ಈಶಾನ್ಯ ಭಾರತದ ಸುಮಾರು 195 ವಿದ್ಯಾರ್ಥಿಗಳಿಗೆ, ವಿವಿಧ ಕೋರ್ಸುಗಳು ಮತ್ತು ವಿಷಯಗಳನ್ನು ಕಲಿಯುವುದಕ್ಕಾಗಿ ವಿದ್ಯಾರ್ಥಿವೇತನವನ್ನು ನೀಡಲಾಗಿದೆ.

**ಇತರ ಚಿಕಿತ್ಸಕ ಕ್ರಮಗಳು**

ಆರಂಭಿಕ ಚಿಕಿತ್ಸಕ ಕ್ರಮ ಶಿಶು ಸಾರಥಿಯು 1987ರಲ್ಲಿ ಆರಂಭಗೊಂಡ ದಿನದಿಂದಲೇ ಆರಂಭಿಕ ಚಿಕಿತ್ಸಕ ಕ್ರಮ ಘಟಕವನ್ನು (Early Intervention Unit -EIU) ನಡೆಸುತ್ತಿದೆ. ಇಲ್ಲಿಯವರೆಗೆ ಸುಮಾರು 50 ಸಾವಿರಕ್ಕೂ ಹೆಚ್ಚು ಚಿಕಿತ್ಸಕ ಕಾರ್ಯಕ್ರಮಗಳನ್ನು ನಡೆಸಲಾಗಿದ್ದು, ಈಶಾನ್ಯ ಭಾರತದ ಸಾವಿರಾರು ಚಿಕ್ಕ ಮಕ್ಕಳನ್ನು ತಲುಪಲಾಗಿದೆ. ಈ ಘಟಕವು, ಶಿಶುಗಳು, ಅಧಿಕ ಅಪಾಯ ಹೊಂದಿರುವ ಸಣ್ಣ ಮಕ್ಕಳು ಮತ್ತು ವಿಳಂಬಿತ ಬೆಳವಣಿಗೆ ಹಂತಗಳನ್ನು ಹೊಂದಿರುವ ಮತ್ತು ನ್ಯೂನತೆಯನ್ನು ಹೊಂದಿರುವ ಚಿಕ್ಕ ಮಕ್ಕಳಿಗೆ ಚಿಕಿತ್ಸೆ ಮತ್ತು  ಮಕ್ಕಳ ನಿರ್ದಿಷ್ಟ ಮನೆ ನಿರ್ವಹಣೆ ಕಾರ್ಯಕ್ರಮಗಳ ಮೂಲಕ ಆರಂಭದಲ್ಲೇ ನ್ಯೂನತೆ ಪತ್ತೆಹಚ್ಚುವಿಕೆ, ತಪಾಸಣೆ ಮತ್ತು ನಿರ್ವಹಣೆ ಸೇವೆಗಳನ್ನು ನೀಡುತ್ತಿದೆ. ಮಗುವಿನ ಬೆಳವಣಿಗೆಯ ಕುರಿತು ನಡೆಸಲಾದ ಸಂಶೋಧನೆಗಳ ಪ್ರಕಾರ, ಮೊದಲ ಆರು ವರ್ಷಗಳು ಪ್ರತಿ ಮಗುವಿನ ಸರ್ವಾಂಗೀಣ ಬೆಳವಣಿಗೆಯಲ್ಲಿ ನಿರ್ಣಾಯಕವೆನಿಸುತ್ತವೆ. ಹೀಗಾಗಿ, ಅಪಾಯದಲ್ಲಿರುವ ಅಥವಾ ಒಂದು ಅಥವಾ ಒಂದಕ್ಕಿಂತ ಹೆಚ್ಚು ನ್ಯೂನತೆಗಳಿಗೆ ಈಡಾಗಿರುವ ಮಕ್ಕಳಿಗೆ ಇಂತಹ ಸೇವೆಗಳನ್ನು ನೀಡುವುದು ಅತ್ಯವಶ್ಯಕ. ಪ್ರಸವ ಪೂರ್ವ ಸಮಸ್ಯೆಗಳು, ಅಕಾಲಿಕ ಜನನ, ಹುಟ್ಟುವಾಗ ಕಡಿಮೆ ತೂಕ, ಅಪೌಷ್ಠಿಕತೆ, ನಿರ್ಲಕ್ಷ್ಯ ಮತ್ತು ರೋಗಗಳು ಹಾಗೂ ಇತರ ಅಂಶಗಳು ಬೆಳವಣಿಗೆಯ ಕುಂಠಿತಕ್ಕೆ ಕಾರಣವಾಗುತ್ತವೆ.

ಇಂತಹ ಸೇವೆಗಳು ಸಕಾಲಿಕ ಚಿಕಿತ್ಸಕ ಕ್ರಮವನ್ನು ಖಾತ್ರಿಪಡಿಸುತ್ತವೆ ಹಾಗೂ ಕುಂಠಿತ ಬೆಳವಣಿಗೆಹೊಂದಿರುವ ಮಕ್ಕಳು: ಗ್ರಹಣಶಕ್ತಿ/ಬೌದ್ಧಿಕ, ಸಮಗ್ರ ಚಲನೆ, ಸಮಾಜೋ ಭಾವನಾತ್ಮಕ, ಸಂವಹನ, ಇವುಗಳೆಲ್ಲವು ಅವರ ಜೀವನದ ಗುಣಮಟ್ಟವನ್ನು ವೃದ್ಧಿಸಬಹುದು ಹಾಗೂ ಅವರು ತಮ್ಮ ಸಂಪೂರ್ಣ ಸಾಮರ್ಥ್ಯವನ್ನು ಗಳಿಸಬಹುದು ಎಂಬುದನ್ನು ತೋರಿಸಿ–ಕೊಡುತ್ತದೆ. ಜೊತೆಗೆ ಆದಷ್ಟು ಬೇಗನೇ ಅವರು ಸಮಾಜದ ಮುಖ್ಯವಾಹಿನಿಯಲ್ಲಿ ಗುರುತಿಸಿಕೊಳ್ಳಲು ಇದು ಉತ್ತೇಜಿಸುತ್ತದೆ. ಉದಾಹರಣೆಗೆ, ಪ್ರತಿ ಮಗುವಿನ ದೊಡ್ಡ ಮತ್ತು ಚಿಕ್ಕ ಸ್ನಾಯುಗಳ ಬೆಳವಣಿಗೆಯ ಕೌಶಲ್ಯಗಳು, ಬೌದ್ಧಿಕ/ಗ್ರಹಣಶಕ್ತಿ ಕೌಶಲ್ಯಗಳು, ಗ್ರಹಿಕೆ ಮತ್ತು ಅಭಿವ್ಯಕ್ತಿಗೊಳಿಸುವ ಭಾಷೆಯ ಕೌಶಲ್ಯಗಳು, ಆಟದ ಕೌಶಲ್ಯಗಳು ಮತ್ತು ಪ್ರತಿ ಮಗುವಿನ ಸ್ವ–ಸಹಾಯ ಕೌಶಲ್ಯಗಳು ವಿಶೇಷ ಅಗತ್ಯವುಳ್ಳ ಮಕ್ಕಳು ಮತ್ತು ಅವರ ಕುಟುಂಬಗಳನ್ನು ಅರಿತುಕೊಳ್ಳಲು ಮತ್ತು ಗುರುತಿಸಲು ಹಾಗೂ ಅದೇ ರೀತಿ ಅವರೊಂದಿಗೆ ಕೆಲಸ ಮಾಡಲು, ವೈಯಕ್ತಿಕ ಮೌಲ್ಯಮಾಪನ ಮತ್ತು ಮೌಲ್ಯಮಾಪನವನ್ನು ಒದಗಿಸಲಾಗುತ್ತದೆ. ಪ್ರತಿ ಮಗುವಿನ ವೈಯಕ್ತಿಕ ಅಲ್ಪಕಾಲೀನ ಮತ್ತು ದೀರ್ಘಕಾಲೀನ ಗುರಿಗಳಿಂದ ಹಿಡಿದು, ನಿರ್ದಿಷ್ಟ ಗುರಿಗಳನ್ನು ಗುರುತಿಸುವುದಕ್ಕಾಗಿ ಮಕ್ಕಳ ಜೊತೆ ಪೋಷಕರು ಕೆಲಸ ಮಾಡುವುದನ್ನು ಮುಂದುವರಿಸುವುದಕ್ಕಾಗಿ ಮನೆ ನಿರ್ವಹಣೆ ಕಾರ್ಯಕ್ರಮಗಳ ತನಕ ಯೋಜನೆ ಮತ್ತು ಬೆಳವಣಿಗೆ ನಿರ್ವಹಣೆ ಯೋಜನೆಗಳನ್ನು ರೂಪಿಸಲಾಗುತ್ತದೆ. ಇದರೊಂದಿಗೆ, ಕುಟುಂಬಗಳ ಅನುಕೂಲತೆಗೆ ತಕ್ಕಂತೆ ವಾರಕ್ಕೊಮ್ಮೆ ಅಥವಾ ಮಾಸಿಕ ಆಧಾರದಲ್ಲಿ ಮಕ್ಕಳೊಂದಿಗೆ ಅವರು ಸಾಧಿಸಿರುವ ಮುನ್ನಡೆ ಕುರಿತು ಅವಲೋಕನ ಮಾಡಲಾಗುತ್ತದೆ. ಈ

ಕಾರ್ಯಕ್ರಮಗಳನ್ನು ಅಗತ್ಯತೆ ಆಧಾರಿತ ಚಿಕಿತ್ಸೆಗಳೊಂದಿಗೆ ಪರಿಶೀಲಿಸಿ ಮೇಲ್ದರ್ಜೆಗೆ ಏರಿಸಲಾಗುತ್ತದೆ. ಇವುಗಳಲ್ಲಿ ಫಿಸಿಯೋಥೆರಪಿ, ವಾಕ್ ಚಿಕಿತ್ಸೆ, ಔದ್ಯೋಗಿಕ ಚಿಕಿತ್ಸೆ ಮತ್ತು ವಿಶೇಷ ಶಿಕ್ಷಣ ಸೇರಿವೆ. ಆಟದ ಮೂಲಕ ಮಕ್ಕಳ ಪ್ರೇರಣೆ ಮತ್ತು ತೊಡಗಿಸಿಕೊಳ್ಳುವಿಕೆಯನ್ನು ವೃದ್ಧಿಸಲು ವರ್ಷಕ್ಕೆ ಮೂರು ಬಾರಿ 'ಫ್ರೀ ಪ್ಲೇ ಸ್ಟಿಮ್ಯುಲೇಶನ್' ಕಾರ್ಯಕ್ರಮಗಳನ್ನು ನಡೆಸಲಾಗುತ್ತದೆ.

ಆರಂಭಿಕ ಚಿಕಿತ್ಸಕ ಕ್ರಮ ಘಟಕದ (Early Intervention Unit) ಮಕ್ಕಳಿಗೆ, ಶಿಶು ಸಾರಥಿಯ ಸೆಂಟರ್ ಫಾರ್ ಇನ್‌ಕ್ಲೂಸಿವ್ ಅಂಡ್ ವೊಕೇಶನಲ್ ಯೂನಿಟ್, ಸ್ಪರ್ಶ್ ಘಟಕ ಮತ್ತು ಪೂರ್ವ-ವೃತ್ತಿ ತರಬೇತಿ ಘಟಕದ ಮಗುವಿನ ಪ್ರಗತಿ ಮತ್ತು ವೈಯಕ್ತಿಕ ಅಗತ್ಯತೆಗಳಿಗೆ ತಕ್ಕಂತೆ ಉಲ್ಲೇಖಿತ ಸೇವೆಗಳನ್ನು ನೀಡಲಾಗುತ್ತದೆ. ರೋಗ ಲಕ್ಷಣಗಳ ಗುರುತಿಸುವಿಕೆ ಮತ್ತು ರೋಗನಿರ್ಣಯ ಪರೀಕ್ಷೆಗಳಾದ ಬಿ.ಇ.ಆರ್.ಎ ಮತ್ತು ದೃಷ್ಟಿ ದೋಷಗಳಿಗೆ ಸಂಬಂಧಿಸಿದಂತೆ ಪರಿಸ್ಥಿತಿಗಳ ನಿಯಂತ್ರಣಕ್ಕಾಗಿ ಅವರನ್ನು ವೈದ್ಯಕೀಯ ಸಿಬ್ಬಂದಿಗಳ ಬಳಿ ಕಳುಹಿಸಲಾಗುತ್ತದೆ. ಕೈ/ ಮೊಣಕಾಲಿನ ಪಟ್ಟಿ, ಹಿಮ್ಮಡಿ ಪಾದದ ಸಾಧನ, ಸೊಂಟ-ಮೊಣಕಾಲು-ಹಿಮ್ಮಡಿ-ಪಾದದ ಸಾಧನ, ಮೊಣಕಾಲು-ಹಿಮ್ಮಡಿ-ಪಾದದ ಸಾಧನ, ಮಾರ್ಪಡಿಸಿದ ಶೂಗಳು ಮುಂತಾದ ಸಹಾಯಕಗಳು, ಸಾಧನಗಳು ಮತ್ತು ಸಹಾಯಕ ಸಾಧನಗಳನ್ನು ಶಿಫಾರಸು ಮಾಡಲಾಗುತ್ತದೆ.

**ಆಪ್ತ ಸಮಾಲೋಚನೆ**

ಆಪ್ತ ಸಮಾಲೋಚನಾ ಘಟಕವು ಪೋಷಕರಿಗೆ ಪ್ರಾಥಮಿಕ ಹಂತದ ಮಾನಸಿಕ ಬೆಂಬಲ ಮತ್ತು ಆಪ್ತ ಸಮಾಲೋಚನೆ ಸೇವೆಗಳನ್ನು ನೀಡುತ್ತದೆ. ತಮ್ಮ ಮಗುವಿನ ನ್ಯೂನತೆಯ ಕಾರಣ ಪೋಷಕರು ಅನುಭವಿಸುತ್ತಿರುವ ಭಾವನಾತ್ಮಕ ವಿಚಾರಗಳನ್ನು ನಿಭಾಯಿಸಲು ಮತ್ತು ಪರಿಸ್ಥಿತಿಯನ್ನು ಇನ್ನೂ ಉತ್ತಮವಾಗಿ ನಿರ್ವಹಿಸಲು ಅವರನ್ನು ತಯಾರು ಮಾಡುವುದು ಹಾಗೂ ಅವರ ಮಗುವಿನ ವೈಕಲ್ಯಗಳ ಬಗ್ಗೆ ಪೋಷಕರಿಗೆ ಮತು ಪ್ರಾಥಮಿಕ ಹಂತದ ಆರೈಕೆದಾರರಿಗೆ ಶಿಕ್ಷಣ ನೀಡಲು ಈ ಘಟಕವು ಕಾರ್ಯ-ನಿರ್ವಹಿಸುತ್ತದೆ. ಮುಖ್ಯವಾಹಿನಿಯ ಶಾಲೆಗಳಲ್ಲಿ ಎಲ್ಲಿ ಅವಕಾಶವಿದೆಯೋ ಅಲ್ಲಿ ಸಮನ್ವಯ ಶಿಕ್ಷಣದ ಅಗತ್ಯತೆಯನ್ನು ಕುರಿತು ನಾವು ಅರಿವನ್ನು ಮೂಡಿಸುತ್ತಿದ್ದೇವೆ. ವಿಸ್ತರಣೆ (Outreach) ಶಿಶು ಸಾರಥಿಯು, ಸಮುದಾಯಗಳಲ್ಲಿ ಜಾಗೃತಿ ಮೂಡಿಸುವ ಸಲುವಾಗಿ ಅಸ್ಸಾಂನ ಗ್ರಾಮೀಣ ಪ್ರದೇಶಗಳಲ್ಲಿ ವಿಸ್ತರಣೆ (Outreach) ಕಾರ್ಯಕ್ರಮಗಳನ್ನು ನಡೆಸುತ್ತದೆ., ವಿಶೇಷ ಅಗತ್ಯವುಳ್ಳ ಮಕ್ಕಳನ್ನು ಗುರುತಿಸುವುದು ಅಥವಾ ಅವರ ತಪಾಸಣೆ ನಡೆಸುವುದು ಮತ್ತು ಪ್ರಸವಪೂರ್ವ ಮತ್ತು ಪ್ರಸವ ನಂತರದ ಅಪಾಯದ ಅಂಶಗಳ ಬಗ್ಗೆ ಮಾಹಿತಿಯನ್ನು ಒದಗಿಸುವುದು ಇದರ ಮುಖ್ಯ ಉದ್ದೇಶವಾಗಿದೆ. 2014ರಲ್ಲಿ ಗೋಲ್ಪಾರದಲ್ಲಿನ ಸ್ಥಳೀಯ ಸಮುದಾಯದ ಸದಸ್ಯರ ವಿನಂತಿಯ ಮೇರೆಗೆ, ಸ್ಥಳೀಯ ಸರ್ಕಾರೇತರ ಸಂಸ್ಥೆಯೊಂದರ(ಎನ್.ಜಿ.ಒ) ಸಹಯೋಗದೊಂದಿಗೆ ಸಾಪ್ತಾಹಿಕವಾಗಿ ಆರಂಭಿಕ ಚಿಕಿತ್ಸಕ ಸೇವೆಗಳನ್ನು ಪ್ರಾರಂಭಿಸಲಾಯಿತು. ಈ ಸೇವೆಯು ಈಗಲೂ ಮುಂದುವರೆದಿದೆ. ಈ ಸಾಪ್ತಾಹಿಕ ಭೇಟಿಗಳ ಮೂಲಕ ನಾವು ಗೋಲ್ಪಾರ ಮತ್ತು ಇತರ ನೆರೆಯ ಜಿಲ್ಲೆಗಳಲ್ಲಿ ಹಾಗೂ ಮೇಘಾಲಯದ ಕೆಲವು ಜಿಲ್ಲೆಗಳಲ್ಲಿನ 600ಕ್ಕೂ ಹೆಚ್ಚು ಮಕ್ಕಳನ್ನು ತಲುಪಿದ್ದೇವೆ.

**ಹಕ್ಕುಗಳ ಸಮರ್ಥನೆ**

ಶಿಶು ಸಾರಥಿಯು ವೈಕಲ್ಯವುಳ್ಳವರ ಕಾನೂನು ಘಟಕ-ಈಶಾನ್ಯ (ಡಿ.ಎಲ್.ಯು-ಎನ್.ಈ) ಮೂಲಕ ಜಾಗೃತಿಯನ್ನು ರೂಪಿಸುವುದು, ಕಾನೂನಿನ ನೆರವು, ದೂರು ಸಲ್ಲಿಸುವುದು, ಮತ್ತು ಇದರ ನೀತಿನಿಯಮಗಳ ಮೇಲೆ ಪ್ರಭಾವ ಬೀರುವ ಕಾರ್ಯಕ್ರಮಗಳನ್ನು ನಡೆಸುವ ಮೂಲಕ ವಿಶೇಷ ಅಗತ್ಯವುಳ್ಳ ಮಕ್ಕಳ ಹಕ್ಕುಗಳ ಸಮರ್ಥನೆ, ಕ್ರಿಯಾವಾದ ಮತ್ತು ಕಾನೂನು ಸಾಕ್ಷರತೆಯನ್ನು ನೀಡುತ್ತದೆ. ವಿಶೇಷ ಅಗತ್ಯವುಳ್ಳವರ ಕಾನೂನು ಘಟಕವು ಎಲ್ಲಾ ಈಶಾನ್ಯ ರಾಜ್ಯಗಳಲ್ಲಿ, ವಿಶೇಷ ಅಗತ್ಯವುಳ್ಳ ಜನರ ಸಂಸ್ಥೆ (ಡಿ.ಪಿ.ಒ), ಅಧಿಕಾರಿಗಳು ಮತ್ತು ನ್ಯಾಯಾಂಗ ಮತ್ತು ವೈಕಲ್ಯವುಳ್ಳ ವ್ಯಕ್ತಿಗಳ ಹಕ್ಕು ಕಾಯಿದೆ, 2016ರ ಅಡಿಯಲ್ಲಿ ಬರುವ ಇತರರ ಜೊತೆ ಸೇರಿಕೊಂಡು ಜಾಗೃತಿ ಮತ್ತು ಸಂವೇದನಾಶೀಲ ಕಾರ್ಯಾಗಾರಗಳು ಅಥವಾ ಕಾರ್ಯಕ್ರಮಗಳನ್ನು ನಡೆಸುತ್ತಾ ಬಂದಿದೆ. ಸದ್ಯಕ್ಕೆ ಮಾಹಿತಿ, ಶಿಕ್ಷಣ ಮತ್ತು ಸಂವಹನ (ಐ.ಇ.ಸಿ) ಪರಿಕರಗಳನ್ನು ಅಭಿವೃದ್ಧಿಪಡಿಸುವುದರ ಜೊತೆಗೆ ವಿಶೇಷ ಅಗತ್ಯವುಳ್ಳವರ ಮತ್ತು ಆರ್.ಪಿ.ಡಬ್ಲ್ಯು.ಡಿ ಕಾಯಿದೆ, 2016ರ ಕುರಿತು ಜಾಗೃತಿ ಮೂಡಿಸುವ ಕಾರ್ಯಕ್ರಮದಲ್ಲಿ ನಾವು ಸಕ್ರಿಯರಾಗಿದ್ದೇವೆ. ರಾಜ್ಯ, ಪ್ರಾಂತೀಯ ಮತ್ತು ಜಿಲ್ಲಾ ಮಟ್ಟದಲ್ಲಿ ಅಸ್ಸಾಂ ಸರ್ಕಾರದ ಸಮಾಜ ಕಲ್ಯಾಣ ಇಲಾಖೆಯು ಇದರ ಜಾರಿಯಲ್ಲಿ ಪಾಲುದಾರಿಕೆ ಪಡೆದಿದೆ. ಇದು ಭಾರತದಲ್ಲಿಯೇ ಮೊದಲ ಉಪಕ್ರಮವಾಗಿದೆ.

**ಸಂಶೋಧನೆ**

ಶಿಶುಸಾರಥಿಯು ಇತ್ತೀಚೆಗೆ ವೈಕಲ್ಯವುಳ್ಳ ವ್ಯಕ್ತಿಗಳಿಗೆ ಸಂಬಂಧಿಸಿದ ವಿಷಯಗಳನ್ನು ಕುರಿತು ಸಂಶೋಧನೆಯನ್ನು ಪ್ರಾರಂಭಿಸಿದ್ದು, ನ್ಯೂನತೆಗೆ ಸಂಬಂಧಿಸಿದ ವಿವಿಧ ಕ್ಷೇತ್ರಗಳಲ್ಲಿ ಪ್ರತ್ಯೇಕಿಸಲಾದ ದತ್ತಾಂಶಗಳು ಲಭ್ಯವಿಲ್ಲದ ಕಾರಣ, ವಿಶೇಷ ಅಗತ್ಯವುಳ್ಳ ವ್ಯಕ್ತಿಗಳ ಪರಿಸ್ಥಿತಿಯ ಬಗ್ಗೆ ಕಾಲಕಾಲಕ್ಕೆ ಸಾಕ್ಷ್ಯಾಧಾರಗಳನ್ನು ರೂಪಿಸುವ ಸಲುವಾಗಿ ಕಾರ್ಯಪ್ರವೃತ್ತವಾಗಿದೆ.

ಸುಸ್ಥಿರ ಅಭಿವೃದ್ಧಿ ಗುರಿಗಳ (ಲಿಂಗ ಸಮಾನತೆ, ಶುದ್ಧ ನೀರು ಮತ್ತು ನೈರ್ಮಲ್ಯ ಮತ್ತು ಯೋಗ್ಯ ಕೆಲಸ ಮತ್ತು ಆರ್ಥಿಕ ಪ್ರಗತಿ) ಸನ್ನಿವೇಶಕ್ಕೆ ಅನುಗುಣವಾಗಿ ಅಸ್ಸಾಂನ ಚಿರಾಂಗ್ ಮತ್ತು ಕೊಕ್ರಜಾರ್ ಜಿಲ್ಲೆಗಳಲ್ಲಿ, ವಿಶೇಷ ಅಗತ್ಯವುಳ್ಳ ವ್ಯಕ್ತಿಗಳ ಮೇಲೆ ಬೆಳಕು ಚೆಲ್ಲಲು ಒಂದು ಎಸ್‌ಡಿಜಿ ವೈಕಲ್ಯ ಪತ್ತೆ ಸಾಧನವನ್ನು (Disability tracker) ಎಸ್.ಡಿ.ಜಿ ರೂಪಿಸಲು, ಶಿಶು ಸಾರಥಿಯು ವಾಲಂಟರಿ ಸರ್ವಿಸಸ್ ಓವರ್‌ಸೀಸ್ (ವಿ.ಎಸ್.ಒ) ಜೊತೆ ಸಹಯೋಗವನ್ನು ಹೊಂದಿದೆ.

ಇಲ್ಲಿಯವರೆಗೆ, ಶಿಶು ಸಾರಥಿಯ ಪ್ರಯಾಣವು ಮಿಶ್ರ ಅನುಭವಗಳನ್ನು ದಾಖಲಿಸಿದೆ.ಅನೇಕ ಅಡೆತಡೆಗಳನ್ನು ಕಂಡರೂ, ಮೀಸಲಾಗಿರುವ ವೃತ್ತಿಪರರ ತಂಡವು ಸಾಮಾನ್ಯ ಗುರಿಯೆಡೆಗೆ ತಲುಪಲು ಎಡೆಬಿಡದೆ ಶ್ರಮಿಸುತ್ತಿರುವುದರಿಂದ ಈ ಸಂಸ್ಥೆಯ ಪ್ರಯಾಣವು ಮುಂದೆ ಸಾಗಿದೆ. ಸಮಾಜವು ವೈವಿಧ್ಯತೆಯನ್ನು ಗೌರವಿಸುವ ಮತ್ತು ಸಂಭ್ರಮಿಸುವ ಮತ್ತು ವೈಕಲ್ಯವುಳ್ಳ ವ್ಯಕ್ತಿಗಳು ಎಲ್ಲಾ ರೀತಿಯಲ್ಲೂ ಇತರರೊಂದಿಗೆ ಸಮಾನವಾಗಿ ಘನತೆಯ ಜೀವನವನ್ನು ನಡೆಸುವ ಪರಿಸರವನ್ನು ಸೃಷ್ಟಿಸುವ ಕನಸನ್ನು ಹೊತ್ತು ಈ ಸಂಸ್ಥೆಯು ಹೆಜ್ಜೆ ಹಾಕುತ್ತಿದೆ.



**ಮಮತಾ ಘೋಷ್** ವಿಶೇಷ ಶಿಕ್ಷಕರಾಗಿದ್ದಾರೆ. ಇವರು 2006 ರಿಂದ ವಿಶೇಷ ಅಗತ್ಯವುಳ್ಳ ಮತ್ತು ಸಾಮಾನ್ಯ ವಿದ್ಯಾರ್ಥಿಗಳ ಜೊತೆ ಕೆಲಸ ಮಾಡುತ್ತಿದ್ದಾರೆ. ಬೆಂಗಳೂರಿನಲ್ಲಿರುವ ಸ್ಪಾಸ್ಟಿಕ್ಸ್ ಸೊಸೈಟಿ ಆಫ್ ಕರ್ನಾಟಕ ಸಂಸ್ಥೆಯಲ್ಲಿ ಒಂದಷ್ಟು ಕಾಲ ಸೇವೆ ಸಲ್ಲಿಸಿದ ನಂತರ ಇವರು 2015ರಲ್ಲಿ ಶಿಶು ಸಾರಥಿಗೆ ಸೆಂಟರ್ ಫಾರ್ ಸ್ಪೆಷಲ್ ಎಜುಕೇಶನ್‌ನ ಸಂಯೋಜಕರಾಗಿ (ವಿಶೇಷ ಶಿಕ್ಷಣ ಕೇಂದ್ರ) ಸೇರಿಕೊಂಡರು. ಪ್ರಸ್ತುತ ಇವರು ಆರ್.ಎ.ಐ.ಎಸ್.ಇ–ಎನ್.ಇ (ರೀಜನಲ್ ಆಕ್ಷನ್ ಫಾರ್ ಇನ್‌ಕ್ಲೂಸಿವ್ ಎಜುಕೇಶನ್–ನಾರ್ತ್‌ಈಸ್ಟ್) ಯೋಜನೆಯ ಪ್ರಮುಖ ಶಿಕ್ಷಕರು ಮತ್ತು ಸಂಯೋಜಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.ಅವರ ಇತರ ಆಸಕ್ತಿಯ ವಿಷಯಗಳೆಂದರೆ ಓದುವುದು, ಬರೆಯುವುದು ಮತ್ತು ಸಂಗೀತ. ಅವರನ್ನು mamta.ghosh@gmail.com ಮೂಲಕ ಸಂಪರ್ಕಿಸಬಹುದು.



ಗುವಾಹಟಿಯ ಶಿಶು ಸಾರಥಿಯ ಸಂಶೋಧನಾ ಅಧಿಕಾರಿಯಾಗಿರುವ **ನೇಹಾ ದಾಸ್,** ದೆಹಲಿ ವಿಶ್ವವಿದ್ಯಾಲಯದ ಸೇಂಟ್ ಸ್ಟೀಫನ್ಸ್ ಕಾಲೇಜಿನಿಂದ ಇತಿಹಾಸದಲ್ಲಿ ಪದವಿಯನ್ನು ಪಡೆದಿದ್ದಾರೆ. ಅವರು ಮುಂಬಯಿಯ ಟಿ.ಐ.ಎಸ್.ಎಸ್.ನಿಂದ 'ಮಕ್ಕಳು ಮತ್ತು ಕುಟುಂಬಗಳಲ್ಲಿ ಪರಿಣಿತಿಯೊಂದಿಗೆ ಸಾಮಾಜಿಕ ಕಾರ್ಯ' ಎಂಬ ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ. ಮಕ್ಕಳ ಹಕ್ಕುಗಳು, ಲಿಂಗ, ಗುಣಾತ್ಮಕ ಸಂಶೋಧನೆ ಮತ್ತು ವೈಕಲ್ಯ ಮುಂತಾದ ವಿಷಯಗಳಲ್ಲಿ ಇವರಿಗೆ ನಾಲ್ಕು ವರ್ಷಗಳ ಅನುಭವವಿದೆ. ಅವರನ್ನು dasneha8815@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ಮೆಲ್ವಿನ್ ಮೆಂಡೊಂಕಾ** । ಪರಿಶೀಲನೆ: **ಲತಾ ಕೆ ಸಿ**

# ಡಿಸ್ಲೆಕ್ಸಿಯಾ ಮತ್ತು ಬಹುವಿಧ ಬುದ್ಧಿಮತ್ತೆಯನ್ನು ಅರಿಯುವುದು

ಮೃದುಲ ಗೋವಿಂದರಾಜು

ಡಿಸ್ಲೆಕ್ಸಿಯಾ ಎಂಬುದು ಬಹಳ ಸಾಮಾನ್ಯವಾದ ಮತ್ತು ಹತ್ತು ಶಾಲಾ ಮಕ್ಕಳಲ್ಲಿ ಒಬ್ಬರಲ್ಲಿ ಕಾಣಬರುವ ಕಲಿಕಾ ವಿಕಲತೆ. ವಾಸ್ತವವಾಗಿ, ಭಾರತವನ್ನು ಕುರಿತ ಅಂಕಿಅಂಶಗಳ ಮಾಹಿತಿ ಲಭ್ಯವಿಲ್ಲದೇ ಇರುವುದರಿಂದ ಈ ಸಂಖ್ಯೆ ಭಾರತದಲ್ಲಿ ಇನ್ನೂ ಹೆಚ್ಚು ಅಂದರೆ ಶೇ.20ರಷ್ಟು ಇರಬಹುದು. ಡಿಸ್ಲೆಕ್ಸಿಯಾ ಇರುವ ಮಕ್ಕಳು ಇತರ ವೈಕಲ್ಯ ಉಳ್ಳವರಂತೆ ಯಾವುದೇ ದೈಹಿಕ 'ಗುರುತುಗಳು' ಅಥವಾ ಗುಣಲಕ್ಷಣಗಳನ್ನು ಹೊಂದಿರುವುದಿಲ್ಲ. ಹಾಗಾಗಿ ಇದೊಂದು ಅದೃಶ್ಯ ವೈಕಲ್ಯ.

> ಡಿಸ್ಲೆಕ್ಸಿಯಾ ಮಗುವಿನ ಬುದ್ಧಿವಂತಿಕೆಯ ಮೇಲೆ ಯಾವುದೇ ರೀತಿಯ ಪರಿಣಾಮವನ್ನು ಬೀರುವುದಿಲ್ಲವಾದ್ದರಿಂದ ಅನೇಕ ಬಾರಿ ಇಂತಹ ಮಕ್ಕಳನ್ನು 'ಸೋಮಾರಿ, ದಡ್ಡ', ಕೆಲಸಕ್ಕೆ ಬಾರದವ ಎಂದು ಇತರರು ಕರೆಯುವುದುಂಟು ಹಾಗೂ ಇದರಿಂದಾಗಿ ಶಾಲೆಗಳಲ್ಲಿ ಪೀಡನೆಗೆ, ಪೋಷಕರ ಸಿಟ್ಟಿಗೆ ಹಾಗೂ ಶಿಕ್ಷಕರ ಅಸಡ್ಡೆಗೆ ಗುರಿಯಾಗುತ್ತಾರೆ. ಇದರ ಫಲವಾಗಿ ಮಗು ಕೀಳರಿಮೆಯಿಂದ ಬಳಲುತ್ತದೆ, ಹಾನಿಕಾರಕ ನಡವಳಿಕೆ ತೋರಬಹುದು ಹಾಗೂ ತನಗಿಂತ ಚಿಕ್ಕ ವಯಸ್ಸಿನ ಮಕ್ಕಳೊಡನೆ ಜಗಳವಾಡುತ್ತದೆ. ನಿರ್ದಿಷ್ಟ ಕಲಿಕಾ ವಿಕಲತೆ (Specific Learning Disability-SLD) ಎಂದೂ ಕರೆಯಲ್ಪಡುವ ಡಿಸ್ಲೆಕ್ಸಿಯಾ ಇರುವ ಮಕ್ಕಳು ಸರಾಸರಿ ಮಟ್ಟಕ್ಕಿಂತ ಹೆಚ್ಚು ಬುದ್ಧಿವಂತಿಕೆಯನ್ನು ಹೊಂದಿರುತ್ತಾರೆ ಹಾಗೂ ಅತ್ಯಂತ ಸೃಜನಶೀಲರಾಗಿರುತ್ತಾರೆ. ಸಕಾಲದಲ್ಲಿ ಗುರುತಿಸಿ ನೆರವು ನೀಡದಿದ್ದರೆ ಅವರು ಶಾಲೆಗೆ ಹೋಗುವುದನ್ನು ಬಿಟ್ಟು ಬಿಡಬಹುದು ಹಾಗೂ ಸಾಮಾಜಿಕವಾಗಿ ಅಪರಾಧಿಗಳಾಗಬಹುದು.

**ಡಿಸ್ಲೆಕ್ಸಿಯಾ ಎಂದರೇನು?**

ಡಿಸ್ಲೆಕ್ಸಿಯಾ ಒಂದು ರೋಗವಲ್ಲ. ಇದೊಂದು ನರಸಂಬಂಧಿ ಪರಿಸ್ಥಿತಿಯಾಗಿದ್ದು, (Neurological condition) ಇಲ್ಲಿ ಮೆದುಳು ಮಾಹಿತಿಯನ್ನು ವಿಭಿನ್ನ ರೀತಿಯಲ್ಲಿ ಸಂಸ್ಕರಿಸುತ್ತದೆ. ವೈಕಲ್ಯವುಳ್ಳ ವ್ಯಕ್ತಿಗಳ ಹಕ್ಕುಗಳ ಕಾಯಿದೆ 2016ರ ಪ್ರಕಾರ (ಕಲಂ2ರ ಖಂಡ2ಎ, ಪುಟ 34), ಡಿಸ್ಲೆಕ್ಸಿಯಾ ಅಥವಾ ಎಸ್‌ಡಿಎಲ್ ಎಂದರೆ,'... ವಿಭಿನ್ನ ಸ್ವರೂಪದ ಪರಿಸ್ಥಿತಿಗಳ ಸಮೂಹವಾಗಿದ್ದು, ಮಾತಿನಲ್ಲಿ ಅಥವಾ ಬರಹದಲ್ಲಿ ಭಾಷೆಯನ್ನು ಸಂಸ್ಕರಿಸುವ ನಿಟ್ಟಿನಲ್ಲಿ ಅಸಮರ್ಥತೆ ಇರುತ್ತದೆ. ಈ ವಿಕಲತೆಯು ವಿಷಯವನ್ನು ಅರ್ಥಮಾಡಿಕೊಳ್ಳುವಾಗ, ಮಾತನಾಡುವಾಗ, ಓದುವಾಗ, ಬರೆಯುವಾಗ, ಕಾಗುಣಿತ ಹೇಳುವಾಗ ಅಥವಾ ಗಣಿತದ ಲೆಕ್ಕಗಳನ್ನು ಬಿಡಿಸುವಾಗ ಆ ಮಕ್ಕಳು ಕಷ್ಟಪಡುತ್ತಿರುವ ರೀತಿಯಲ್ಲಿ ಪ್ರಕಟವಾಗುತ್ತದೆ. ಈ ಪರಿಸ್ಥಿತಿಗಳ ಸಮೂಹವು ಗ್ರಹಣಶಕ್ತಿಯ ಅಸಮರ್ಥತೆ, ಡಿಸ್ಲೆಕ್ಸಿಯಾ, (ಓದುವಿಕೆ ಕಷ್ಟ) ಡಿಸ್‌ಗ್ರಾಫಿಯಾ (ಬರೆಯುವಿಕೆ ಕಷ್ಟ), ಡಿಸ್‌ಕ್ಯಾಲ್ಕುಲಿಯಾ (ಲೆಕ್ಕ ಮಾಡುವಲ್ಲಿ ಕಷ್ಟ), ಡಿಸ್‌ಪ್ರಾಕ್ಸಿಯಾ (ಅಂಗ ಸಮನ್ವಯತೆ ಕಷ್ಟ) ಹಾಗೂ ಡೆವಲೆಪ್‌ಮೆಂಟಲ್ ಅಫೆಸಿಯಾ (ಮಿದುಳಿಗೆ ಏಟು ಬಿದ್ದು ಭಾಷಾ ಪ್ರಯೋಗದ ಕಷ್ಟ) ಮುಂತಾದ ಪರಿಸ್ಥಿತಿಗಳನ್ನು ಒಳಗೊಂಡಿದೆ.

'ಡಿಸ್ಲೆಕ್ಸಿಯಾ ಮಿದುಳಿಗೆ ಸಂಬಂಧಪಟ್ಟ ಕಲಿಕಾ ವಿಕಲತೆಯಾಗಿದ್ದು, ಇದು ನಿರ್ದಿಷ್ಟವಾಗಿ ಮನುಷ್ಯನ ಓದುವ ಸಾಮರ್ಥ್ಯವನ್ನು ಕುಂಠಿತಗೊಳಿಸುತ್ತದೆ. ಇವರು ಸಾಧಾರಣ ಬುದ್ಧಿಮತ್ತೆಯನ್ನು ಹೊಂದಿದ್ದರೂ ಓದಿನ ವಿಷಯದಲ್ಲಿ ನಿರೀಕ್ಷಿತ ಮಟ್ಟಕ್ಕಿಂತ ಕಡಿಮೆ ಮಟ್ಟದಲ್ಲಿರುತ್ತಾರೆ.' (ನ್ಯಾಷನಲ್ ಇನ್ಸ್‌ಟಿಟ್ಯೂಟ್ ಆಫ್ ನ್ಯೂರೊ-ಲಾಜಿಕಲ್ ಡಿಸ್‌ಆರ್ಡರ್ಸ್ ಹಾಗೂ ಸ್ಟ್ರೋಕ್).

**ಡಿಸ್ಲೆಕ್ಸಿಯಾ ಗುಣಲಕ್ಷಣಗಳು**

ಡಿಸ್ಲೆಕ್ಸಿಯಾ ಗುಣಲಕ್ಷಣಗಳು ಆಯಾ ವ್ಯಕ್ತಿಗೆ ನಿರ್ದಿಷ್ಟವಾಗಿರುತ್ತದೆ. ಅಂದರೆ, ಡಿಸ್ಲೆಕ್ಸಿಯಾ ಇರುವ ಇಬ್ಬರು ವ್ಯಕ್ತಿಗಳ ಗುಣಗಳು ಒಂದೇ ರೀತಿಯದಾಗಿರುವುದಿಲ್ಲವಾದರೂ ಕೆಲವು ಗುಣಗಳನ್ನು ಸಾಮಾನ್ಯವಾಗಿ ಎಲ್ಲರಲ್ಲಿಯೂ ಕಾಣಬಹುದು.

- ಧ್ವನಿಗಳ ಸಂಸ್ಕರಣೆಯಲ್ಲಿ ಸಮಸ್ಯೆ-ಪೆಟ್ ಬದಲಿಗೆ ಪಾಟ್
- ಕಾಗುಣಿತ ಅಥವಾ ಅಕ್ಷರಬಿಡಿಸಿ ಹೇಳುವಲ್ಲಿ ವಿಕಲತೆ - Powder ಎಂದು ಹೇಳುವ ಬದಲಾಗಿ Powdr ಎಂದು ಹೇಳುವುದು.
- ಅಕ್ಷರಗಳನ್ನು ಹಿಂದುಮುಂದಾಗಿ ಓದುವುದು; ಅಕ್ಷರಗಳ ಕ್ರಮಾನುಗತತೆ ಬಗ್ಗೆ ಇರುವ ಗೊಂದಲ-ಬಿ ಮತ್ತು ಡಿ, form-from.
- ಉದ್ದನೆಯ ಪದಗಳನ್ನು ಓದುವುದಕ್ಕೆ ಕಷ್ಟಪಡುವುದು.
- ಪದಗಳನ್ನು ಬಿಟ್ಟುಬಿಡುವುದು ಅಥವಾ ತಪ್ಪಾಗಿ ಓದುವುದು - ಪ್ಲೇಯಿಂಗ್ ಬದಲಿಗೆ ಪ್ಲೇ, Earth ಬದಲಿಗೆ Every ಎಂದು ಓದುವುದು.
- ತರಗತಿಯಲ್ಲಿ ಕೊಟ್ಟ ಕೆಲಸಗಳನ್ನು ಪೂರ್ಣ-ಗೊಳಿಸುವಿಕೆಯಲ್ಲಿನ ವಿಕಲತೆ.
- ಕಪ್ಪುಹಲಗೆಯ ಮೇಲೆ ಬರೆದಿರುವುದನ್ನು ಬರೆದುಕೊಳ್ಳಲು ಕಷ್ಟಪಡುವುದು.
- ಸಂಖ್ಯೆಗಳನ್ನು ಹಿಂದುಮುಂದಾಗಿ ಓದುವುದು; ಸ್ಥಾನ ಬೆಲೆಗಳ ಬಗ್ಗೆ ಅರಿವು ಇಲ್ಲದಿರುವಿಕೆ.
- ಸಮಯದ ಬಗ್ಗೆ ಅರಿವು ಕಡಿಮೆ.
- ಯೋಜಿಸುವುದು, ಆದ್ಯತೆಯ ಆಯ್ಕೆಗಳಲ್ಲಿ ಹಾಗೂ ಸಂಘಟಿಸುವ ವಿಷಯಗಳಲ್ಲಿ ಕಷ್ಟಪಡುವುದು.

ಡಿಸ್ಲೆಕ್ಸಿಯಾ ಇರುವ 5ನೇ ತರಗತಿಯ ಮಗುವಿನ ಆಂಗ್ಲ ಭಾಷೆಯ ತರಗತಿ ಪಾಠಗಳ ಕೆಲವು ನಮೂನೆಗಳನ್ನು ಕೆಳಗೆ ತೋರಿಸಲಾಗಿದೆ. ಅಕ್ಷರಗಳನ್ನು ತಪ್ಪಾಗಿ ಬರೆದ ಕೆಲವು ಪದಗಳು: causes, town folk, dragon, expect, wall.




ಡಿಸ್ಲೆಕ್ಸಿಯಾ ಇರುವ 11ನೇ ತರಗತಿಯ ವಿದ್ಯಾರ್ಥಿಯು ಮಾಡಿರುವ ಜಮಾಖರ್ಚಿನ ಲೆಕ್ಕಾಚಾರ ಹಾಗೂ ಆಂಗ್ಲ ಭಾಷೆಯ ತರಗತಿಯ ಪಾಠ






**ಡಿಸ್ಲೆಕ್ಸಿಯಾ ಇರುವ ಮಕ್ಕಳನ್ನು ಗುಣಪಡಿಸುವುದು**
**ಸಣ್ಣ ಮಕ್ಕಳಿರುವಾಗಲೇ ಗಮನಿಸಬೇಕು**

ಇದು ಅತ್ಯುತ್ತಮ ಪರಿಹಾರ. ಕಿರಿಯ ಪ್ರಾಥಮಿಕ ತರಗತಿ ಹಂತದಲ್ಲಿಯೇ ಮಕ್ಕಳಲ್ಲಿ ಕಲಿಕಾ ವಿಕಲತೆಗಳಿರುವುದು ಗಮನಕ್ಕೆ ಬಂದಾಗ ಅವರ ಅಗತ್ಯಕ್ಕೆ ತಕ್ಕಂತೆ ಪರಿಹಾರಾತ್ಮಕ ಉಪ–ಕ್ರಮಗಳನ್ನು ಆರಂಭಿಸಿದಾಗ, ಅವರು ಶೈಕ್ಷಣಿಕವಾಗಿಯೂ ಸಾಧನೆಯನ್ನು ಮಾಡುತ್ತಾರೆ ಹಾಗೂ ಸಮಾಜದಲ್ಲಿಯೂ ಉತ್ತಮವಾಗಿ ಹೊಂದಿಕೊಳ್ಳುತ್ತಾರೆ.

ಶಿಕ್ಷಕರಿಗೆ ಡಿಸ್ಲೆಕ್ಸಿಯಾವನ್ನು ಗುಣಪಡಿಸಲು ಅವಶ್ಯಕವಿರುವ ವಿಧಾನಗಳ ತರಬೇತಿಯನ್ನು ನೀಡಬೇಕು.

ಪ್ರಾಥಮಿಕ ಶಾಲಾ ಶಿಕ್ಷಕರು ಡಿಸ್ಲೆಕ್ಸಿಯಾ ಇರುವ ಮಕ್ಕಳನ್ನು ಗುರುತಿಸಿ ಅವರಿಗೆ ತರಗತಿಯ ಮಟ್ಟದಲ್ಲಿಯೇ ಪರಿಹಾರವನ್ನು ಒದಗಿಸುವ ಸಾಮರ್ಥ್ಯಹೊಂದಿ ಸಜ್ಜಾಗಿರಬೇಕು. ಮದ್ರಾಸ್ ಡಿಸ್ಲೆಕ್ಸಿಯಾ ಸಂಸ್ಥೆಯು (ಎಮ್‌ಡಿಎ)1 ಸರ್ಕಾರಿ ಹಾಗೂ ಖಾಸಗಿ ಶಾಲಾ ಶಿಕ್ಷಕರಿಗೆ, ಶಿಕ್ಷಕ ತರಬೇತಿ ಕಾರ್ಯಕ್ರಮಗಳನ್ನು ನಡೆಸುತ್ತಾರೆ. ಶಾಲೆಗಳಲ್ಲಿಯೇ ಸಂಪನ್ಮೂಲ ಕೊಠಡಿಗಳನ್ನು ಸ್ಥಾಪಿಸಿ ಮಕ್ಕಳಿಗೆ ಶಾಲಾ ಆವರಣದಲ್ಲಿಯೇ ಪರಿಹಾರ ದೊರಕುವಂತೆ ಎಮ್‌ಡಿಎ ಸಂಸ್ಥೆ ಮಾಡುತ್ತದೆ.

**ತಜ್ಞರಿಂದ ಪರಿಸ್ಥಿತಿ ನಿರ್ಧರಣೆ ಮಾಡಿಸುವುದು**

ಪ್ರಮಾಣೀಕೃತ ಸಾಧನಗಳನ್ನು ಬಳಸಿ ಮಾಡುವ ನಿರ್ಧರಣೆಗಳು ಒಬ್ಬ ವ್ಯಕ್ತಿಯಲ್ಲಿ ಡಿಸ್ಲೆಕ್ಸಿಯಾ ಇರುವುದನ್ನು ಖಚಿತಪಡಿಸುತ್ತವೆ. ಇದು ತಂದೆ ತಾಯಿಗಳು ಆ ಮಗುವಿನ ಸಾಮರ್ಥ್ಯಗಳನ್ನು ಹಾಗೂ ಅಗತ್ಯಗಳನ್ನು ಅರಿತು ತಕ್ಕ ಸಮಯದಲ್ಲಿ ಉಪಕ್ರಮಗಳನ್ನು ಯೋಜಿಸಿ ಆ ಮಗುವು ಕಷ್ಟವನ್ನು ನಿಭಾಯಿಸಲು ಸಹಾಯ ಒದಗಿಸಲು ಅವಕಾಶ ಮಾಡಿಕೊಡುವುದಕ್ಕೆ ನೆರವಾಗುತ್ತದೆ. ಎಲ್ಲ ಪರೀಕ್ಷಾ ಮಂಡಳಿಗಳು ಎಸ್‌ಎಲ್‌ಡಿ (ನಿರ್ದಿಷ್ಟ ಕಲಿಕಾ ವಿಕಲತೆ) ಇರುವ ಮಕ್ಕಳಿಗೆ ಹಲವಾರು ರಿಯಾಯಿತಿಗಳನ್ನು ನೀಡುತ್ತವೆ.

ಮೌಲ್ಯಮಾಪನವು ಮಗುವಿಗೆ ಯಾವ ರೀತಿಯ ಎಸ್‌ಎಲ್‌ಡಿ ಇದೆ ಎಂದು ತೋರಿಸುತ್ತದೆ. ಉದಾಹರಣೆಗೆ ಡಿಸ್ಲೆಕ್ಸಿಯಾ, ಡಿಸ್‌ಪ್ರಾಕ್ಸಿಯಾ, ಡಿಸ್‌ಕ್ಯಾಲ್‌ಕುಲಿಯಾ, ಡಿಸ್‌ಗ್ರಾಫಿಯಾ, ಈ ನ್ಯೂನತೆಗಳ ತೀವ್ರತೆ ಹಾಗೂ ಎಸ್‌ಎಲ್‌ಡಿಯ ಜೊತೆಗೆ ಇರುವ ಅಸ್ವಸ್ಥ ಪರಿಸ್ಥಿತಿಗಳಾದ ಅತಿ ಚಟುವಟಿಕೆ ಗಮನದ ಕೊರತೆ (Attention Deficit Hyperactivity Disorder- ADHD) ಅನಂತರ ಅಗತ್ಯವಾಗಿ ಕೊಡಬೇಕಾದ ಪರಿಹಾರಗಳು ಹಾಗೂ ಚಿಕಿತ್ಸೆಗಳು ಯಾವುದೆಂದು ಸ್ಪಷ್ಟವಾಗುತ್ತವೆ, ಉದಾಹರಣೆಗೆ ವಾಕ್ ಚಿಕಿತ್ಸೆ ಹಾಗೂ / ಅಥವಾ ಚಟುವಟಿಕೆಯಲ್ಲಿ ತೊಡಗಿಸುವ ಚಿಕಿತ್ಸೆ (Occupational therapy-OT).

**ಪರಿಹಾರಾತ್ಮಕ ಉಪಕ್ರಮಗಳು ಎಂದರೇನು?**

- ಇದು ವ್ಯವಸ್ಥಿತವಾಗಿರುತ್ತದೆ
- ಇದು ಮಗುವಿನ ಸಾಮರ್ಥ್ಯ ಹಾಗೂ ಅಗತ್ಯಗಳನ್ನು ಗುರುತಿಸುತ್ತದೆ
- ಇದು ವೈಯಕ್ತಿಕವಾಗಿರುತ್ತದೆ
- ಇದು ಬಹು ಸಂವೇದನಾಶೀಲವಾಗಿರುತ್ತದೆ

**ಡಿಸ್ ಪ್ರಾಕ್ಸಿಯಾ, ಡಿಸ್‌ಕ್ಯಾಲ್ ಕುಲಿಯಾ, ಡಿಸ್‌ಗ್ರಾಫಿಯಾ, ಡಿಸ್ ಪ್ರಾಕ್ಸಿಯಾ**

ಡೆವೆಲಪ್‌ಮೆಂಟಲ್ ಡಿಸ್‌ಪ್ರಾಕ್ಸಿಯಾ ಒಂದು ನ್ಯೂನತೆಯಾಗಿದ್ದು, ಇದರ ಲಕ್ಷಣಗಳೆಂದರೆ ಸಂವೇದನಾ ಹಾಗೂ ಚಾಲನಾ ಕೌಶಲ್ಯಗಳನ್ನು ಯೋಜಿಸಿ ಕಾರ್ಯರೂಪಕ್ಕೆ ತರುವ ಸಾಮರ್ಥ್ಯದ ದೌರ್ಬಲ್ಯವನ್ನು ಹೊಂದಿರುವುದು. (ಆಕರ: ನ್ಯಾಷನಲ್ ಇನ್ಸ್‌ಟಿಟ್ಯೂಟ್ ಆಫ್ ನ್ಯೂರೊಲಾಜಿಕಲ್ ಡಿಸ್‌ಆರ್ಡರ್ಸ್ ಹಾಗೂ ಸ್ಟ್ರೋಕ್). ಡಿಸ್‌ಪ್ರಾಕ್ಸಿಯಾ ಇರುವ ಮಕ್ಕಳಿಗೆ ಚಟುವಟಿಕೆಯಲ್ಲಿ ತೊಡಗಿಸುವ ಚಿಕಿತ್ಸೆ (Occupational therapy) ಹಾಗೂ ವಿಶೇಷ ಶಿಕ್ಷಣದ ಅಗತ್ಯವಿದೆ.

**ಡಿಸ್‌ಪ್ರಾಕ್ಸಿಯಾದ ಗುಣಲಕ್ಷಣಗಳು**

ಅ) ಸಮತೋಲನ ಹಾಗೂ ಹೊಂದಾಣಿಕೆ ಸಾಮರ್ಥ್ಯ ಕಡಿಮೆ ಇರುವುದು–ಎಡವುವುದು ಹಾಗೂ ಸುಲಭವಾಗಿ ಬೀಳುವುದು, ಜನರು ಹಾಗೂ ವಸ್ತುಗಳಿಗೆ ಡಿಕ್ಕಿ ಹೊಡೆಯುವುದು, ಬಲ–ಎಡದ ಹೊಂದಾಣಿಕೆಯಲ್ಲಿ ಗೊಂದಲವಿರುವುದು.

ಆ) ಒಪ್ಪಓರಣ ಇಲ್ಲದಿರುವುದು ವಸ್ತುಗಳನ್ನು ಬೀಳಿಸುವುದು, ಕೈ ಹಿಡಿತ ದೃಢವಾಗಿರುವುದಿಲ್ಲ, ಕೈಬರಹ ಕೊಚಾಪಿಚಿ ಆಗಿರುವುದು.

ಇ) ವಿಷಯ ಗ್ರಹಣದಲ್ಲಿ ತೊಂದರೆಗಳು – ನಕ್ಷೆಗಳನ್ನು ಓದಲಾಗುವುದಿಲ್ಲ, ರಸ್ತೆಯನ್ನು ದಾಟುವುದರಲ್ಲಿನ ಸಮಸ್ಯೆ.

ಈ) ಭಾವನಾತ್ಮಕ ಹಾಗೂ ವರ್ತನಾ ಸಮಸ್ಯೆಗಳು

ಉ) ಓದುವುದು, ಬರೆಯುವುದು ಹಾಗೂ ಮಾತ–ನಾಡುವುದರಲ್ಲಿ ಸಮಸ್ಯೆಗಳು

ಊ) ಸಾಮಾಜಿಕ ಕೌಶಲ್ಯಗಳು ಕಡಿಮೆ, ನಿಲುವು ಹಾಗೂ ಜ್ಞಾಪಕಶಕ್ತಿ ಕಡಿಮೆ ಇರುವುದು.

ಡಿಸ್‌ಪ್ರಾಕ್ಸಿಯಾ ಹಾಗೂ ಡಿಸ್ಲೆಕ್ಸಿಯಾ ಇರುವ 10ನೇ ತರಗತಿ ವಿದ್ಯಾರ್ಥಿಯ ಬೇಕರಿ ಹಾಗೂ ಮಿಠಾಯಿ ಮಾಡುವ ತರಗತಿ ಪಾಠ.




**ಡಿಸ್‌ಕ್ಯಾಲ್ ಕುಲಿಯಾ**

ಡಿಸ್‌ಕ್ಯಾಲ್ ಕುಲಿಯಾ ಒಂದು ವಿಕಲತೆಯಾಗಿದ್ದು, ಸಂಖ್ಯೆಗಳನ್ನು ಅರ್ಥಮಾಡಿಕೊಳ್ಳಲು ಹಾಗೂ ಗಣಿತದ ಸೂತ್ರಗಳನ್ನು ಅನ್ವಯಿಸಿ ಸಮಸ್ಯೆಗಳನ್ನು ಪರಿಹರಿಸಲು ಅಸಮರ್ಥರಾಗಿರುತ್ತಾರೆ ಎಂಬುದು ಇದರ ಲಕ್ಷಣಗಳು. (ಆಕರ: ಬ್ರಿಟಿಷ್ ಡಿಸ್ಲೆಕ್ಸಿಯಾ ಅಸೋಸಿಯೇಷನ್)

**ಡಿಸ್‌ಕ್ಯಾಲ್‌ಕುಲಿಯಾದ ಗುಣಲಕ್ಷಣಗಳು**

ಅ) ಎರಡು ಸಂಖ್ಯೆಗಳಲ್ಲಿ ಯಾವುದು ದೊಡ್ಡದು ಎಂದು ಅರ್ಥೈಸಲು ಅಸಮರ್ಥರು.

ಆ) ಪರಿಣಾಮಕಾರಿ ಎಣಿಕೆಯ ತಂತ್ರಗಳ ಕೊರತೆ.

ಇ) ಸಂಖ್ಯೆಗಳನ್ನು ಗುರುತಿಸಿ ಹೇಳುವುದರಲ್ಲಿ ಸರಾಗವಾಗಿ ಸಂಖ್ಯೆಗಳನ್ನು ಗುರುತಿಸಲಾಗದಿರುವುದು.

ಈ) ಸರಳವಾಗಿರುವ ಒಂದಂಕಿ ಸಂಖ್ಯೆಗಳನ್ನು ಮನಸ್ಸಿನಲ್ಲೇ ಕೂಡಿಸಲು ಅಸಮರ್ಥರಾಗಿರುವುದು.

ಉ) ಕೆಲಸದಲ್ಲಿ ಜ್ಞಾಪಕಶಕ್ತಿಯ ಮಿತಿ.




ಡಿಸ್‌ಪ್ರಾಕ್ಸಿಯಾ ಹಾಗೂ ಡಿಸ್ಲೆಕ್ಸಿಯಾ ಇರುವ 10ನೇ ತರಗತಿ ವಿದ್ಯಾರ್ಥಿಯಿಂದ ಗುಣಾಕಾರ.




ಡಿಸ್‌ಗ್ರಾಫಿಯಾ ಎನ್ನುವುದು ನರಸಂಬಂಧೀ ವಿಕಲತೆಯಾಗಿದ್ದು ಇದರ ಲಕ್ಷಣವೆಂದರೆ ಬರವಣಿಗೆಯಲ್ಲಿನ ಅಸಮರ್ಥತೆ. ಸ್ಪಷ್ಟವಾಗಿ ಹೇಳಬೇಕೆಂದರೆ ಈ ವಿಕಲತೆಯಿಂದಾಗಿ ಒಬ್ಬ ವ್ಯಕ್ತಿಯ ಬರವಣಿಗೆಯು ವಕ್ರವಾಗಿರುತ್ತದೆ ಅಥವಾ ತಪ್ಪಾಗಿರುತ್ತದೆ. ಮಕ್ಕಳಲ್ಲಿ ಈ ನ್ಯೂನತೆಯು ಸಾಮಾನ್ಯವಾಗಿ ಬರವಣಿಗೆಯನ್ನು ಆರಂಭಿಸುವ ಸಮಯದಲ್ಲಿ ವ್ಯಕ್ತವಾಗುತ್ತದೆ. ಕಟ್ಟುನಿಟ್ಟಾದ ಸೂಚನೆಗಳ ಹೊರತಾಗಿಯೂ ಅವರು ಅಕ್ಷರಗಳ ಗಾತ್ರ ಹಾಗೂ ಅಂತರದಲ್ಲಿ ಹೊಂದಿಕೆಯಾಗದಂತೆ ಬರೆಯುತ್ತಾರೆ, ತಪ್ಪಾದ ಪದಗಳು ಅಥವಾ ಅಕ್ಷರ ತಪ್ಪಾಗಿರುವ ಪದಗಳನ್ನು ಬರೆಯುತ್ತಾರೆ. ಈ ವಿಕಲತೆ ಇರುವ ಮಕ್ಕಳು ಇತರ ಕಲಿಕಾ ವಿಕಲತೆಗಳನ್ನೂ ಹೊಂದಿರಬಹುದು; ಆದರೆ ಸಾಮಾನ್ಯವಾಗಿ ಅವರಲ್ಲಿ ಬೇರೆ ರೀತಿಯ ಸಾಮಾಜಿಕ ಹಾಗೂ ಶೈಕ್ಷಣಿಕ ಸಮಸ್ಯೆಗಳು ಇರುವುದಿಲ್ಲ. (ಆಕರ: ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ನ್ಯೂರೊಲಾಜಿಕಲ್ ಡಿಸ್‌ಆರ್ಡರ್ಸ್ ಹಾಗೂ ಸ್ಟ್ರೋಕ್)

**ಮಗುವನ್ನು ಮೌಲ್ಯಮಾಪನಕ್ಕೆ ಕಳುಹಿಸಿದಾಗ ಏನಾಗುತ್ತದೆ?**

ಒಂದು ಮಗುವಿನಲ್ಲಿ ಯಾವ ರೀತಿಯ ಎಸ್‌ಎಲ್‌ಡಿ ಇರುವುದೆಂದು ಪತ್ತೆಹಚ್ಚಲು ತಜ್ಞರು ವೈಜ್ಞಾನಿಕವಾಗಿ ವಿನ್ಯಾಸಗೊಳಿಸಿದ ಪರೀಕ್ಷೆಗಳು / ವಿಧಾನಗಳನ್ನೇ ಮೌಲ್ಯಮಾಪನ ಎನ್ನುತ್ತಾರೆ. ಅವರು ತಯಾರಿಸಿದ ವರದಿಯ ಸಹಾಯದಿಂದ ವಿಶೇಷ ಶಿಕ್ಷಕರು, ತಯಾರಿಸಿ ಮಗುವಿಗೆ ಪರಿಹಾರ ಒದಗಿಸಲು ವೈಯಕ್ತಿಕ ಶೈಕ್ಷಣಿಕ ಯೋಜನೆಯೊಂದನ್ನು (ಐಇಪಿ) ತಯಾರಿಸಬಹುದು. ಈ ವರದಿಯು ಮಗುವಿಗೆ ವಾಕ್ ಅಥವಾ ಚಟುವಟಿಕೆ ಚಿಕಿತ್ಸೆಯ ಅಗತ್ಯವಿದೆಯೇ ಎಂಬುದನ್ನೂ ತಿಳಿಸುತ್ತದೆ.

**ಶಾಲೆ, ಪೋಷಕ, ವಿಶೇಷ ಶಿಕ್ಷಕರು–ಈ ಮೂವರ ಪ್ರಾಮುಖ್ಯತೆ**

ಎಸ್‌ಎಲ್‌ಡಿ ಇರುವ ಮಕ್ಕಳೊಡನೆ ಕೆಲಸ ಮಾಡುವುದರಿಂದ ದೊರೆತ ಅನುಭವ ಹಾಗೂ ಸಂಶೋಧನೆಯ ಮೂಲಕ ಕಂಡು ಬಂದಿರುವುದೇನೆಂದರೆ, ಈ ಮಕ್ಕಳಿಗೆ ಶಾಲೆಯಿಂದ, ಪೋಷಕರಿಂದ ಹಾಗೂ ವಿಶೇಷ ಶಿಕ್ಷಕರಿಂದ ಬಲವಾದ ಒತ್ತಾಸೆ ಬೆಂಬಲವಿದ್ದಾಗ ಅವರು ಶೈಕ್ಷಣಿಕವಾಗಿಯೂ ಹಾಗೂ ಸಾಮಾಜಿಕ ಜೀವನದಲ್ಲಯೂ ಯಶಸ್ಸನ್ನು ಸಾಧಿಸುತ್ತಾರೆ ಎಂಬುದು. ಮೂವರೂ ಒಟ್ಟಾಗಿ ಕೆಲಸ ಮಾಡಿದಾಗ ಹಾಗೂ ಪರಸ್ಪರ ಸಹಕರಿಸಿದಾಗ, ಮಕ್ಕಳು ತಾವು ಅಪೂರ್ವ ಸಾಧನೆ ಮಾಡಬಲ್ಲ ವೃತ್ತಿಗಳನ್ನು ಆಯ್ದುಕೊಳ್ಳುತ್ತಾರೆ ಹಾಗೂ ಸಮಾಜಕ್ಕೆ ಪ್ರಮುಖ ಕೊಡುಗೆ ನೀಡುವ ಪ್ರೌಢರಾಗಿ ರೂಪುಗೊಳ್ಳುತ್ತಾರೆ.

**ಎಸ್‌ಎಲ್‌ಡಿ ಇರುವ ಮಕ್ಕಳ ತಂದೆ ತಾಯಿಗಳಿಗೆ ಸಲಹೆ ಮತ್ತು ಮಾರ್ಗದರ್ಶನ**

ಯಾವುದೇ ತಂದೆ ತಾಯಿಗಳಿಗೆ ತಮ್ಮ ಮಗು ಕಲಿಕಾ ವಿಕಲತೆಯನ್ನು ಹೊಂದಿದೆ ಎಂದು ತಿಳಿದಾಗ ಆಘಾತವಾಗುತ್ತದೆ. ಮೊದಲಿಗೆ ಅವರು ಅದನ್ನು ನಿರಾಕರಿಸಿದರೂ ಸಮಯ ಕಳೆದಂತೆ ಈ ನಿಜವನ್ನು ಒಪ್ಪಿಕೊಳ್ಳಲು ಮುಂದಾಗುತ್ತಾರೆ. ಬಹಳಷ್ಟು ಸಲ ತಂದೆ ತಾಯಿಗಳಲ್ಲಿ ಯಾರಾದರೂ ಒಬ್ಬರು ಸಹಕರಿಸಿದರೂ (ಉದಾಹರಣೆಗೆ ತಾಯಿ) ಮತ್ತೊಬ್ಬರು (ಉದಾಹರಣೆಗೆ ತಂದೆ) ಇದನ್ನು ತೀವ್ರವಾಗಿ ವಿರೋಧಿಸಬಹುದು. ಹೀಗಾಗಿ ಶಾಲಾ ಶಿಕ್ಷಕರು, ವಿಶೇಷ ಶಿಕ್ಷಕರು ಹಾಗೂ ಪ್ರಾಂಶುಪಾಲರು ತಂದೆತಾಯಿಗಳಿಗೆ ಬಹಳಷ್ಟು ಸಲ ಮಾರ್ಗದರ್ಶನದ ಮೂಲಕ ಅವರ ಮಗುವಿಗೆ ಪರಿಹಾರಾತ್ಮಕ ಉಪಕ್ರಮಗಳಿಂದ ದೊರಕ–ಬಹುದಾದ ಪ್ರಯೋಜನಗಳನ್ನು ಕುರಿತು ಹೇಳುವುದು ಮುಖ್ಯವಾಗುತ್ತದೆ.

**ಬಹುವಿಧ ಬುದ್ಧಿಮತ್ತೆಗಳು**
**(Multiple Intelligences (MI)**

ಎಸ್‌ಎಲ್‌ಡಿ ಇರುವ ಮಕ್ಕಳಿಗೆ ಕಲಿಸಲು ಇದೊಂದು ಪ್ರಮುಖವಾದ ಸಾಧನವಾಗಿದ್ದು ಇದು ಹೋವರ್ಡ್ ಗಾರ್ಡ್‌ನರ್ ಅವರ ಬಹುವಿಧ ಬುದ್ಧಿಮತ್ತೆಗಳ ಸಿದ್ಧಾಂತವನ್ನು (Multiple Intelligences (MI) ಆಧರಿಸಿದೆ. ರೂಢಿಗತ ವಿಧಾನದ ಪ್ರಕಾರ, ಬುದ್ಧಿಮತ್ತೆಯನ್ನು ಬುದ್ಧಿವಂತಿಕೆಯ ಪ್ರಮಾಣದ (intelligence quotient-IQ) ಮೇಲೆ ಅಳೆಯಲಾಗುತ್ತಿದ್ದು, ಇದು ಒಬ್ಬ ಮನುಷ್ಯನು ಭಾಷೆಯ ಬಗ್ಗೆ ಹೊಂದಿರುವ ನೈಪುಣ್ಯವನ್ನು ಭಾಷಾಶಾಸ್ತ್ರ (Linguistic) ಹಾಗೂ ತಾರ್ಕಿಕ ಗಣಿತಾತ್ಮಕ (Logical mathematical) ಸಾಮರ್ಥ್ಯಗಳನ್ನು ಪರೀಕ್ಷಿಸುತ್ತದೆ. ಭಾರತದ ಶಾಲೆಗಳಲ್ಲಿ ಈಗಿರುವ ರೂಢಿಯಂತೆ ಯಾವುದೇ ಒಂದು ಮಗುವನ್ನು ಈ ಎರಡೂ ಕ್ಷೇತ್ರಗಳ ಸಾಮರ್ಥ್ಯದ ಮೇಲೆಮಾತ್ರವೇ ಪರೀಕ್ಷಿಸಿದಾಗ ವಾಡಿಕೆಯ ತರಗತಿಯಲ್ಲಿನ ಇತರ ಮಕ್ಕಳಿಗೆ ಅನ್ಯಾಯ ಮಾಡಿದಂತಾಗುತ್ತದೆ. ಏಕೆಂದರೆ ಪ್ರತಿ ವ್ಯಕ್ತಿಯೂ ವಿಭಿನ್ನ ಸಾಮರ್ಥ್ಯಗಳನ್ನು ಬಳಸುತ್ತಾ ವಿಭಿನ್ನವಾಗಿ ಕಲಿಯುತ್ತಾನೆ. ಭಾಷೆಯಲ್ಲಿ (ಭಾಷಾಶಾಸ್ತ್ರ) ಹಾಗೂ ಗಣಿತದಲ್ಲಿ (ತಾರ್ಕಿಕ ಗಣಿತೀಯ) ಸಮಸ್ಯೆ ಎದುರಿಸುವ ಮಕ್ಕಳು ಕಲಿಯಲಾರದೇ ಹೋಗುತ್ತಾರೆ. ಎಲ್ಲಕ್ಕೂ ಮಿಗಿಲಾಗಿ ತರಗತಿಯ ಎಲ್ಲ ಮಕ್ಕಳು ಒಂದೇ ಸಮನಾಗಿ ಕಲಿಯುವುದೇ ಆಗಿದ್ದರೆ ಅವರು ಬರೆಯುವ ಉಪಪರೀಕ್ಷೆಗಳು ಹಾಗೂ ಪರೀಕ್ಷೆಗಳಲ್ಲಿ ಏಕರೂಪದ ಫಲಿತಾಂಶಗಳೇ ಬರಬೇಕಲ್ಲವೇ. ಆದರೆ ಅದು ಎಂದೂ ಆಗುವುದಿಲ್ಲ. ಕಲಿಕೆಯು ಪ್ರತಿಯೊಬ್ಬ ವ್ಯಕ್ತಿಗೂ ವಿಶಿಷ್ಟವಾಗಿರುತ್ತದೆ. ಆದಕಾರಣ ಬೋಧನೆ ಹಾಗೂ ಮೌಲ್ಯಮಾಪನಗಳು ಒಂದು ತರಗತಿಯ ಕಲಿಕಾ ವೈವಿಧ್ಯತೆಗೆ ತಕ್ಕಂತೆ ರೂಪಿತವಾಗಿರಬೇಕು.

ಒಟಿದು ವಾಡಿಕೆಯ ತರಗತಿಯಲ್ಲಿ ಒಂದೊಂದು ಮಗುವಿನ ವೈಯಕ್ತಿಕ ಅಗತ್ಯಗಳನ್ನು ಪೂರೈಸುವಂತೆ ಬೋಧನಾ ವಿಧಾನಗಳನ್ನು ರೂಪಿಸುವುದು ವಾಸ್ತವವಾಗಿ ಕಷ್ಟ-ಸಾಧ್ಯವಾದ್ದರಿಂದ, ಎಮ್‌ಐ ಸಿದ್ಧಾಂತದ ಬಳಕೆ ಈ ಸಮಸ್ಯೆಯನ್ನು ಪರಿಹರಿಸುತ್ತದೆ. ಇದನ್ನು ಬಳಸಿ ಒಂದು ಪಾಠವನ್ನು ತರಗತಿಯಲ್ಲಿರುವ ಬಹುಪಾಲು ಮಕ್ಕಳಿಗೆ ಅರ್ಥವಾಗುವಂತೆ ವಿವಿಧ ರೀತಿಯಲ್ಲಿ ಕಲಿಸಬಹುದು. ಈ ಸಿದ್ಧಾಂತವು ಒಂದು ಸಮಸ್ಯೆಯನ್ನು ವಿವಿಧ ದೃಷ್ಟಿಕೋನದಲ್ಲಿ ಅರ್ಥಮಾಡಿಕೊಂಡು ಪರಿಹಾರಗಳನ್ನು ಪಡೆಯುವುದಕ್ಕೆ ಪ್ರೋತ್ಸಾಹ ನೀಡುತ್ತದೆ. ಎಮ್‌ಐ ವಿಧಾನವು ವಿಭಿನ್ನ ದೃಷ್ಟಿಕೋನಗಳು ಹುಟ್ಟುವುದಕ್ಕೆ ಅವಕಾಶ ಮಾಡಿಕೊಡುತ್ತದೆ ಹಾಗೂ ಗುಂಪು ಕೆಲಸಗಳು ಮತ್ತು ಸಹಪಾಠಿಗಳಿಂದ ಕಲಿಕೆಯನ್ನು ಪ್ರೋತ್ಸಾಹಿಸುತ್ತದೆ.

**ಎಮ್‌ಐ ಎಂದರೇನು?**

ಬುದ್ಧಿವಂತಿಕೆ ಎಂಬ ಅರ್ಹತೆ ಪಡೆಯಲು, ಅದು ಹೋವರ್ಡ್ ಗಾರ್ಡ್‌ನರ್‌ನ ಬುದ್ಧಿವಂತಿಕೆಯ ಎಂಟು ಕುರುಹುಗಳನ್ನು ಈಡೇರಿಸಬೇಕು. ಬಹಳ ವ್ಯಾಪಕವಾದ ಸಂಶೋಧನೆಯ ನಂತರ ಗಾರ್ಡ್‌ನರ್ ಎಂಟು ವಿಭಿನ್ನ ಬುದ್ಧಿಮತ್ತೆಯನ್ನು ಗುರುತಿಸಿದ್ದಾರೆ. (ಆಕರ: ದಿ ಕಾಂಪೋನೆಂಟ್ಸ್ ಆಫ್ ಎಮ್‌ಐ)

**ಕ್ಷೇತ್ರೀಯ ಬುದ್ಧಿಮತ್ತೆ (Spatial Intelligence)**

1. ಒಂದು ದೊಡ್ಡ ಪ್ರಮಾಣದ ಕ್ಷೇತ್ರೀಯ ಸರಣಿಗಳನ್ನು (ಉದಾಹರಣೆಗೆ ವಿಮಾನ ಚಾಲಕ, ನಾವಿಕ) ಅಥವಾ ಒಂದು ಕ್ಷೇತ್ರದ ಸ್ಥಳೀಯ ರೂಪಗಳನ್ನು ಪರಿಕಲ್ಪಿಸುವ ಹಾಗೂ ಅವುಗಳನ್ನು ಕುಶಲತೆಯಿಂದ ನಿಭಾಯಿಸುವ ಸಾಮರ್ಥ್ಯ. (ಆಕರ: ದಿ ಕಾಂಪೋನೆಂಟ್ಸ್ ಆಫ್ ಎಮ್‌ಐ)
2. ಚೆನ್ನಾಗಿ ದೃಶ್ಯೀಕರಿಸುವುದು, ದಿಕ್ಕುಗಳ ಬಗ್ಗೆ ಒಳ್ಳೆಯ ಜ್ಞಾನ ಹಾಗೂ ಬಣ್ಣಗಳು, ರೂಪಗಳು, ಆಕಾರಗಳು, ಗಾತ್ರಗಳು ಮತ್ತು ಅವುಗಳ ಸಂಬಂಧಗಳ ನಡುವಿನ ವ್ಯತ್ಯಾಸವನ್ನು ಗುರುತಿಸುವುದು.
3. ಈ ಸಾಮರ್ಥ್ಯಗಳನ್ನು ವಾಸ್ತು ಶಿಲ್ಪಿಗಳು, ಚಿತ್ರ ಕಲಾವಿದರು, ವರ್ಣಚಿತ್ರ ಕಲಾವಿದರು, ಚೆಸ್ ಆಟಗಾರರು, ನಾವಿಕರು, ಬೇಟೆಗಾರರು, ಮಾರ್ಗದರ್ಶಕರು, ಖಗೋಳಯಾತ್ರಿಗಳಲ್ಲಿ ಕಾಣಬಹುದು.

**ದೈಹಿಕ-ಚಲನಾತ್ಮಕ ಬುದ್ಧಿಮತ್ತೆ (Bodily-Kinesthetic Intelligence)**

1. ಸಮಸ್ಯೆಗಳನ್ನು ಪರಿಹರಿಸುವುದಕ್ಕೆ ಅಥವಾ ವಸ್ತುಗಳನ್ನು ರಚಿಸುವುದಕ್ಕೆ ಸಂಪೂರ್ಣ ದೇಹವನ್ನು ಅಥವಾ ದೇಹದ ಕೆಲವು ಅಂಗಗಳನ್ನು (ಅಂದರೆ ಕೈಗಳು ಮತ್ತು ಬಾಯಿ ಮುಂತಾದವುಗಳನ್ನು) ಬಳಸುವ ಸಾಮರ್ಥ್ಯ'. (ಆಕರ: ದಿ ಕಾಂಪೋನೆಂಟ್ಸ್ ಆಫ್ ಎಮ್‌ಐ)
2. ದೇಹದ ಚಲನೆ ಹಾಗೂ ಕ್ರಿಯೆಗಳಲ್ಲಿ ಉತ್ತಮ ಹೊಂದಾಣಿಕೆ, ಸಮತೋಲನ, ಕರಕೌಶಲ, ಭಾವಭಂಗಿ, ನಮ್ಯತೆ, ವೇಗ ಇದರ ಮುಖ್ಯ ಲಕ್ಷಣ
3. ಈ ಸಾಮರ್ಥ್ಯವನ್ನು ಕ್ರೀಡಾಪಟುಗಳು, ನೃತ್ಯಪಟುಗಳು, ಶಿಲ್ಪಿಗಳು, ಶಸ್ತ್ರಚಿಕಿತ್ಸಕರು, ಸಮರಕಲಾ ಅಭ್ಯಾಸಿಗಳಲ್ಲಿ ಕಾಣಬಹುದು.

**ಸಂಗೀತದ ಬುದ್ಧಿಮತ್ತೆ**

1. ಲಯ, ಶ್ರುತಿ, ತಾಳ, ನಾದ, ರಾಗ, ಧ್ವನಿ, ಸ್ಥಾಯಿ, ಇಂಪು ಹಾಗೂ ನಾದಗುಣಗಳೆಡೆಗೆ ಸಂವೇದನಾ-ಶೀಲತೆಯನ್ನು ಹೊಂದಿರುವುದು. ಹಾಡುಗಾರಿಕೆ, ಸಂಗೀತ ವಾದ್ಯಗಳ ನುಡಿಸುವಿಕೆ ಹಾಗೂ/ಅಥವಾ ಸಂಗೀತ ಸಂಯೋಜಿಸುವ ಸಾಮರ್ಥ್ಯವನ್ನು ಹೊಂದಿರಬಹುದು.(ಆಕರ: ದಿ ಕಾಂಪೋನೆಂಟ್ಸ್ ಆಫ್ ಎಮ್‌ಐ)
2. ಸಂಗೀತ ಪ್ರಿಯರಾಗಿದ್ದು ಸಂಗೀತ ಪ್ರಕಾರಗಳನ್ನು ಗುರುತಿಸುವುದು ಮತ್ತು ತೀರ್ಪು ನೀಡುವುದು ಹಾಗೂ ಸಂಗೀತ ಸಂಯೋಜಿಸುವುದು, ಸಂಗೀತ ವಾದ್ಯಗಳ ನುಡಿಸುವಿಕೆ ಹಾಗೂ ಹಾಡುಗಾರಿಕೆಯ ಸಾಮರ್ಥ್ಯ.
3. ಈ ಸಾಮರ್ಥ್ಯವನ್ನು ಸಂಗೀತಗಾರರಲ್ಲಿ, ರಾಗ ಸಂಯೋಜಕರಲ್ಲಿ ಹಾಗೂ ವಾದ್ಯ ನುಡಿಸುವವರಲ್ಲಿ ಕಾಣಬಹುದು.

**ಭಾಷಾಶಾಸ್ತ್ರದ ಬುದ್ಧಿಮತ್ತೆ**

1. ಪದಗಳ ಅರ್ಥಗಳನ್ನು ಕುರಿತು, ಪದಗಳ ಅನುಕ್ರಮ ಹಾಗೂ ಪದಗಳ ಉಚ್ಚಾರಣೆಯ ಕಡೆಗೆ, ಲಯ, ಸ್ವರವ್ಯತ್ಯಾಸ, ಛಂದಸ್ಸಿನ ಬಗ್ಗೆ ಸಂವೇದನಾಶೀಲತೆಯನ್ನು ಹೊಂದಿರುವುದು. (ಆಕರ: ದಿ ಕಾಂಪೋನೆಂಟ್ಸ್ ಆಫ್ ಎಮ್‌ಐ)
2. ಮಾತನಾಡುವಾಗ ಅಥವಾ ಓದುವಾಗ ಪದಗಳನ್ನು ಪರಿಣಾಮಕಾರಿಯಾಗಿ ಬಳಸುವುದು, ಓದುವಿಕೆ ಹಾಗೂ ಪದಬಂಧ ಮಾಡುವುದರಲ್ಲಿ ಆಸಕ್ತಿಯನ್ನು ಹೊಂದಿರುವುದು.

3. ಈ ಸಾಮರ್ಥ್ಯವನ್ನು ಪತ್ರಕರ್ತರಲ್ಲಿ, ಲೇಖಕರಲ್ಲಿ ಹಾಗೂ ಕಥೆಗಾರರಲ್ಲಿ ಕಾಣಬಹುದು.

**ತಾರ್ಕಿಕ ಗಣಿತಾತ್ಮಕ ಬುದ್ಧಿಮತ್ತೆ (Logical-Mathematical Intelligence)**

1. ಕ್ರಿಯೆ ಅಥವಾ ಚಿಹ್ನೆಗಳ ನಡುವಿನ ತಾರ್ಕಿಕ ಸಂಬಂಧಗಳನ್ನು ಪರಿಕಲ್ಪಿಸಿಕೊಳ್ಳುವ ಸಾಮರ್ಥ್ಯ (ಉದಾಹರಣೆಗೆ ಗಣಿತಜ್ಞರು, ವಿಜ್ಞಾನಿಗಳು).' (ಆಕರ: ದಿ ಕಾಂಪೋನೆಂಟ್ಸ್ ಆಫ್ ಎಮ್ಐ)
2. (ವಿವಿಧ ವಿಭಾಗಗಳಲ್ಲಿ) ವಿಂಗಡಿಸುವಿಕೆ ಹಾಗೂ ಕ್ರಮಾನುಸಾರ ಇರಿಸುವ ಸಾಮರ್ಥ್ಯ, ಗಣಿತದ ನಿರೂಪಣೆಗಳನ್ನು ಪ್ರಮೇಯಗಳು, ಕ್ರಿಯೆಗಳು ಹಾಗೂ ಸಂಕೀರ್ಣ ಪ್ರಮೇಯಗಳನ್ನು ಅರ್ಥಮಾಡಿಕೊಳ್ಳುವುದು, ಅದಕ್ಕೆ ಸಂಬಂಧಿಸಿದ ಅಮೂರ್ತ ಲೆಕ್ಕಾಚಾರಗಳನ್ನು ಮಾಡುವುದು.
3. ಈ ಸಾಮರ್ಥ್ಯವನ್ನು ಸಂಖ್ಯಾಶಾಸ್ತ್ರಜ್ಞರಲ್ಲಿ, ಗಣಿತಜ್ಞರಲ್ಲಿ, ಕಂಪ್ಯೂಟರ್ ಪ್ರೋಗ್ರಾಂ ಮಾಡುವವರು, ವಿಜ್ಞಾನಿಗಳಲ್ಲಿ ಕಾಣಬಹುದು.

1. ಅಂತರ–ವ್ಯಕ್ತಿ ಬುದ್ಧಿಮತ್ತೆ (Interpersonal Intelligence) ಬೇರೊಬ್ಬರೊಡನೆ ಪರಿಣಾಮಕಾರಿಯಾಗಿ ಒಡನಾಡುವ ಸಾಮರ್ಥ್ಯ. ಇತರರ ಮನಸ್ಥಿತಿಗಳು, ಭಾವನೆಗಳು, ಮನೋಧರ್ಮ ಹಾಗೂ ಆಸಕ್ತಿಗಳೆಡೆಗೆ ಸಂವೇದನೆ ಹೊಂದಿರುವುದು (ಉದಾ. ಸಂಧಾನಕಾರ). (ಕೆಲವೊಮ್ಮೆ ಸಾಮಾಜಿಕ ವಿವೇಕ ಎಂದೂ ಕರೆಯಲಾಗುತ್ತದೆ.) (ಆಕರ: ದಿ ಕಾಂಪೋನೆಂಟ್ಸ್ ಆಫ್ ಎಮ್ಐ)
2. ಪರಾನುಭೂತಿಯನ್ನು ಹೊಂದಿರುವುದು, ಸಾಮಾಜಿಕ ಕೌಶಲ್ಯಗಳಿರುವುದು, ಅನೇಕ ವ್ಯಕ್ತಿಗತ ಮನಸ್ಥಿತಿಯ ಸುಳಿವುಗಳ ವ್ಯತ್ಯಾಸಗಳನ್ನು ಗುರುತಿಸುವುದು, ಅವುಗಳಿಗೆ ಪರಿಣಾಮಕಾರಿಯಾಗಿ ಪ್ರತಿಕ್ರಿಯಿಸುವುದು, ಜನರನ್ನು ಒಳ್ಳೆಯ ಕೆಲಸಗಳೆಡೆಗೆ ಪ್ರೇರೇಪಿಸುವುದು ಹಾಗೂ ಕೆಟ್ಟ ಭಾವನೆಗಳನ್ನು ನಿವಾರಿಸಿ ನಿಭಾಯಿಸುವುದು.
3. ಈ ಸಾಮರ್ಥ್ಯವನ್ನು ಸಾಮಾಜಿಕ ಕಾರ್ಯಕರ್ತರು, ಆಪ್ತಸಲಹೆಗಾರರು, ರಾಜಕಾರಣಿಗಳು, ಪ್ರಾರ್ಥನೆ, ನಂಬಿಕೆಯ ಮೂಲಕ ಗುಣಪಡಿಸುವವರು, ಸಮರ್ಥ ತಂದೆ ತಾಯಿಗಳು ಹಾಗೂ ಶಿಕ್ಷಕರಲ್ಲಿ ಕಾಣಬಹುದು.

**ವ್ಯಕ್ತಿ ಅಂತರ್ಗತ ಬುದ್ಧಿಮತ್ತೆ (Intrapersonal Intelligence)**

1. ತನ್ನ ಸ್ವಂತ ಭಾವನೆಗಳು, ಗುರಿಗಳು ಹಾಗೂ ಆತಂಕಗಳಸೂಕ್ಷ್ಮ ಸಂವೇದನೆಯನ್ನು ಹೊಂದಿರುವುದು, ತನ್ನ ಗುಣಲಕ್ಷಣಗಳ ಅನುಸಾರ ಯೋಜಿಸಿ ಕಾರ್ಯನಿರ್ವಹಿಸುವ ಸಾಮರ್ಥ್ಯ. ಈ ವ್ಯಕ್ತಿ ಅಂತರ್ಗತ ಬುದ್ಧಿಮತ್ತೆ ಯಾವುದೇ ನಿರ್ದಿಷ್ಟ ವೃತ್ತಿಗಳಿಗಷ್ಟೇ ಸೀಮಿತವಾಗಿಲ್ಲ; ಬದಲಿಗೆ ಈ ಸಂಕೀರ್ಣ ಆಧುನಿಕ ಸಮಾಜದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ತನ್ನಬಗ್ಗೆ ಪರಿಸ್ಥಿತಿಗನುಗುಣವಾದ ನಿರ್ಧಾರಗಳನ್ನು ತಾನೇ ತೆಗೆದುಕೊಳ್ಳಲು ಇರಲೇಬೇಕಾದ ಗುರಿ. (ಕೆಲವೊಮ್ಮೆ ಸ್ವಬುದ್ಧಿಮತ್ತೆ ಎಂತಲೂ ಕರೆಯುತ್ತಾರೆ.) (ಆಕರ: ದಿ ಕಾಂಪೋನೆಂಟ್ಸ್ ಆಫ್ ಎಮ್ಐ)
2. ತಮ್ಮ ಬಗ್ಗೆ (ಸಾಮರ್ಥ್ಯಗಳು ಹಾಗೂ ದೌರ್ಬಲ್ಯಗಳು) ಒಂದು ಪ್ರಾಮಾಣಿಕ ಹಾಗೂ ನಿಖರವಾದ ಚಿತ್ರವನ್ನು ಹೊಂದಿರುವುದು, ತನ್ನನ್ನು ತಾನೇ ಅರ್ಥಮಾಡಿಕೊಳ್ಳುವ ಹಾಗೂ ಅದರಂತೆ ಹೊಂದಾಣಿಕೆ ಮಾಡಿಕೊಂಡು ಕಾರ್ಯನಡೆಸುವ ಸಾಮರ್ಥ್ಯ; ತನ್ನ ಆಂತರಿಕ ಮನಸ್ಥಿತಿಗಳು ಹಾಗೂ ಆಕಾಂಕ್ಷೆಗಳ ಬಗ್ಗೆ ಅರಿವು ಹೊಂದಿರುವುದು ಹಾಗೂ ಆರೋಗ್ಯಕರ ಸ್ವಾಭಿಮಾನವನ್ನು ಹೊಂದಿರುವುದು.
3. ಈ ಸಾಮರ್ಥ್ಯವನ್ನು ತತ್ವಶಾಸ್ತ್ರಜ್ಞರಲ್ಲಿ, ಸಮರ್ಥ ತಂದೆ ತಾಯಿಗಳು ಹಾಗೂ ಶಿಕ್ಷಕರಲ್ಲಿ ಕಾಣಬಹುದು.

**ನಿಸರ್ಗ ಸಂಬಂಧೀ ಬುದ್ಧಿಮತ್ತೆ**

1. ಪ್ರಾಕೃತಿಕ ಜಗತ್ತಿನಲ್ಲಿ ಪ್ರಮುಖ ವ್ಯತ್ಯಾಸಗಳನ್ನು ಗುರುತಿಸುವ ಸಾಮರ್ಥ್ಯ, ಉದಾಹರಣೆಗೆ ಎರಡು ಸಸ್ಯಗಳ ನಡುವಿನ ವ್ಯತ್ಯಾಸ ಅಥವಾ ಒಂದು ಮೋಡಕ್ಕೂ ಮತ್ತೊಂದು ಮೋಡಕ್ಕೂ ರಚನೆಯಲ್ಲಿರುವ ವ್ಯತ್ಯಾಸ (ಉದಾ. ಜೀವವರ್ಗೀಕರಣ ವಿಜ್ಞಾನಿ) (ಕೆಲವೊಮ್ಮೆ ಪ್ರಾಕೃತಿಕ ಬುದ್ಧಿಮತ್ತೆ ಎಂತಲೂ ಕರೆಯುತ್ತಾರೆ). (ಆಕರ: ದಿ ಕಾಂಪೋನೆಂಟ್ಸ್ ಆಫ್ ಎಮ್ಐ)
2. ಸಸ್ಯಗಳಲ್ಲಿ ಹಾಗೂ ಪ್ರಾಣಿಗಳಲ್ಲಿ ತೀವ್ರ ಆಸಕ್ತಿಯನ್ನು ಹೊಂದಿರುವುದು, ಪ್ರಕೃತಿಯನ್ನು ಕೂಲಂಕಷವಾಗಿ ಅಧ್ಯಯನ ಮಾಡುವುದು, ಪರಿಸರವನ್ನು ಪರಿಣಾಮಕಾರಿಯಾಗಿ ಬಳಸುವುದು.
3. ಈ ಸಾಮರ್ಥ್ಯವನ್ನು ಕೃಷಿಕರಲ್ಲಿ, ಸಸ್ಯಶಾಸ್ತ್ರಜ್ಞರಲ್ಲಿ, ಪಶುವೈದ್ಯರಲ್ಲಿ ಹಾಗೂ ಆಯುರ್ವೇದ ವೈದ್ಯರಲ್ಲಿ ಕಾಣಬಹುದು.

**ಡಿಸ್ಲೆಕ್ಸಿಯಾ ಹಾಗೂ ಎಮ್ಐ**

ಎಸ್ಎಲ್ಡಿ ಇರುವ ಮಕ್ಕಳು ಸಾಮಾನ್ಯವಾಗಿ ಒಂದು ಅಥವಾ ಎರಡು ಬುದ್ಧಿಮತ್ತೆಗಳಲ್ಲಿ ವಿಶೇಷ ಸಾಮರ್ಥ್ಯವನ್ನು ಹೊಂದಿರುತ್ತಾರೆ.ಆ ಸಾಮರ್ಥ್ಯವನ್ನು ಗುರುತಿಸಿದಾಗ, ಮಕ್ಕಳು ಶೈಕ್ಷಣಿಕವಾಗಿಯೂ ಸಾಮಾಜಿಕವಾಗಿಯೂ ಉತ್ತಮವಾಗಿ ಸಾಧನೆ ಮಾಡುತ್ತಾರೆ. ಉದಾಹರಣೆಗೆ ಒಂದು ಮಗುವಿನ ದೈಹಿಕ–ಚಲನಾತ್ಮಕ ಬುದ್ಧಿಮತ್ತೆ ಪ್ರಬಲವಾಗಿದ್ದರೆ ಅವನು/ಳು ತನ್ನ ದೇಹ ಮತ್ತು ಅದರ ಅಂಗಗಳನ್ನು ಬಳಸಿ ಪರಿಣಾಮಕಾರಿಯಾಗಿ ಕಲಿಯುತ್ತಾನೆ/ಳೆ. ಈ ತರಹದ ಮಕ್ಕಳು ಪಾಠಗಳನ್ನು ಕಲಿಯಲು ತಮ್ಮ ಕೈಗಳ ಸಹಾಯದಿಂದ ವಸ್ತುಗಳನ್ನು ರಚಿಸಿ ಅವುಗಳಿಗೆ ಆಕಾರ ಕೊಡಬಲ್ಲರು. ಎಸ್ಎಲ್ಡಿ ಇರುವ ಮಕ್ಕಳು ತಮ್ಮಲ್ಲಿ ಪ್ರಬಲವಾಗಿರುವ ಬುದ್ಧಿಮತ್ತೆಯನ್ನು ಗುರುತಿಸಿ ಬಳಸಲು ಪ್ರೋತ್ಸಾಹ ನೀಡಿದಾಗ ಅವರು ಆ ಕ್ಷೇತ್ರಗಳಲ್ಲಿ ಅಸಾಧಾರಣವಾದ ಪ್ರಾವೀಣ್ಯತೆಯನ್ನು ಹೊಂದುತ್ತಾರೆ.

**ಡಿಸ್ಲೆಕ್ಸಿಯಾ ಹಾಗೂ ತಂತ್ರಜ್ಞಾನ**

ಡಿಸ್ಲೆಕ್ಸಿಯಾ ಇರುವ ಮಕ್ಕಳಿಗೆ ತಂತ್ರಜ್ಞಾನವನ್ನು ಬಳಸಿ ಸಹಾಯ ಒದಗಿಸಲು ಎಮ್ಡಿಎ ಹೂಡಿಕೆಯನ್ನು ಮಾಡಿದೆ. ಮದ್ರಾಸ್ ಐಐಟಿಯ ಹಳೆಯ ವಿದ್ಯಾರ್ಥಿಗಳು ಆರಂಭಿಸಿರುವ ಉದ್ಯಮವಾದ ಇನ್ವೆನ್ಷನ್ ಲ್ಯಾಬ್‌ನ ಸಹಯೋಗದಲ್ಲಿ ಎಮ್ಡಿಎ ನವೀನ ತಂತ್ರಜ್ಞಾನವನ್ನು ಬಳಸಿ ಎಮ್ಡಿಎ ಆವಾಜ್ ರೀಡರ್ ಆಪ್ ಅನ್ನು ಅಭಿವೃದ್ಧಿಪಡಿಸಿದ್ದಾರೆ. ಇದು ಕಲಿಕಾ ವಿಕಲತೆಗಳಿರುವ ಓದುಗನಿಗೆ ಓದಲು ಸಹಾಯ ಮಾಡುವ ಆಪ್. ಈ ಆಪ್ ನವೀನಾತಿನವೀನ ತಂತ್ರಜ್ಞಾನವನ್ನು ಬಳಸಿಕೊಂಡಿರುವುದಲ್ಲದೆ ಹೆಚ್ಚಾಗಿ ಆಫ್‌ಲೈನ್‌ನಲ್ಲಿ ಕೆಲಸ ಮಾಡುತ್ತಿದ್ದು ಆಪಲ್ ಸಾಧನಗಳಲ್ಲಿ, ಸಾಧಾರಣವಾದ ಆಂಡ್ರಾಯ್ಡ್ ಸಾಧನಗಳಲ್ಲಿ, ಟ್ಯಾಬ್ಲೆಟ್ ಅಥವಾ ಮೊಬೈಲ್ ಸಾಧನಗಳಲ್ಲಿಯೂ ಬಳಸುವಂತಿದೆ ಹಾಗು ಸುಲಭವಾಗಿ ಕೈಗೆಟುಕುವಂತಿದೆ. ಚಿತ್ರದಲ್ಲಿ ಸೆರೆಹಿಡಿದ ಪಠ್ಯವನ್ನು ಓದುವ ಸ್ವರೂಪಕ್ಕೆ ಭಾಷಾಂತರಿಸುವ ತಂತ್ರಜ್ಞಾನವನ್ನು ಈ ಆಪ್ ಬಳಸುತ್ತಿದ್ದು ಇನ್ನಿತರ ಮುದ್ರಿತ ವಸ್ತುಗಳಾದ ವೃತ್ತಪತ್ರಿಕೆಗಳು, ಪಠ್ಯಪುಸ್ತಕಗಳು ಹಾಗೂ ಕಥೆ ಪುಸ್ತಕಗಳನ್ನು ಇದರ ಮೂಲಕ ಓದಬಹುದು.

ಎಮ್‌ಡಿಎ ಆವಾಜ್ ರೀಡರ್ ಓದುಗ ಕೇಂದ್ರಿತವಾಗಿದ್ದು ಓದುಗನ ಅಗತ್ಯಕ್ಕೆ ಅನುಗುಣವಾಗಿ ಸಂಯೋಜನೆಗಳನ್ನು ಮಾಡಿ-ಕೊಳ್ಳಬಹುದಾಗಿದೆ ಹಾಗೂ ಎಸ್‌ಎಲ್‌ಡಿ ಇರುವ ಮಕ್ಕಳು ಸ್ವತಂತ್ರವಾಗಿ ಓದುವ ಕೌಶಲ್ಯವನ್ನು ಬೆಳಸಲು ಬೇಕಾದ ಬಹು ಇಂದ್ರಿಯಗಳ ಕಾರ್ಯತಂತ್ರಗಳನ್ನು ನೀಡುತ್ತದೆ. ಡಿಸ್ಲೆಕ್ಸಿಯಾ ಇರುವ ಮಕ್ಕಳಿಗೆ ಬೆಂಬಲ ನೀಡುವ ಶಿಕ್ಷಕರ ಅನುಪಸ್ಥಿತಿಯಲ್ಲಿಯೂ ಅವರ ಜಾಗವನ್ನು ತುಂಬುವ ಪಾತ್ರವನ್ನು ವಹಿಸುತ್ತಿದ್ದು, ನಿರಂತರವಾಗಿ ನೆರವು ಒದಗಿಸುವ ಗುರಿಯನ್ನು ಹೊಂದಿದೆ. ಆಪ್‌ನಲ್ಲಿ ಓದುಗನಿಗೆ ಒದಗಿಸಲಾಗಿರುವ ಪ್ರಮುಖ ನೆರವುಗಳು ಹೀಗಿವೆ:

1. ಓದಬೇಕಾಗಿರುವ ಪಠ್ಯವನ್ನು ವಿವಿಧ ದೃಶ್ಯ ರೂಪಗಳಲ್ಲಿ ಕಾಣಿಸುವ ಆಯ್ಕೆಗಳನ್ನು ಹೊಂದಿದೆ.
2. ಒಂದು ನಿರ್ದಿಷ್ಟ ವಾಕ್ಯದ ಮೇಲೆ ಪರದೆಯ ಕೇಂದ್ರೀಕರಣ, ಓದುಗನ ಗಮನವನ್ನು ನಿರ್ದಿಷ್ಟ ವಾಕ್ಯದ ಮೇಲೆ ಹಿಡಿದಿಡಲು ಒಂದು ಸಾಲಿನ ನಂತರ ಇನ್ನೊಂದು ಸಾಲಿನ ಕ್ರಮದಲ್ಲಿ ಪಠ್ಯದ ಪ್ರದರ್ಶನ.
3. ಓದಬೇಕಾಗಿರುವ ಪಠ್ಯವನ್ನು ಗುರುತಿಸುತ್ತಾ ಮುಂದುವರಿಯಲು ಪೆನ್ಸಿಲ್ ಸಾಧನದ ಬಳಕೆ.
4. ಪರಿಚಿತ ಉಚ್ಚಾರಣೆಯಲ್ಲಿ ಹಾಗೂ ನಿಗದಿಪಡಿಸಬಹುದಾದ ವೇಗದಲ್ಲಿ ಗಟ್ಟಿಯಾಗಿ ಓದುವುದು.
5. ಅಗತ್ಯ ಆಧಾರಿತ ಚಿತ್ರಗಳ ಸುಳಿವುಗಳು, ಧ್ವನಿಯಲ್ಲಿ ಉಚ್ಚಾರಣೆ, ಕಠಿಣ ಪದಗಳನ್ನು ಓದಲು ಸಜಾತಿಪದಗಳು ಹಾಗೂ ಪದಾನುಸಾರ ಶಬ್ದ ತುಣುಕುಗಳಾಗಿ ಪದಗಳನ್ನು ಉಚ್ಚರಿಸುವುದು.
6. ಗ್ರಹಿಕೆಯನ್ನು ಉತ್ತಮಗೊಳಿಸಲು ವಾಕ್ಯ ರಚನೆಯ ಸಹಾಯವನ್ನು ನೀಡುವುದು.

**ಎಮ್‌ಡಿಎ ಹಾಗೂ ತರಬೇತಿ**

ಎಸ್‌ಎಲ್‌ಡಿ ಇರುವ ಮಕ್ಕಳಿಗೆ ನೆರವು ನೀಡುವ ತಮ್ಮ ಪಯಣದಲ್ಲಿ, ಎಮ್‌ಡಿಎ ತನ್ನ ತರಬೇತಿ ಕಾರ್ಯಕ್ರಮಗಳ ಮೂಲಕ ನಿರಂತರವಾಗಿ ಪ್ರಾಥಮಿಕ ಶಾಲಾ ಶಿಕ್ಷಕರನ್ನು ಸಬಲರನ್ನಾಗಿ ಮಾಡುತ್ತಿದೆ. ತಮಿಳುನಾಡು ಸರ್ಕಾರದ ಸಹಯೋಗದಲ್ಲಿ ಎಮ್‌ಡಿಎ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಎಸ್‌ಎಲ್‌ಡಿ-ಯೆಡೆಗೆ ಸಂವೇದನೆಯನ್ನು ಬೆಳೆಸುವಂತಹ ತರಬೇತಿಯನ್ನೂ, ಶಿಕ್ಷಕರು ತಮ್ಮ ತರಗತಿಯಲ್ಲಿಯೇ ಬಳಸಬಹುದಾದ ಗುರುತು ಹಿಡಿಯುವ ಉಪಕರಣಗಳನ್ನು, ಪರಿಹಾರಾತ್ಮಕ ತಂತ್ರಗಳನ್ನು ಹಾಗೂ ಬೋಧನಾ ವಿಧಾನಗಳನ್ನು ಒದಗಿಸುತ್ತಿದ್ದಾರೆ. ಪ್ರಾಥಮಿಕ ಶಾಲಾ ಪರಿಹಾರಾತ್ಮಕ ವಿಷಯಸಾಮಾಗ್ರಿಯು 'ಇ-ಶಿಕ್ಷಣಂ' ಆನ್‌ಲೈನ್‌ನಲ್ಲಿ ಉಚಿತವಾಗಿ ದೊರಕುತ್ತದೆ.

ಎಮ್‌ಡಿಎ ಶಾಲೆಗಳಲ್ಲಿಯೇ ಸಂಪನ್ಮೂಲ ಕೊಠಡಿಗಳನ್ನು ಆರಂಭಿಸಿದ್ದು ಎಮ್‌ಡಿಎದ ತಜ್ಞರು ಕನಿಷ್ಠ ಒಂದು ವರ್ಷದವರೆಗೂ ಶಾಲೆಯಲ್ಲಿ ವಿಶೇಷ ಶಿಕ್ಷಣದ ಮಾರ್ಗದರ್ಶನ ನೀಡುತ್ತಿದ್ದಾರೆ. ಶಾಲೆಯ ಆವರಣದಲ್ಲಿಯೇ ಮಗುವಿಗೆ ಪರಿಹಾರ ದೊರಕು-ವಂತಾಗಿ ಈ ಪ್ರಯತ್ನವು ಮಕ್ಕಳಿಗೆ ಪ್ರಯೋಜನಕಾರಿಯಾಗಿ ಪರಿಣಮಿಸಿದೆ.

**ಜೀವನ ಪರ್ಯಂತ ಡಿಸ್ಲೆಕ್ಸಿಯಾದ ನಿರ್ವಹಣೆ**

ಡಿಸ್ಲೆಕ್ಸಿಯಾ ಒಂದು ರೋಗವಲ್ಲ ಜೀವನ ಪರ್ಯಂತ ಇರುವ ಒಂದು ನರಸಂಬಂಧೀ ಪರಿಸ್ಥಿತಿ ಮಾತ್ರ. ಮಕ್ಕಳಿಗೆ ಕಿರಿಯ ಪ್ರಾಥಮಿಕ ಶಾಲಾ ಹಂತದಲ್ಲಿಯೇ ಪರಿಹಾರ ದೊರಕಿದಾಗ, ನಿಭಾಯಿಸುವ ತಂತ್ರಗಳನ್ನು ಬೆಳೆಸಿಕೊಳ್ಳಲು ಕಲಿಯುತ್ತಾರೆ ಹಾಗೂ ಇದರಿಂದ ಶಾಲೆ ಹಾಗೂ ಕಾಲೇಜು ಜೀವನವನ್ನು ಅನಂತರ ತಮ್ಮ ವೃತ್ತಿಯನ್ನು, ಸಂಬಂಧಗಳನ್ನು ಹಾಗೂ ದಿನನಿತ್ಯದ ಇನ್ನಿತರ ಚಟುವಟಿಕೆಗಳನ್ನು ನಡೆಸಿಕೊಂಡು ಹೋಗಲು ಸಹಾಯವಾಗುತ್ತದೆ. ಇಂತಹ ವ್ಯಕ್ತಿಯು ಮುಂದೆ ತನ್ನ ಸಮಾಜಕ್ಕೆ ಕೊಡುಗೆ ನೀಡುವ ಒಬ್ಬ ಹೆಮ್ಮೆಯ ಸದಸ್ಯನಾಗುತ್ತಾನೆ.

*1 ಡಿಸ್ಲೆಕ್ಸಿಯಾ ಎನ್ನುವ ಪದದ ಬಗ್ಗೆ ಹೆಚ್ಚು ಅರಿವಿರದಿದ್ದ ಸಮಯದಲ್ಲಿ ತಂದೆ ತಾಯಿಗಳು ಹಾಗೂ ಶಿಕ್ಷಣತಜ್ಞರ ಗುಂಪೊಂದು ಡಿಸ್ಲೆಕ್ಸಿಯಾ ಇರುವ ಮಕ್ಕಳಿಗೆ ಸಹಾಯ ಒದಗಿಸಲು 1991ರಲ್ಲಿ ಮದ್ರಾಸ್ ಡಿಸ್ಲೆಕ್ಸಿಯಾ ಸಂಸ್ಥೆಯನ್ನು (ಎಮ್‌ಡಿಎ) ಸ್ಥಾಪಿಸಿದರು.

[1]ಮದ್ರಾಸ್ ಡಿಸ್ಲೆಕ್ಸಿಯಾ ಅಸೋಸಿಯೇಷನ್ ಅನ್ನು 1991ರಲ್ಲಿ ಸ್ಥಾಪಿಸಲಾಯಿತು. ಡಿಸ್ಲೆಕ್ಸಿಯಾ ಪದ ಅಷ್ಟಾಗಿ ಚಾಲ್ತಿಯಿರದಿದ್ದ ಕಾಲದಲ್ಲಿ ಪೋಷಕರ ಮತ್ತು ಶಿಕ್ಷಕರ ಗುಂಪೊಂದು ಮುಂದೆ ಬಂದು ಡಿಸ್ಲೆಕ್ಸಿಯಾದಿಂದ ಬಳಲುತ್ತಿದ್ದ ಮಕ್ಕಳಿಗೆ ಸಹಾಯಮಾಡುವ ಉದ್ದೇಶದಿಂದ ಇದು ಕಾರ್ಯೋನ್ಮುಖವಾಯಿತು.



**ಮೃದುಲಾ ಗೋವಿಂದರಾಜು** ಅವರು ಆಂಗ್ಲ ಸಾಹಿತ್ಯದಲ್ಲಿ ಎಂ.ಎ. ಪದವಿಯನ್ನು ಹೊಂದಿದ್ದು, ಕಾಪಿ ಎಡಿಟಿಂಗ್‌ನಲ್ಲಿ ತರಬೇತಿ ಪಡೆದಿದ್ದಾರೆ. ಇವರು ಹತ್ತು ವರ್ಷಗಳಿಗೂ ಹೆಚ್ಚು ಕಾಲದಿಂದ ಪ್ರಕಾಶನ ಉದ್ಯಮದಲ್ಲಿ ಕೆಲಸ ಮಾಡಿದ್ದು, ಪ್ರಾಥಮಿಕ ಶಾಲಾ ಮಕ್ಕಳ ಪಠ್ಯಪುಸ್ತಕಗಳನ್ನು ಸಂಪಾದಿಸಿ ವಿನ್ಯಾಸಗೊಳಿಸಿದ್ದಾರೆ. ಆನ್‌ಲೈನ್ ತರಬೇತಿ ಕಾರ್ಯಕ್ರಮಗಳನ್ನು ಸಂಪಾದಿಸಿದ್ದಾರೆ ಹಾಗೂ ನಿರ್ವಹಣಾ ಕೌಶಲ ತರಬೇತಿ ಕಾರ್ಯಕ್ರಮಗಳಿಗೆ ಸರಣಿ ಪಾಠಗಳನ್ನು ರಚಿಸಿದ್ದಾರೆ. ಆನ್‌ಲೈನ್ ಸ್ವಯಂ-ಕಲಿಕೆ ಪಾಠ ಬೋಧನೆಗಾಗಿ ಕಥಾಪಟಗಳನ್ನು ಹಾಗೂ ಕಾರ್ಯಕ್ರಮ ಮೂಲಪ್ರತಿಗಳನ್ನೂ ಬರೆಯುತ್ತಾರೆ. ಕಲಿಕಾ ವಿಭಿನ್ನತೆಗಳನ್ನು ಹೊಂದಿರುವ ಮಕ್ಕಳಿಗೂ ಪಾಠ ಮಾಡಿದ್ದಾರೆ. ಪ್ರಸ್ತುತ ಇವರು ಎಮ್‌ಡಿಎ ವಾರ್ತಾಪತ್ರವನ್ನು ಸಂಪಾದಿಸುತ್ತಿದ್ದಾರೆ. ಇವರನ್ನು govindaraju.mrudula@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ವಿನಯಾ ವಿಠಲ** । ಪರಿಶೀಲನೆ: **ಜೈಕುಮಾರ್ ಮರಿಯಪ್ಪ**

# ವಿಕಲತೆಯನ್ನು ಒಂದು ವೈವಿಧ್ಯತೆಯಾಗಿ ಕಾಣುವುದು

ಪ್ರಣಾಲೀ ಶರ್ಮಾ

"...ಅಯಾನ್ ಹುಟ್ಟಿದ ನಂತರ ನಾನು ಸಾಕಷ್ಟು ಮಾನಸಿಕ ಆಘಾತವನ್ನು ಅನುಭವಿಸಬೇಕಾಗಿತ್ತು. ಹುಟ್ಟಿದಾಗಲೇ ಅವನಿಗೆ ಉಸಿರುಕಟ್ಟುವ (Asphyxia) ತೊಂದರೆಯಿತ್ತು. ಬೆಳೆಯುತ್ತಿದ್ದಂತೆ ಅಯಾನ್ ಖಂಡಿತವಾಗಿ ಕೆಲವು ಬೆಳವಣಿಗೆ ತೊಂದರೆಗಳನ್ನು ಹೊಂದುತ್ತಾನೆಂದು ವೈದ್ಯರು ನನಗೆ ಹೇಳಿದ್ದರು. ಈ ಪರಿಸ್ಥಿತಿಗೆ ನಾನು ವೈದ್ಯರನ್ನೇ ದೂಷಿಸಬೇಕು. ನಾನು ನನ್ನ ಪತಿ ಮತ್ತು ಅವರ ತಂದೆತಾಯಿಯರ ಜೊತೆವಾಸಿಸುತ್ತಿದ್ದೆ. ಅವರು ಅಯಾನ್‌ನನ್ನು ಸ್ವೀಕರಿಸಲಿಲ್ಲ, ಹಾಗಾಗಿ ತನ್ನ ಅಜ್ಜಿತಾತನ ಆರೈಕೆ ಮತ್ತು ಪ್ರೀತಿಯಿಂದ ವಂಚಿತನಾದ. ಅಯಾನ್‌ನ ಹಿತದೃಷ್ಟಿಯಿಂದ, ನಾವು ಆ ಮನೆಯನ್ನು ತೊರೆದು, ನನ್ನ ತವರಿಗೆ ಬಂದೆವು.ನನ್ನ ಪತಿ ಕೆಲಸ ಮಾಡುವ ಕಂಪನಿಯಲ್ಲಿ ಆಗಾಗ ಪಾರ್ಟಿಗಳನ್ನು ಏರ್ಪಡಿಸುತ್ತಾರೆ. ಪ್ರತಿ ಬಾರಿ ನಾನು ಅಯಾನ್‌ನನ್ನು ಕರೆದುಕೊಂಡು ಹೋದಾಗ ಬೇರೆ ಪೋಷಕರು ತಮ್ಮ ಮಕ್ಕಳನ್ನು ಅವನಿಂದ ದೂರಕರೆ–ದೊಯ್ಯುತ್ತಿದ್ದರು. ಸ್ವಲ್ಪ ಕಾಲ ನಾನು ಇದನ್ನು ಸಹಿಸಿಕೊಂಡೆ. ನಂತರ ಇಂಥ ಪಾರ್ಟಿಗಳಿಗೆ ಹೋಗುವುದನ್ನೇ ನಿಲ್ಲಿಸಿದೆ. ಸಾಮಾಜಿಕ ಕಡೆಗಣನೆ ಮತ್ತು ಪ್ರತ್ಯೇಕತೆಯ ವಾತಾವರಣದಿಂದ ನನ್ನ ಮಗುವನ್ನು ರಕ್ಷಿಸಲು ನಾನು ಈಗ ಸಾಮಾಜಿಕವಾಗಿ ಬೇರೆಯವರೊಂದಿಗೆ ಬೆರೆಯದ ಬದುಕಿಗೆ ಬದಲಾಗಿದ್ದೇನೆ.."

2012ರಲ್ಲಿ ದೆಹಲಿಯ ರಾಜ್‌ಕುಮಾರಿ ಅಮೃತ್ ಕೌರ್ (ಆರ್‌ಎಕೆ) ಮಕ್ಕಳ ಅಧ್ಯಯನ ಕೇಂದ್ರದ ಒಂದು ಪೂರ್ವಪ್ರಾಥಮಿಕ ಶಾಲೆಗೆ ಹೋಗುತ್ತಿದ್ದ, ತಡವಾದ ಬೆಳವಣಿಗೆಯ ಸಮಸ್ಯೆಯನ್ನು ಎದುರಿಸುತ್ತಿರುವ, ಅಯಾನ್ ಎಂಬ ಎಂಟು ವರ್ಷದ ಮಗುವಿನ ಪ್ರಕರಣದ ಕುರಿತಂತೆ ಇದುಒಂದು ಅಧ್ಯಯನದ ಸಣ್ಣ ತುಣುಕು. ಆರ್‌ಎಕೆ ಮಕ್ಕಳ ಅಧ್ಯಯನ ಕೇಂದ್ರಕ್ಕೆ ಸೇರುವ ಮುಂಚೆ ಅಯಾನ್ ಬೇರೆ ಎರಡು ಶಾಲೆಗಳಿಗೆ ಹೋಗುತ್ತಿದ್ದ. ಆ ಎರಡೂ ಪೂರ್ವ ಪ್ರಾಥಮಿಕ ಶಾಲೆಯ 'ಶಿಕ್ಷಕರು ಅವನು ಅಲ್ಲಿಗೆ 'ಹೊಂದದವನು' ಎಂದು ಮಗುವನ್ನು ಶಾಲೆಯಿಂದ ಬಿಡಿಸುವಂತೆ ಅಯಾನ್‌ನ ತಾಯಿಗೆ ಹೇಳಿದ್ದರು.2012ರಲ್ಲಿ, ಆರ್‌ಎಕೆ ಮಕ್ಕಳ ಅಧ್ಯಯನ ಕೇಂದ್ರದಲ್ಲಿ ಅಯಾನ್ ಆಗಲೇ ಮೂರು ವರ್ಷಗಳನ್ನು ಪೂರೈಸಿದ್ದ ಮತ್ತು ಅವನ ತಾಯಿಯ ಪ್ರಕಾರ, ಅಲ್ಲಿ ಅವನು ತನ್ನ ಇಡೀ ಸಮಯವನ್ನು ಸಂತೋಷದಿಂದ ಕಳೆದಿದ್ದನು.

ಆರ್‌ಎಕೆ ಮಕ್ಕಳ ಅಧ್ಯಯನ ಕೇಂದ್ರದ ಶಿಕ್ಷಣದ ಬಳಿಕ ಮುಂದೇನು ಎಂದು ತಾಯಿ ಅವನ ಭವಿಷ್ಯದ ಬಗ್ಗೆ ಕಳವಳಗೊಂಡರು. ಅದಾಗಲೇ ಅಯಾನ್‌ನಿಗೆ 8 ವರ್ಷವಾಗಿತ್ತು. ಅವನು ಮುಂದಿನ ವರ್ಷ ಒಂದು ಔಪಚಾರಿಕ ಶಾಲೆಗೆ ಪ್ರವೇಶ ಪಡೆಯಬೇಕಿತ್ತು. ದುರದೃಷ್ಟವಶಾತ್, ಅವನ ತಾಯಿ ಭೇಟಿ ನೀಡಿದ ಪ್ರತಿಯೊಂದು ಕಶಾಲೆಯಲ್ಲೂ ಅವನಿಗೆ ಪ್ರವೇಶವನ್ನು ನಿರಾಕರಿಸಲಾಗಿತ್ತು. ಅವನಿಗೆ ಸೂಕ್ತವಾದ ವಾತಾವರಣವನ್ನು ಹುಡುಕಲು ಪ್ರಯತ್ನಪಟ್ಟು ಅವರು ಬಹಳ ಒತ್ತಡದಲ್ಲಿದ್ದರು.. ಅವರಿಗೆ ಏನೂ ಮಾಡಲು ತೋಚಲಿಲ್ಲ, ಶಾಲೆಗಳಿಗೆ ಬೇರೆ ಮಕ್ಕಳೊಂದಿಗೆ ಸ್ಪರ್ಧಿಸುವಂತಿದ್ದ ವಿಶೇಷ ಅಗತ್ಯಗಳುಳ್ಳ ಮಕ್ಕಳು ಮಾತ್ರ ಬೇಕಿತ್ತು.

**ವಿಕಲತೆಎಂದರೇನು?**

'ಅಂತಾರಾಷ್ಟ್ರೀಯ ಕಾರ್ಯಚಟುವಟಿಕೆ ವರ್ಗೀಕರಣ'ದ (International Classification of Functioning) ಪ್ರಕಾರ, ಎಲ್ಲ ರೀತಿಯ ದುರ್ಬಲತೆಗಳು (ಅಥವಾ ಆರೋಗ್ಯ ವೈಕಲ್ಯ) ಎಂದರೆಪರಿಮಿತ ಚಟುವಟಿಕೆಗಳು, ಭಾಗವಹಿಸುವಿಕೆಯಲ್ಲಿ ನಿರ್ಬಂಧಗಳು ಹಾಗೂ ಪಾರಿಸರಿಕ ಅಂಶಗಳಂಥ ಎಲ್ಲಾ ರೀತಿಯ ದೌರ್ಬಲ್ಯಗಳನ್ನು ಒಳಗೊಂಡ ಒಂದು ಪದ. ಕೆಲವು ಮಿತಿಗಳೊಂದಿಗೆ ಅಥವಾ ಕೆಲವು ರೀತಿಯ ದೌರ್ಬಲ್ಯದೊಂದಿಗೆ ಹುಟ್ಟಿದ ಮಗುವನ್ನು 'ವಿಕಲತೆ ಹೊಂದಿದವನು' ಎಂದು ಕರೆಯಲಾಗುತ್ತದೆ. ಅಂದರೆ ಬಹುಪಾಲು ಜನರಂತೆ ಕಾರ್ಯನಿರ್ವಹಿಸಲಾಗದ ಅಥವಾ ಕೆಲಸ ಮಾಡಲಾಗದ ವ್ಯಕ್ತಿ ಎಂದರ್ಥ. ವಿಕಲತೆಯುಳ್ಳ ಮಗುವಿನೊಂದಿಗೆ ವಾಸಿಸುವುದು ಕುಟುಂಬ ಮತ್ತು ಅದರ ಚಟುವಟಿಕೆಯಲ್ಲಿ ಗಾಢ ಪರಿಣಾಮ ಬೀರುವುದು. ಈ ಮೇಲಿನ ಸನ್ನಿವೇಶವು ವಿಕಲತೆಯಿಂದ ಬಳಲುವ ಮಗು ಮತ್ತು ಅವನ ಅಥವಾ ಅವಳ ಕುಟುಂಬವು ಎದುರಿಸ–ಬೇಕಾಗುವ ಸಾಮಾಜಿಕ ಕಳಂಕ ಮತ್ತು ತಾರತಮ್ಯದ ಬಗ್ಗೆ ಗಮನಸೆಳೆಯುತ್ತದೆ. ಬಹುತೇಕ ಕುಟುಂಬಗಳು ಮಗುವನ್ನು ಮತ್ತು ವಿಕಲತೆಯನ್ನು ಆರಂಭಿಕ ಹಂತದಲ್ಲೇ ಸ್ವೀಕರಿಸಿದರೂ, ವಿಕಲತೆಹೊಂದಿರುವ ಮಗುವಿನ ಪಾಲನೆಪೋಷಣೆಗೆ ಸಂಬಂಧಿಸಿದಂತೆ ಯಾವಾಗಲೂ ಸಾಕಷ್ಟು ಸವಾಲುಗಳನ್ನು ಎದುರಿಸಬೇಕಾಗುತ್ತದೆ. (ಬೆನೆಟ್, ಡೆಲುಕಾ ಮತ್ತು ಅಲೆನ್, 1995). ವೈಕಲ್ಯವನ್ನುಹೊಂದಿರುವ ಮಕ್ಕಳಿಗೆ ಸಂಬಂಧಿಸಿದ, ವಿವಿಧ ವಿಷಯಗಳ ಬಗ್ಗೆ ನಾವು ಯೋಚಿಸಿದಾಗ, ಕುಟುಂಬಗಳ ಮೇಲೆ ವಿಕಲತೆಯಿಂದಾಗುವ ಏರಿಳಿತಗಳನ್ನು ನಾವು ಬಿಟ್ಟುಬಿಡುತ್ತೇವೆ. ಈ ಪ್ರಕರಣದಲ್ಲಿ, ಅಯಾನ್‌ನ ತಾಯಿ, ತನ್ನ ಮಗುವಿನ ಅಗತ್ಯಗಳನ್ನು ಪೂರೈಸಲು ದೈಹಿಕವಾಗಿ ಹಾಗೂ ಭಾವನಾತ್ಮಕವಾಗಿ ಕಷ್ಟಪಡ–ಬೇಕಾಯಿತು.

ಬೇರೆಬೇರೆ ಆರೋಗ್ಯ ಸೇವಾ ವೃತ್ತಿನಿರತರ ಭೇಟಿ, ಮಕ್ಕಳ ಆರೈಕೆ ಸೇವೆಗಳ ಕೊರತೆಯ ಕಾರಣ ಪೋಷಕರ ವೃತ್ತಿ ಸಾಮರ್ಥ್ಯದ ಮೇಲೆ ಪರಿಣಾಮ, ಪರಿಣಾಮಕಾರಿ ಜೀವನ ಕೌಶಲ್ಯ ತರಬೇತಿ ಅಥವಾ ಶಿಕ್ಷಣದ ಅಭಾವ ಇತ್ಯಾದಿಗಳಿಗಾಗಿ ಕುಟುಂಬಗಳು ಸಾಕಷ್ಟು ಹಣ ವೆಚ್ಚಮಾಡಬೇಕಾಗುವುದು ಮೊದಲಾದ ಸಮಸ್ಯೆಗಳನ್ನು ನಾವು ಕಾಣುತ್ತೇವೆ ಸಾಮಾಜಿಕ ಮಾದರಿಯ ವಿಕಲತೆಯ ಪ್ರಕಾರ, ಕೇವಲ ದೌರ್ಬಲ್ಯ ಇರುವುದರಿಂದಷ್ಟೇ ಮಗು ವೈಕಲ್ಯ ಎನ್ನಿಸುವುದಿಲ್ಲ, ಈ ದೌರ್ಬಲ್ಯದಿಂದ ವಿಕಲತೆ ಉಂಟಾಗಲು ಪರಿಸರದ ಪಾತ್ರ ಬಹಳ ದೊಡ್ಡದು. ಜೀವನದ ದೈನಂದಿನ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲು ವ್ಯಕ್ತಿಯ ಅಶಕ್ತತೆಯು ಆತನ ದೇಹ ಮತ್ತು ವಾಸಿಸುವ ಪರಿಸರದ ಪರಸ್ಪರ ಸಂಪರ್ಕದ ಮೂಲಕ ಉಂಟಾಗುತ್ತದೆ. '... ನಾನು ಅಯಾನ್‌ನನ್ನು ಸಣ್ಣ ಪಟ್ಟಣ ಅಥವಾ ಹಳ್ಳಿಗೆ ಕರೆದುಕೊಂಡು ಹೋಗುವ ಬಗ್ಗೆ ಕೆಲವೊಮ್ಮೆ ಯೋಚಿಸುತ್ತೇನೆ. ಅಲ್ಲಿನ ಜನರು ತಮ್ಮ ಅಜ್ಞಾನದಿಂದಾಗಿ ಅಥವಾ ತಿಳವಳಿಕೆ ಇಲ್ಲದಿರುವಿಕೆಯಿಂದಾಗಿ ಕನಿಷ್ಟ ಪಕ್ಷ ಸಂವೇದನಾ

ಶೀಲರಾಗಿರುತ್ತಾರೆ ಮತ್ತು ಇಂತಹವರನ್ನು ಸ್ವೀಕರಿಸುತ್ತಾರೆ. ಅಲ್ಲಿ ಅಯಾನ್ ಕನಿಷ್ಠಪಕ್ಷ ಗೆಳೆಯರನ್ನಾದರೂ ಹೊಂದಿರುತ್ತಾನೆ. ದೂರದ ಹಳ್ಳಿಗಳ ಜನರು ಅವನನ್ನು ಮಂದಬುದ್ಧಿಯವನು ಎಂದು ಹೆಸರಿಸಬಹುದು, ಆದರೆ ಅವರು ನಗರದ ಜನರಂತೆ ಅವನನ್ನು ದೂರವಿಡುವುದಿಲ್ಲ... 'ಹೊರಗಿಡುವಿಕೆಯ ಪ್ರವೃತ್ತಿಯಿಂದಾಗಿ ಹೆಚ್ಚು ಮಕ್ಕಳು (ವೈಕಲ್ಯ ಹೊಂದಿರುವ) ಸಾಂಸ್ಥಿಕ ಆರೈಕೆಗಿಂತ ಹೆಚ್ಚಾಗಿ ತಮ್ಮ ಮನೆಯಲ್ಲಿ ಬೆಳೆಯುತ್ತಾರೆ. (ಆಪಲ್‌ಬೈ 2014). ವಿಕಲತೆಯುಒಂದು ಗ್ರಹಿಕೆಯೇ? ಜನರು ವಿಕಲತೆಯನ್ನು ಹೇಗೆ ಕಾಣುತ್ತಾರೆ? ವೈಕಲ್ಯವಿರದ ವ್ಯಕ್ತಿಯ ದೃಷ್ಟಿಕೋನದಿಂದ ವೈಕಲ್ಯತೆಯ ಪೂರ್ಣ ಸಮಸ್ಯೆಯನ್ನು ಪರಿಶೀಲಿಸಲು ಹೊರಟಾಗ ಇದೇ ರೀತಿಯ ಪ್ರಶ್ನೆಗಳು ಬರುತ್ತವೆ. ಸಾಮಾನ್ಯವಾಗಿ ವಿಕಲತೆಯು ಭಯ, ಕುತೂಹಲ, ಆತಂಕ ಇತ್ಯಾದಿ ಭಾವನೆಗಳನ್ನು ಉಂಟುಮಾಡುತ್ತದೆ. ನಮ್ಮಲ್ಲಿ ಬಹುತೇಕರಿಗೆ ಸಾಮಾನ್ಯವಾಗಿ ವಿಕಲತೆಯನ್ನು ಹೊಂದಿರುವ ವ್ಯಕ್ತಿಯೊಂದಿಗೆ ಹೇಗೆ ವರ್ತಿಸುವುದೆಂದು ತಿಳಿದಿರುವುದಿಲ್ಲ. ಒಂದು ನಿರ್ದಿಷ್ಟ ಸ್ಥಳವನ್ನು ತಲುಪಲು ಪ್ರಯತ್ನಿಸುತ್ತಿರುವ ಅಂಥ ಮಗುವಿನ ಉದಾಹರಣೆಯನ್ನು ತೆಗೆದುಕೊಳ್ಳಿ. ಮಗುವಿಗೆ ಸಹಾಯ ಮಾಡುವ ಮೂಲಕ ಆರೈಕೆಯಿಂದ ವರ್ತಿಸಬೇಕೋ ಅಥವಾ ವೈಕಲ್ಯವನ್ನು ನಾವು ನಿರ್ಲಕ್ಷಿಸಬೇಕೋ? ಕಾಳಜಿಯಿಂದ ವರ್ತಿಸಿದರೆ ಅದು ಮಗುವನ್ನು ಕೀಳಾಗಿ ಪರಿಗಣಿಸಿದಂತೆಯೇ? ನಾವು ಮಗುವಿಗೆ ಸಹಾಯ ಮಾಡಲು ಪ್ರಯತ್ನಿಸಿ ಅದನ್ನು ಅಂಚಿನಲ್ಲಿಡುತ್ತಿದ್ದೇವೋ ಅಥವಾ ವಿಕಲತೆ ಇಲ್ಲ ಎಂಬಂತೆ ವರ್ತಿಸುತ್ತಿರುವೆವೋ? ವಿಕಲತೆ ಹೊಂದಿರುವ ಒಂದು ಮಗುವನ್ನು ನೋಡಿದಾಗ, ನಾವು ಉತ್ತಮರು ಎಂಬ ಇಂಗಿತವಿರುವಂತೆ ಸಹಾಯವನ್ನು ನೀಡಲು ಒಲವು ತೋರಿಸುವುರಿಂದಾಗಿ ವಿಕಲತೆ ಹೊಂದಿರುವ ಮಗುವನ್ನು ತಾರತಮ್ಯದಿಂದ ಕಾಣುತ್ತೇವೆ. ಉದ್ದೇಶಪೂರ್ವಕವಾಗಿ ಅಲ್ಲದಿದ್ದರೂ, ನಾವು ವಿಕಲತೆ ಹೊಂದಿರುವವರ ಜೊತೆಗೆ ಉಳಿದವರಿಗಿಂತ ಕಡಿಮೆ ಎಂಬಂತೆ ವರ್ತಿಸುತ್ತೇವೆ.

**ವಿಕಲತೆ ಮತ್ತು ಸಾಮಾಜಿಕ ಪೂರ್ವಾಗ್ರಹ**

ಯಾವಾಗಲೂ ಒಂದು ನವಜಾತ ಶಿಶುವನ್ನು ದೇವರ ಕೊಡುಗೆಯಾಗಿ ಮತ್ತು ನಿರಂತರವಾಗಿ ದೊಡ್ಡವರ ಆರೈಕೆ ಬೇಕೆಂಬಂತೆ ನೋಡಲಾಗುತ್ತದೆ. ಆದರೆ, ಒಂದು ಮಗು ಕೆಲವು ಕಣ್ಣಿಗೆ ಕಾಣುವ ಅಥವಾ ಹುಟ್ಟಿನಿಂದಲೇ 'ದೋಷ'ದಿಂದ ಕೂಡಿದ್ದರೆ,' ಚೆನ್ನಾಗಿ ಹುಟ್ಟಿದ' ಮಗುವಿಗೆ ಹೋಲಿಸಿದರೆ ಸಮಾಜವು ಆ ಮಗುವನ್ನು ತುಂಬು ಮನಸ್ಸಿನಿಂದ ಪ್ರೀತಿಯಿಂದ ಸ್ವಾಗತಿಸುವುದಿಲ್ಲ ಅಥವಾ ಸ್ವೀಕರಿಸುವುದಿಲ್ಲ. ಇದರೊಂದಿಗೆ, ಭಾರತೀಯರು ಕರ್ಮ ಸಿದ್ಧಾಂತವನ್ನು ನಂಬುತ್ತಾರೆ, ಅಂದರೆ, ಮಗುವಿನ ಅಥವಾ ಹೆತ್ತವರ ಹಿಂದಿನ ಜನ್ಮದಲ್ಲಿ ಮಾಡಿದ ತಪ್ಪು ಕಾರ್ಯಗಳು/ಕರ್ಮದಿಂದಾಗಿ ಮಗುವು ಕೆಲವು ರೀತಿಯ ಗೋಚರ ದೌರ್ಬಲ್ಯದಿಂದ ಹುಟ್ಟಿದೆ ಎಂದು ಭಾವಿಸಲಾಗುತ್ತದೆ, ಅದರ ಪರಿಣಾಮವಾಗಿ ಮಗು ಮತ್ತು ಹೆತ್ತವರನ್ನು ಸಾಮಾನ್ಯರಂತೆ ಕಾಣದೆ ದೂರತಳ್ಳಲಾಗುತ್ತದೆ, ಕಡೆಗಣಿಸಲಾಗುತ್ತದೆ. ಆಗ ಈ ಸಂದರ್ಭಗಳಿಗೆ ಪೋಷಕರು, ಕುಟುಂಬ ಮತ್ತು ಮಗು ಹೊಂದಿಕೊಳ್ಳಬೇಕು ಮತ್ತು ತಟಸ್ಥರಾಗಿರುವ ಮನೋಸ್ಥಿತಿ ಬೆಳೆಸಿಕೊಳ್ಳಬೇಕು. ಅಗತ್ಯವಾದ ಬೆಂಬಲವನ್ನು ನೀಡುವಲ್ಲಿ ಕಂಡುಬರುವ ಒಂದು ಪ್ರಮುಖ ಅಡಚಣೆಯೆಂದರೆ ಆರ್ಥಿಕ ಸಮಸ್ಯೆ. ಮಗುವಿಗೆ ಪೂರ್ಣ ಸಮಯದ ಆರೈಕೆಯನ್ನು ಒದಗಿಸಲು ಒಬ್ಬ ಪೋಷಕ ಅದರಲ್ಲೂ ಮುಖ್ಯವಾಗಿ ತಾಯಿ ತನ್ನ ಕೆಲಸವನ್ನು ಬಿಡಬೇಕಾದ ಹಲವಾರು ಉದಾಹರಣೆಗಳಿವೆ. ಇತರ ಮಕ್ಕಳು ಭಿನ್ನ ರೀತಿಯಲ್ಲಿ ಬದುಕುವುದು, ಶಾಲೆಗೆ ಹೋಗುವುದು, ಗೆಳೆಯರೊಂದಿಗೆ ಆಟವಾಡುವುದು, ಸ್ನೇಹಿತರನ್ನು ಮಾಡಿ-ಕೊಳ್ಳುವುದು ಇವನ್ನೆಲ್ಲಾ ಗಮನಿಸುತ್ತಿದ್ದರೆ ಆ ವಿಶೇಷ ಅಗತ್ಯವುಳ್ಳ ಮಗುವಿನ ಆತ್ಮಾಭಿಮಾನದ ಮೇಲೆ ಗಾಢ ಪರಿಣಾಮ ಬೀರುತ್ತದೆ.

**ಶಾಲೆಯ ಸಂದರ್ಭದಲ್ಲಿ ವಿಕಲತೆ**

ಕೇವಲ ಶಾಲೆಗೆ ಹೋಗುವ ಚಟುವಟಿಕೆಯೇ ಮಗುವಿನಲ್ಲಿ ಆತ್ಮವಿಶ್ವಾಸ, ಭರವಸೆ ಮತ್ತು ಯೋಗಕ್ಷೇಮದ ಪ್ರಜ್ಞೆಯನ್ನು ಬೆಳೆಸುತ್ತದೆ. ಇತರ ಮಕ್ಕಳ ಜೊತೆಗೆ ವಿಶೇಷ ಅಗತ್ಯವುಳ್ಳ ಮಗುಶಾಲೆಗೆ ಹೋಗುವುದು, ಎಲ್ಲರಂತೆ ತರಗತಿ ಕೊಠಡಿಗಳಲ್ಲಿ ಕುಳಿತುಕೊಳ್ಳುವುದು, ಶಾಲೆಯಲ್ಲಿ ಯಾವುದೇ ಸಾಮಾನ್ಯ ಮಗುವಿನಂತೆ ಪರಿಗಣಿಸಲ್ಪಡುವುದು ನಡೆದಾಗ ಆ ವಿಶೇಷ ಅಗತ್ಯ ಬೇಕಾದ ಮಗುವಿನಲ್ಲಿ ಉತ್ತಮ ಯೋಗಕ್ಷೇಮವು ಉಂಟಾಗುತ್ತದೆ. (ಶರ್ಮಾ ಮತ್ತು ಸೇನ್ 2012). ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ವಿಶೇಷ ಶಾಲೆಗಳಿದ್ದ ಬಗ್ಗೆ ನಮ್ಮಲ್ಲಿ ಐತಿಹಾಸಿಕ ಪುರಾವೆಗಳಿವೆ. ವಿಶೇಷ ಅಗತ್ಯ ಬೇಕಾದ ಮಕ್ಕಳೂ ಶಿಕ್ಷಣ ಪಡೆಯಬೇಕು ಮತ್ತು ಸಮಾಜದ ಸದಸ್ಯರಾಗಿ ತಮ್ಮ ಕೊಡುಗೆ ನೀಡಬೇಕು ಎಂದು ನೀತಿಗಳು ನಂಬಿದ್ದರೂ ಕೂಡ ಈ ಮಕ್ಕಳನ್ನು ಮುಖ್ಯವಾಹಿನಿ ಶಿಕ್ಷಣದಿಂದ ಹೊರಗಿಡಲಾಗಿದೆ. ಆದರೆ ಇದು ಅವರನ್ನು 'ಸಾಮಾನ್ಯ'ರಲ್ಲದ ಮಕ್ಕಳ ಪ್ರತ್ಯೇಕ ವರ್ಗವಾಗಿ ಕಂಡು ಸಮಾಜದ ಮತ್ತಷ್ಟು ಅಂಚಿಗೆ ತಳ್ಳಲಾಯಿತು ನಂತರದ ವಿಶೇಷ ಅಗತ್ಯವುಳ್ಳ ಮಕ್ಕಳಿಗಾಗಿ ಕ್ರೋಢೀಕೃತ ಶಿಕ್ಷಣ ಯೋಜನೆ-1987 (Project Integrated Education for the Disabled (1987), ಮತ್ತು ವಿಶೇಷ ಮಕ್ಕಳ ಕ್ರೋಢೀಕೃತ ಶಿಕ್ಷಣ-1974 (Integrated Education for Disabled Children (1974))ದಂಥ ಯೋಜನೆಗಳು ವಿಶೇಷ ಅಗತ್ಯವುಳ್ಳ ಮಕ್ಕಳನ್ನು ಮುಖ್ಯವಾಹಿನಿಗೆ ತರುವ ಪ್ರಯತ್ನಗಳು. ಈ ಯೋಜನೆಗಳು ಬೌದ್ಧಿಕ ಅಸಮರ್ಥರಿಗಿಂತ ದೈಹಿಕವಾಗಿ ಅಶಕ್ತರಾದ ಬಹಳಷ್ಟು ಮಕ್ಕಳನ್ನು ಶಿಕ್ಷಣದತ್ತ ಆಕರ್ಷಿಸಿದವು. ನಂತರ 1997ರಲ್ಲಿ' ಒಳಗೊಳ್ಳುವ ಶಿಕ್ಷಣ' (Inclusive education)ವನ್ನು ಜಿಲ್ಲಾ ಪ್ರಾಥಮಿಕ ಶಿಕ್ಷಣದಲ್ಲಿ ಸೇರಿಸಲಾಯಿತು. ಇದನ್ನು ಅನುಸರಿಸಿ, ರಾಷ್ಟ್ರೀಯ ಶಿಕ್ಷಣ ನೀತಿ – 1986) (National Policy on Education -1986), ಭಾರತೀಯ ಪುನರ್ವಸತಿ ಕೌನ್ಸಿಲ್ ಕಾಯ್ದೆ-1992 (Rehabilitation Council of India Act -1992), ವಿಕಲತೆಯಿರುವ ವ್ಯಕ್ತಿಗಳ ಕಾಯ್ದೆ (ಸಮಾನ ಅವಕಾಶಗಳು, ಹಕ್ಕು ರಕ್ಷಣೆ ಮತ್ತು ಪೂರ್ಣ ಭಾಗಿತ್ವ) –1995 (The Persons with Disabilities (Equal Opportunities, Protection of Right and Full Participation) Act -1995) ಮತ್ತು ರಾಷ್ಟ್ರೀಯ ಟ್ರಸ್ಟ್ ಕಾಯ್ದೆ (ಆಟಿಸಂ, ಸೆರೆಬ್ರಲ್ ಪಾಲ್ಸಿ, ಬುದ್ಧಿಮಾಂದ್ಯತೆ ಮತ್ತು ಬಹುಅಂಗ ವೈಕಲ್ಯವುಳ್ಳ ವ್ಯಕ್ತಿಗಳ ಕಲ್ಯಾಣಕ್ಕಾಗಿರುವ ರಾಷ್ಟ್ರೀಯ ಟ್ರಸ್ಟ್-1999 (The National Trust Act (National Trust for the Welfare of Persons with Autism, Cerebral Palsy, Mental Retardation and Multiple Disability -1999), ಇವೆಲ್ಲವೂ ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಬೆಂಬಲಾತ್ಮಕ ಕಲಿಕೆಯ ವಾತಾವರಣವನ್ನು ಒದಗಿಸುವುದರ ಮೇಲೆ ಒತ್ತು ನೀಡಿವೆ. ಈ ನೀತಿಗಳು, ಯೋಜನೆಗಳು ಮತ್ತು ಕಾಯ್ದೆಗಳು ಇಂತಹ ಮಕ್ಕಳಿಗೆ ಶಾಲೆಗಳ ಪ್ರವೇಶವನ್ನು ಸಕ್ರಿಯಗೊಳಿಸುವಲ್ಲಿ ಮತ್ತು ಮುಖ್ಯವಾಹಿನಿಯಲ್ಲಿ ವಿಶೇಷ ಅಗತ್ಯವುಳ್ಳ ಮಕ್ಕಳನ್ನು ಸಂಯೋಜಿಸುವ ಪ್ರಾಮುಖ್ಯತೆಯ ಬಗ್ಗೆ ಜಾಗೃತಿ ಮೂಡಿಸುವಲ್ಲಿ ಯಶಸ್ವಿಯಾಗಿವೆ. ಕಡ್ಡಾಯ ಶಿಕ್ಷಣ ಹಕ್ಕು ಕಾಯ್ದೆ 2009ರ (Right to Education Act-RTE)

ಜಾರಿಯಿಂದಾಗಿ ವಿಶೇಷ ಅಗತ್ಯವುಳ್ಳ ಮಕ್ಕಳೂ ಸೇರಿದಂತೆ ಪ್ರತಿಯೊಂದು ಮಗುವಿಗೂ ಶಾಲೆಯಲ್ಲಿರುವ ಹಕ್ಕು ಇದೆ.

ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಶಾಲೆಗಳನ್ನು ಮುಕ್ತವಾಗಿಸುವಲ್ಲಿ ಇದು ಎಷ್ಟು ಯಶಸ್ವಿಯಾಗಿದೆ ಎಂಬುದು ಇನ್ನೂ ಒಂದು ಪ್ರಶ್ನೆಯಾಗಿದೆ. ಮುಖ್ಯವಾಹಿನಿಯ ಶಾಲೆಗಳಲ್ಲಿ ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಒಳಗೊಳ್ಳುವಿಕೆಯ ಕಲಿಕೆಯ ವಾತಾವರಣವನ್ನು ಸೃಷ್ಟಿಸುವುದಕ್ಕೆ ಬಹಳ ಸಮಯ ಬೇಕಾದೀತು. ಈಗ ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಶಾಲೆಗಳಲ್ಲಿ ಭೌತಿಕ ಪ್ರವೇಶವಿದೆ, ಅವರು ಔಪಚಾರಿಕ ಶಿಕ್ಷಣಕ್ಕೆ ತೆರೆದುಕೊಂಡಿದ್ದಾರೆ, ಆದರೆ ಶಿಕ್ಷಕರು, ಗೆಳೆಯರು ಮತ್ತು ಇತರ ವಿದ್ಯಾರ್ಥಿಗಳ ನಕಾರಾತ್ಮಕ ಸಾಮಾಜಿಕ ದೃಷ್ಟಿಕೋನಗಳು ಅವರ ಶಿಕ್ಷಣದ ಹಕ್ಕಿನ ಮೇಲೆ ಈಗಲೂ ಹಸ್ತಕ್ಷೇಪ ಮಾಡುವಂತಾಗುತ್ತದೆ. ಮಕ್ಕಳು ಔಪಚಾರಿಕ ಶಾಲೆಗೆ ಸೇರ್ಪಡೆಗೊಂಡರೂ ಕಲಿಕೆಯ ಅಶಕ್ತತೆಗಳಂತಹ ಹಲವಾರು ವೈಕಲ್ಯಗಳು ಕಾಣಿಸುತ್ತವೆ. ದೈಹಿಕ ವಿಕಲತೆಗಳಿರುವ ಮಕ್ಕಳಿಗೆ ಹೋಲಿಸಿದರೆ ಕಲಿಕಾ ಅಥವಾ ಬೌದ್ಧಿಕ ವಿಕಲತೆಯುಳ್ಳ ಮಕ್ಕಳು ಸೂಕ್ತ ಶಿಕ್ಷಣ ಪಡೆಯುವಲ್ಲಿ ವಂಚಿತರಾಗುವುದು ಹೆಚ್ಚು. ಸಮರ್ಪಕ ತರಬೇತಿ ಪಡೆದ ವೃತ್ತಿಪರರು, ಸಂಪನ್ಮೂಲಗಳ ಅಭಾವ ಮತ್ತು ಭವಿಷ್ಯದಲ್ಲಿರುವ ಆಯ್ಕೆಗಳ ಬಗ್ಗೆ ತಿಳುವಳಿಕೆಯ ಕೊರತೆಯು ಬೌದ್ಧಿಕ ವಿಕಲತೆಯಿರುವ ಮಕ್ಕಳು ಶಾಲೆಗಳಿಂದ ದೂರವಿರಲು ಕಾರಣವಾಗಿದೆ.

ನಾನು ಉತ್ತರ ಕಾಶಿಯ ಮಾಟ್ಲಿಯ ಅಜೀಂ ಪ್ರೇಮ್‌ಜಿ ಶಾಲೆಗೆ ಭೇಟಿ ನೀಡಿದಾಗ ಅಲ್ಲಿ ಎಲ್‌ಕೆಜಿ ತರಗತಿಯಲ್ಲಿ ಡೌನ್-ಸಿಂಡ್ರೋಮ್ ಇದ್ದ ಒಂಬತ್ತು ವರ್ಷದ ಅಕ್ಷತ್ (iii) ಎಂಬ ಮಗುವನ್ನು ಗಮನಿಸಿದೆ. ನಾನು ಶಿಕ್ಷಕರನ್ನು ಕೇಳಿದಾಗ ಇದೇ ಮೊದಲ ಬಾರಿಗೆ ಅವನು ಶಾಲೆಗೆ ಪ್ರವೇಶ ಪಡೆದದ್ದು ಎಂದು ಹೇಳಿದರು. ಈ ಮೊದಲು ಅವನು ಯಾವುದೇ ಶಾಲೆಗೆ ಹೋಗಿರಲಿಲ್ಲ. ಅಯಾನ್‌ನಂತೆ ಅವನಿಗೂ ಸುತ್ತಮುತ್ತಲಿನ ಎಲ್ಲಾ ಶಾಲೆಗಳಲ್ಲಿ ಪ್ರವೇಶವನ್ನು ನಿರಾಕರಿಸಿದ್ದರು. ಆತ ವಿಶೇಷ ಮಗು ಎಂದು ಪೋಷಕರಿಗೆ ತಿಳಿದಿದ್ದರೂ ಅದು ಏನೆಂಬುದನ್ನು ಅವರು ಅರಿತಿರಲಿಲ್ಲ. ಅಲ್ಲಿ ಶಿಕ್ಷಕರನ್ನು ಅವನ ತಾಯಿ 'ಮೇಡಂ, ಅವನಿಗೆ ಯಾವಾಗ ಓದಲು ಬರೆಯಲು ಬರುತ್ತದೆ? ಯಾವಾಗ ಕವಿತೆಗಳನ್ನು ಮತ್ತು ಹಾಡುಗಳನ್ನು ಹಾಡಲು ಪ್ರಾರಂಭಿಸುತ್ತಾನೆ?' ಎಂದು ಕೇಳುತ್ತಿದ್ದರು.

ಅಯಾನ್‌ನ ತಂದೆತಾಯಿ ಭರವಸೆ ಕಳೆದುಕೊಂಡು ಸಾಮಾಜಿಕ ಕಳಂಕದಿಂದ ವಿಚಲಿತರಾದರೆ, ಇನ್ನೊಂದೆಡೆ ಅಕ್ಷತ್‌ನ ತಂದೆತಾಯಿ ಬೇರೆ ಹೆತ್ತವರಂತೆ ತಮ್ಮ ಮಗನ ಬಗ್ಗೆ ಸಕಾರಾತ್ಮಕ ಭರವಸೆಯನ್ನು ಹೊಂದಿದ್ದರು ಎಂಬುದು ನನ್ನನ್ನು ಯೋಚಿಸುವಂತೆ ಮಾಡಿತು. ಶಿಕ್ಷಕರೊಂದಿಗೆ ಮಾತನಾಡಿದಾಗ ಅಕ್ಷತ್‌ನ ತಾಯಿ ಅವನಿಗೆ ಓದಲು ಮತ್ತು ಬರೆಯಲು ಒತ್ತಾಯಿಸುತ್ತಿದರು ಎಂಬುದೂ ತಿಳಿಯಿತು. ಆದರೆ ಅವರಿಗೆ ಅರಿವಿನ ಕೊರತೆಯಿಂದಾಗಿ ಅಕ್ಷತ್‌ನನ್ನು ಶೈಕ್ಷಣಿಕವಾಗಿ ಹೇಗೆ ತೊಡಗಿಸಿಕೊಳ್ಳಬೇಕೆಂದು ತಿಳಿದಿರಲಿಲ್ಲ. ಅವರ ನಿರೀಕ್ಷೆಗಳು ಅವಾಸ್ತವವಾಗಿದ್ದರೂ ಅವರಿಗೆ ಅಕ್ಷತ್‌ನ ಸಾಧ್ಯತೆಗಳ ಬಗ್ಗೆ ವಿಶ್ವಾಸವಿತ್ತು. ಅಕ್ಷತ್ ತನ್ನ ಶಾಲೆಯ ಮಕ್ಕಳೊಂದಿಗೆ ಪ್ರೀತಿ ಮತ್ತು ಕಾಳಜಿ ವಹಿಸಿ ಆಟವಾಡುತ್ತಿದ್ದನು. ಆದರೆ ಅಯಾನ್ ಮಕ್ಕಳಿಂದ ಬಹುತೇಕ ದೂರವೇ ಹೋಗುತ್ತಿದ್ದ. ಈ ಎರಡೂ ಸನ್ನಿವೇಶಗಳನ್ನು ಹೋಲಿಸಿದರೆ ಅಯಾನ್‌ನ ತಾಯಿಯ ಈ ಹೇಳಿಕೆ ನಿಜವಾಗಿದೆ:

'...ನಾನು ಕೆಲವೊಮ್ಮೆ ಅಯಾನ್ ನನ್ನು ಸಣ್ಣ ಪಟ್ಟಣ ಅಥವಾ ಹಳ್ಳಿಗೆ ಕರೆದುಕೊಂಡು ಹೋಗುವ ಬಗ್ಗೆ ಯೋಚಿಸುತ್ತೇನೆ. ಅಲ್ಲಿನ ಜನರು ತಮ್ಮ ಅಜ್ಞಾನದಿಂದಾಗಿ ಅಥವಾ ತಿಳುವಳಿಕೆ ಇಲ್ಲದಿರುವಿಕೆ-ಯಿಂದಾಗಿ ಕನಿಷ್ಟಪಕ್ಷ ಸಂವೇದನಾಶೀಲರಾಗಿರುತ್ತಾರೆ ಮತ್ತು ಇಂತಹವರನ್ನು ಅಂಗೀಕರಿಸುತ್ತಾರೆ...'

ಸಮಾಜದಲ್ಲಿ ಧ್ರುವೀಕರಣ ಮತ್ತು ದ್ವೇಷ ಅಪರಾಧಗಳು ತೀವ್ರಗತಿಯಲ್ಲಿ ಹೆಚ್ಚುತ್ತಿರುವ ಈ ಯುಗದಲ್ಲಿ ಎಲ್ಲ ಜನರ ಬಗ್ಗೆ ಸೂಕ್ಷ್ಮ ಸಂವೇದನೆಗಳು, ಅನುಭೂತಿ ಮತ್ತು ಕಾಳಜಿಯನ್ನು ಬಾಲ್ಯದಿಂದಲೇ ಬೆಳೆಸುವ ಅವಶ್ಯಕತೆಯಿದೆ, ಶಾಲೆಗಳು ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಸಬಲೀಕರಣ ಮತ್ತು ಒಳಗೊಳ್ಳುವ ಅವಕಾಶವಾಗಿ ಕಾರ್ಯನಿರ್ವಹಿಸಬಹುದು ಮತ್ತು ಇದನ್ನು ಸಾಧಿಸಲು ಮಕ್ಕಳು ಮತ್ತು ತಂದೆತಾಯಿಗಳು ಸರ್ವಸನ್ನದ್ಧ-ವಾಗಿರಬೇಕು. ಅಲ್ಲದೆ ಮುಖ್ಯವಾಗಿ ಶಿಕ್ಷಕರು ತಯಾರಾಗಬೇಕಾದ ಅಗತ್ಯ ತುಂಬಾ ಇದೆ. ಸೌಮ್ಯ ಅಥವಾ ಮಧ್ಯಮ ವಿಕಲತೆಯಿರುವ ಮಕ್ಕಳನ್ನು ತರಗತಿ ಕೊಠಡಿಗಳಲ್ಲಿ ನಿರ್ವಹಿಸಲು ಶಿಕ್ಷಕರನ್ನು ಸಂಪೂರ್ಣವಾಗಿ ಸಜ್ಜುಗೊಳಿಸಲು ಈಗಿನ ಪೂರ್ವ ಸೇವಾ ತರಬೇತಿ ಕಾರ್ಯಕ್ರಮಗಳು ಸಾಕಷ್ಟು ಪರಿಣಾಮಕಾರಿಯಾಗಿಲ್ಲ. (ಸಂಜೀವ್ ಮತ್ತು ಕುಮಾರ್, 2007).

ಅಂತಹ ತರಬೇತಿ / ಕೋರ್ಸ್‌ಗಳ ಪಠ್ಯಕ್ರಮ / ಕಾರ್ಯಾ-ಗಾರಗಳಲ್ಲಿ ಒಳಗೊಳ್ಳುವಿಕೆಯ ಮಹತ್ವ, ವಿಕಲತೆಯ ವಿಧಗಳು ಇತ್ಯಾದಿಗಳಿದ್ದರೂ ಅವು ವಿಶೇಷ ಅಗತ್ಯವುಳ್ಳ ಮಕ್ಕಳನ್ನು ಏಕರೂಪವಾಗಿ ಗ್ರಹಿಸುವ (Stereotyping), ದೂಷಿಸುವ (Stigmatization), ದೂರಸರಿಸುವಂತಹ (Marginalization) ಸಾಮಾಜಿಕ ಅಭಿಪ್ರಾಯಗಳನ್ನು ಯಾವ ರೀತಿಯಲ್ಲೂ ಪ್ರಭಾವಿಸುವುದಿಲ್ಲ. ಈ ಅಭಿಪ್ರಾಯಗಳು ಶಿಕ್ಷಕರ ಬೋಧನೆಯ ಧೋರಣೆಯನ್ನು ಮಾತ್ರವಲ್ಲ, ಇತರೆ ವಿದ್ಯಾರ್ಥಿಗಳ ವರ್ತನೆಗಳನ್ನು ಸಹ ಪ್ರಭಾವಿಸುವುದರಿಂದ ಅಂಥಾ ಪೂರ್ವಾಗ್ರಹಗಳು ಮತ್ತು ಸಾಂಪ್ರದಾಯಿಕ ಧೋರಣೆಗಳ ಬಗ್ಗೆ ಶಿಕ್ಷಕರು ಜಾಗೃತರಾಗಿರುವುದು ಮುಖ್ಯ.

ಶಾಲೆಗಳು ದೃಢತೆಯನ್ನು ಉತ್ತೇಜಿಸುವ ಮತ್ತು ಸಹಾನು-ಭೂತಿಯನ್ನು ಬೆಳೆಸುವ ವಾತಾವರಣವನ್ನು ನಿರ್ಮಿಸುವ ಅಗತ್ಯವಿದೆ. ಬೇಸರವಾಗಿದ್ದಾಗ ಜನರೊಂದಿಗೆ ಮಾತನಾಡುವುದು, ಇತ್ಯಾದಿಗಳಲ್ಲಿ ಪ್ರೇರಣೆ ಅಗತ್ಯವಿದ್ದಾಗ ಸಂಪನ್ಮೂಲಗಳನ್ನು ಪಡೆಯಲು ಮಾನಸಿಕ, ಸಾಮಾಜಿಕ ಅಥವಾ ದೈಹಿಕ ಸಂಪನ್ಮೂಲಗಳನ್ನು ಗುರುತಿಸುವ ಸಾಮರ್ಥ್ಯದ ಯೋಗ-ಕ್ಷೇಮವನ್ನು ಕಾಪಾಡಿಕೊಳ್ಳಲು ಸಂಪನ್ಮೂಲಗಳ ಮೂಲಕ ಜಾಗರೂಕರಾಗಿ ಮುನ್ನಡೆಯುವ ಮತ್ತು ಒಪ್ಪಂದಗಳ ಕೌಶಲ್ಯಗಳನ್ನು ಪೋಷಿಸಬೇಕಾಗುತ್ತದೆ. (ಅಂಗಾರ್, 2006) ಪ್ರತಿಯೊಂದು ಸ್ಥಳವನ್ನೂ ವಿಶೇಷ ಅಗತ್ಯವುಳ್ಳವರ ಸ್ನೇಹಿಯಾಗಿಸಲು ಬಹಳ ಸಮಯ ತೆಗೆದುಕೊಂಡರೂ, ಹಾಗಾದಾಗಲೇ ಒಳಗೊಳ್ಳುವ ಸಮಾಜ ಸಾಧ್ಯವಾಗುತ್ತದೆ. ತನ್ಮೂಲಕ ಪ್ರತಿಯೊಬ್ಬರೂ ಪ್ರಜ್ಞಾ ಪೂರ್ವಕವಾಗಿ ಪರಸ್ಪರ ಕೇಳುವ ಮತ್ತು ಅರಿಯುವ ಶಾಲೆಯ ಪರಿಸರವನ್ನು ಸೃಷ್ಟಿಸಬಹುದು.

ವಿಕಲತೆಯನ್ನು ನಾವು ವೈವಿಧ್ಯತೆಯಾಗಿ ಕಾಣಬಹುದೇ? ವೈವಿಧ್ಯತೆಯೆಂದರೆ ಕೇವಲ ಸಾಂಸ್ಕೃತಿಕ, ಧಾರ್ಮಿಕ ಅಥವಾ ಭಾಷಾ ವೈವಿಧ್ಯತೆ ಮಾತ್ರವೇ? ಭಾರತವು ವೈವಿಧ್ಯಮಯ ಸಂಸ್ಕೃತಿಗಳು, ಧರ್ಮಗಳು, ಭಾಷೆಗಳು, ಆಚರಣೆಗಳು,

ಜನಾಂಗಗಳು ಇತ್ಯಾದಿಗಳನ್ನು ಒಳಗೊಂಡಿರುವ ಬಹು-ಸಂಸ್ಕೃತಿಯ ಹೆಮ್ಮೆಯ ರಾಯಭಾರಿಯಾಗಿದ್ದರೂ ಕೂಡ ಇಲ್ಲಿಜನಾಂಗೀಯ ಮತ್ತು ಭಾಷಾ ಸಂಘರ್ಷ, ದಂಗೆಗಳು ನಡೆದಹಲವಾರು ನಿದರ್ಶನಗಳಿವೆ. ಭಾರತದ ಸಂವಿಧಾನವು ಧಾರ್ಮಿಕ ಮತ್ತು ಸಾಂಸ್ಕೃತಿಕ ವೈವಿಧ್ಯತೆಯನ್ನು ಗುರುತಿಸುತ್ತದೆ ಹಾಗೂ ರಕ್ಷಿಸುತ್ತದೆ. ಕೇವಲ ಸಾಂಸ್ಕೃತಿಕ ಆಚರಣೆಗಳು ಮತ್ತು ನಂಬಿಕೆಗಳಿಗೆ ಸಂಬಂಧಿಸಿದಂತೆ ಮಾತ್ರ ನಾವು ವ್ಯಾಖ್ಯಾನಿಸಿದಾಗ ವೈವಿಧ್ಯತೆಯ ಪರಿಕಲ್ಪನೆಯನ್ನು ಪುನರ್ವಿಮರ್ಶಿಸುವ ಅವಶ್ಯಕತೆಯಿದೆ.

ಎಲ್ಲಾ ಪ್ರಕಾರಗಳಲ್ಲಿನ ವೈವಿಧ್ಯತೆಯನ್ನು ನಾವು ಅಂಗೀಕರಿಸುವ ಅಗತ್ಯವಿದೆ. ಹಾಗಾದಾಗ ಪ್ರತಿಯೊಬ್ಬ ಮನುಷ್ಯನನ್ನು ಸ್ವೀಕರಿಸುವ, ಗೌರವಿಸುವಮತ್ತು ಬೆಳೆಸುವ ವಾತಾವರಣವು ರೂಪುಗೊಳ್ಳುವುದು. ಎಲ್ಲ ಮಕ್ಕಳು ವಿಭಿನ್ನ ಮತ್ತು ಎಲ್ಲರ ಬೆಳವಣಿಗೆಯ ಗತಿಯೂ ಬೇರೆಬೇರೆ ಎಂಬುದನ್ನು ನಾವು ನಂಬುತ್ತೇವೆ ಮತ್ತು ಅಂಗೀಕರಿಸುತ್ತೇವೆ. ವಿಶೇಷ ಅಗತ್ಯವುಳ್ಳ ಮಕ್ಕಳು ಸಹಭಿನ್ನವಾಗಿ ಬೆಳೆಯುತ್ತಾರೆ, ಕೌಶಲ್ಯಗಳನ್ನು ಗಳಿಸುತ್ತಾರೆ. ಸಂವಹನ, ಕಾರ್ಯನಿರ್ವಹಣೆ ಮತ್ತು ಬೆಳವಣಿಗೆ ಬೇರೆಬೇರೆ ಗತಿಯಲ್ಲಿರುತ್ತದೆ. ತರಗತಿ ಕೊಠಡಿಗಳು ಮತ್ತು ಶಾಲೆಗಳಲ್ಲಿ ವಿಶೇಷ ಅಗತ್ಯ ಬೇಕಾದ ಮಕ್ಕಳನ್ನು ಸಕಾರಾತ್ಮಕವಾಗಿ ಸ್ವೀಕರಿಸಿದಾಗ ಸಮಾಜದಲ್ಲಿರುವ ಪೂರ್ವಾಗ್ರಹಗಳನ್ನು ಕಡಿಮೆ ಮಾಡಬಹುದು ಮತ್ತು ಜನರ ಮನಸ್ಸಿನಲ್ಲಿರುವ ಕಳಂಕದ ಭಾವನೆಯನ್ನು ತೊಡೆದುಹಾಕಬಹುದು.


***References***

Appleby, J.M. (2014). *Resilience in families of children who have disabilities*. (Unpublished doctoral dissertation, University of Texas at Arlington). Retrieved from https://pdfs.semanticscholar.org/5668/268d9e7d49a7ad211c795a66638f6e633292.pdf

Bennett, T., Deluca, D. A., & Allen, R. W. (1995). Religion and children with disabilities. *Journal of Religion and Health*, 34(4), 301–312. doi: 10.1007/bf02248739

Sanjeev, K., & Kumar, K. (2007). Inclusive Education in India. *Electronic Journal for Inclusive Education*, 2(2).

Sharma, N., & Sen, R. S. (2012). Children with Disabilities and Supportive School Ecologies. *The Social Ecology of Resilience*, 281–295. doi: 10.1007/978-1-4614-0586-3_22

Ungar, M. (2006). Resilience across Cultures. *British Journal of Social Work*, 38(2), 218–235. doi: 10.1093/bjsw/bcl343


[i] ಗುರುತನ್ನು ರಕ್ಷಿಸಲು ಹೆಸರನ್ನು ಬದಲಾಯಿಸಲಾಗಿದೆ.
[ii] A case study conducted in 2012 as part of M.Sc. in Human Development and Childhood Studies.
[iii] ಗುರುತನ್ನು ರಕ್ಷಿಸಲು ಹೆಸರು ಬದಲಾಯಿಸಲಾಗಿದೆ.




**ಪ್ರಣಾಲೀ ಶರ್ಮಾರವರು** ಅಜೀಮ್ ಪ್ರೇಮ್‌ಜಿ ವಿಶ್ವವಿದ್ಯಾಲಯದ 'ಇನ್ಸ್‌ಟಿಟ್ಯೂಟ್ ಫಾರ್ ಅಸೆಸ್ಮೆಂಟ್ ಆಂಡ್ ಅಕ್ರೆಡಿಟೇಷನ್' ವಿಭಾಗದಲ್ಲಿ ಕೆಲಸ ಮಾಡುತ್ತಾರೆ. ಅವರು ದೊಡ್ಡ ಪ್ರಮಾಣದ ಮೌಲ್ಯಮಾಪನಗಳು, ಬಾಲ್ಯಾವಸ್ಥೆಯ ಕುರಿತಾದ ಕೋರ್ಸ್‌ಗಳ ಅಭಿವೃದ್ಧಿ ಹಾಗೂ ಸಾಮಾಜೋ-ಭಾವನಾತ್ಮಕ ಕಲಿಕೆಗಳ ಶಿಕ್ಷಣದ ಕೋರ್ಸ್‌ಗಳನ್ನು ರಚಿಸುವಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಹಾಗೆಯೇ ಆರಂಭಿಕ ಬಾಲ್ಯದ ಶಿಕ್ಷಣದ ಕುರಿತು ಶಿಕ್ಷಕರಿಗೆ ಸಾಮರ್ಥ್ಯ ವೃದ್ಧಿಸುವ ಕಾರ್ಯಕ್ರಮಗಳಲ್ಲಿ ನಿರತರಾಗಿದ್ದಾರೆ. ಇದಕ್ಕೂ ಮೊದಲು ಅವರು ವೈಷ್ಣವ ಸಂಪ್ರದಾಯದ ಮಠಗಳಲ್ಲಿರುವ ಮಕ್ಕಳ ಬಗ್ಗೆ ಸಂಶೋಧನೆಯಲ್ಲಿ ತೊಡಗಿದ್ದರು. ಪ್ರಣಾಲೀಯವರನ್ನು pranalee.sharma@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಹೇಮಾದೇವಿ ಬಿ ಎನ್** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ಪೋಷಕರು ವಿಳಂಬಿಸದೆ ನೆರವು ಪಡೆಯಬೇಕು

## ಸೆರೆಬ್ರಲ್ ಪಾಲ್ಸಿ (ಮೆದುಳುವಾತ) ಹೊಂದಿರುವ ಮಗುವಿನ ಪೋಷಣೆ

ನೀತಾ ಮತ್ತು ನಿತಿನ್ ನಾಯಕ್

ನಿರ್ಮಿತ್ ಜುಲೈ 12, 2011ರಂದು ಜನಿಸಿದನು. ಜನನದ ವೇಳೆ ಆತನ ತೂಕ ಕೇವಲ 1.4 ಕೆ.ಜಿ ಇತ್ತು. ಇದನ್ನು ಕೇಳಿ ನಾವು ತುಂಬಾ ಆಘಾತಕ್ಕೆ ಒಳಗಾದೆವು. ಈ ವಿಷಯ ತಿಳಿದಾಗ ಇಡೀ ವಾರ ನಮಗೆ ನಿದ್ದೆ ಬರಲಿಲ್ಲ. ಸಾಕಷ್ಟು ಒತ್ತಡಕ್ಕೆ ಒಳಗಾಗಿ ಮುಂದಿನ ದಿನಗಳಲ್ಲಿ ಏನಾಗಬಹುದು ಎಂಬ ಭೀತಿ ಆವರಿಸಿತು. ಈ ರೋಗಲಕ್ಷಣದ ಕುರಿತು ನಮಗೆ ಸ್ಪಷ್ಟ ಮಾಹಿತಿ ನೀಡಲು ವೈದ್ಯರಿಗೂ ಸಹ ಆಗಲಿಲ್ಲ. ಆಸ್ಪತ್ರೆಯಲ್ಲಿ 20 ದಿನಗಳನ್ನು ಕಳೆದ ನಂತರ ನಾವು ನಿರ್ಮಿತ್‌ನನ್ನು ಮನೆಗೆ ಕರೆದುಕೊಂಡು ಬಂದೆವು. ನಾವು ಭವಿಷ್ಯದಲ್ಲಿ ಎದುರಿಸಬೇಕಾದ ಸಮಸ್ಯೆಗಳ ಕುರಿತು ನಮಗೆ ಯಾವುದೇ ಕಲ್ಪನೆ ಇರಲಿಲ್ಲ. ನಿರ್ಮಿತ್ ಸ್ವಲ್ಪ ದುರ್ಬಲನಾಗಿದ್ದಾನೆ ಎಂದಷ್ಟೇ ಭಾವಿಸಿದ್ದೆವು. ನಾವು ಅನೇಕ ವೈದ್ಯರನ್ನು ಭೇಟಿಯಾದೆವು. ಆದರೆ ಯಾವುದೇ ಸುಧಾರಣೆ ಕಂಡುಬರಲಿಲ್ಲ ಮತ್ತು ಬೆಳವಣಿಗೆಯ ಮೈಲಿಗಲ್ಲುಗಳನ್ನು ತಲುಪುವಲ್ಲಿ ಆತ ಹಿಂದೆ ಬಿದ್ದಿದ್ದ. ಹತ್ತು ತಿಂಗಳ ನಂತರ, ಹಮೀದಿಯಾ ಆಸ್ಪತ್ರೆಯ ಮಕ್ಕಳ ತಜ್ಞರಾಗಿರುವ ಡಾ. ಟಿಕ್ಕಾಸ್ ಅವರನ್ನು ಭೇಟಿಯಾದೆವು. ನಿರ್ಮಿತ್ ಸೆರೆಬ್ರಲ್ ಪಾಲ್ಸಿ (ಸಿ.ಪಿ–ಮೆದುಳುವಾತ)ಯಿಂದ ಬಳಲುತ್ತಿದ್ದಾನೆ ಮತ್ತು ಆತನಿಗೆ ವಿವಿಧ ರೀತಿಯ ಚಿಕಿತ್ಸೆಗಳು ಬೇಕು ಎಂದು ಅವರು ಹೇಳಿದರು. ನಮಗೆ ಸಿ.ಆರ್.ಸಿ*ಗೆ ಹೋಗುವಂತೆ ಅವರು ಸಲಹೆ ನೀಡಿದರು. ನಮ್ಮ ಮಗನ ಭವಿಷ್ಯದ ಕುರಿತು ನಿಜಕ್ಕೂಚಿಂತಿತರಾಗಿದ್ದೆವು. ಆದರೂ ನಮ್ಮ ಮನೆಯಿಂದ 15 ಕಿ.ಮೀ.ನಷ್ಟು ದೂರವಿರುವ ಸಿ.ಆರ್.ಸಿ.ಗೆ ಆತನನ್ನು ಕರೆದುಕೊಂಡು ಹೋಗಲು ನಾವು ಪ್ರಾರಂಭಿಸಿದೆವು. ಮನೆಯಲ್ಲೂ ಸಹ, ಚಿಕಿತ್ಸಾಕೇಂದ್ರದಲ್ಲಿ ಚಿಕಿತ್ಸಕರು ನೀಡುವ ವಿವಿಧ ಥೆರಪಿಗಳನ್ನು ನೀಡಲು ನಾವು ಪ್ರಾರಂಭಿಸಿದೆವು. ಆದರೆ ಯಾವುದೇ ಹೆಚ್ಚಿನ ಸುಧಾರಣೆ ಕಂಡು ಬರಲಿಲ್ಲ. ನಾವು ಸುಮಾರು ಮೂರು ವರ್ಷಗಳ ಕಾಲ ಆತನನ್ನು ಈ ಕೇಂದ್ರಕ್ಕೆ ಕರೆದುಕೊಂಡು ಹೋದೆವು.

ಈ ನಡುವೆ ನಾವು ಒಂದಷ್ಟು ಕೌಟುಂಬಿಕ ಸಮಸ್ಯೆಗಳನ್ನು ಎದುರಿಸಿದೆವು. ಹೀಗಾಗಿ ನಿರ್ಮಿತ್‌ಗೆ ಸರಿಯಾಗಿ ಗಮನ ನೀಡಲು ಆಗಲಿಲ್ಲ. ಆತನ ಬೆಳವಣಿಗೆ ಇನ್ನಷ್ಟು ಕುಂಠಿತಗೊಂಡಿತ್ತು. ಇದೇ ವೇಳೆ, ಡಾ. ಟಿಕ್ಕಾಸ್ ಅವರು ಔದ್ಯೋಗಿಕ ಚಿಕಿತ್ಸಕರಾಗಿರುವ (Occupational therapist) ಡಾ. ವಿಕಾಸ್ ಕದಂ ಅವರ ಕುರಿತು ನಮಗೆ ತಿಳಿಸಿದರು. ಇವರ ಥೆರಪಿಯು ನಿರ್ಮಿತ್‌ಗೆ ಕುಳಿತುಕೊಳ್ಳಲು ಮತ್ತು ನಡೆಯಲು ಸಹಾಯ ಮಾಡಿತು.

ನಾವು ಡಾ. ವಿಕಾಸ್ ಅವರ ಚಿಕಿತ್ಸೆಗಳನ್ನು ಮುಂದುವರಿಸಿದೆವು. ನಿರ್ಮಿತ್ ಮೂರೂವರೆ ವರ್ಷದವನಾಗಿದ್ದಾಗ ನಾವು ಆತನನ್ನು ಪ್ಲೇಸ್ಕೂಲ್ ಒಂದರಲ್ಲಿ ದಾಖಲು ಮಾಡಲು ಪ್ರಯತ್ನಿಸಿದೆವು. ಕೆಲವು ಶಾಲೆಗಳು ಆತನನ್ನು ದಾಖಲಿಸಲು ನಿರಾಕರಿಸಿದವು. ನಾವು ಅನೇಕ ಶಾಲೆಗಳಲ್ಲಿ ವಿಚಾರಿಸಿದೆವು. ಕೊನೆಗೆ ನಿರ್ಮಿತ್ 'ದ ಲರ್ನಿಂಗ್‌ಟ್ರೀ' ಎಂಬ ಶಾಲೆಯಲ್ಲಿ ಪ್ರವೇಶ ಪಡೆದನು. ಈ ಶಾಲೆಯ ಶಿಕ್ಷಕರು ತುಂಬಾ ಸಹಕಾರ ಮನೋಭಾವವುಳ್ಳವರಾಗಿದ್ದರು ಮತ್ತು ನಿರ್ಮಿತ್ ಅಲ್ಲಿ ಇತರ ಮಕ್ಕಳೊಡನೆ ಬೆರೆತು ಬದುಕಲು ಕಲಿತನು. ಆದರೆ ನಮ್ಮ ಸಮಸ್ಯೆ ಇಲ್ಲಿಗೆ ಕೊನೆಗೊಳ್ಳಲಿಲ್ಲ. ನಿರ್ಮಿತ್ ಒಂದಷ್ಟು ದೂರ ನಡೆಯಲು ಮಾತ್ರ ಸಮರ್ಥನಾಗಿದ್ದ. ಆದರೆ ಓದಲು ಮತ್ತು ಬರೆಯಲು ಆತನಿಗೆ ಸಾಧ್ಯವಾಗುತ್ತಿರಲಿಲ್ಲ. ಈ ಸಂದರ್ಭದಲ್ಲಿಯೇ ನಮಗೆ ಆತನನ್ನು ವಿಶೇಷ ಶಾಲೆಗೆ ಸೇರಿಸಬೇಕಾದ ಅಗತ್ಯ ಕಂಡುಬಂದಿತು. ಸ್ನೇಹಿತರು ಮತ್ತು ಪರಿಚಯದ ವ್ಯಕ್ತಿಗಳ ಮೂಲಕ ನಮಗೆ 'ಅರುಷಿ' ಎಂಬ ಸಂಸ್ಥೆಯ ಬಗ್ಗೆ  ತಿಳಿಯಿತು. ಈ ಸಂಸ್ಥೆಯಲ್ಲಿ ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಥೆರಪಿಗಳು, ವಿಶೇಷ ಶಿಕ್ಷಣ ಮತ್ತು ಇತರ ವಿಧಾನಗಳ ಮೂಲಕ ತರಬೇತಿ ನೀಡಲಾಗುತ್ತಿತ್ತು. ಇದನ್ನು ತಿಳಿದು ನಾವು ಅಲ್ಲಿಗೆ ಹೋದೆವು. ಅವರು ನಮ್ಮ ಪರಿಸ್ಥಿತಿಯನ್ನು ಚೆನ್ನಾಗಿ ಅರಿತು ಕೊಂಡರು. ಹೀಗೆ ನಿರ್ಮಿತ್‌ನ ವಿಶೇಷ ಶಿಕ್ಷಣ ಪ್ರಾರಂಭವಾಯಿತು.

ಆತನ ಪರಿಸ್ಥಿತಿಯಲ್ಲಿ ನಿಧಾನವಾಗಿ ಸುಧಾರಣೆ ಕಂಡುಬಂದಿತು. ಆತನು ವಸ್ತುಗಳನ್ನು ಅರ್ಥಮಾಡಿಕೊಳ್ಳಲು ಮತ್ತು ಗುರುತಿಸಲು ಕಲಿತುಕೊಂಡನು. ನಿರ್ಮಿತ್‌ನ ಈ ಸುಧಾರಣೆಯನ್ನು ಕಂಡು ನಮಗೆ ಇನ್ನಷ್ಟು ಆತ್ಮವಿಶ್ವಾಸ ಹೆಚ್ಚಾಯಿತು. ಅರುಷಿಯಲ್ಲಿ ವಿಶೇಷ ಶಿಕ್ಷಕಿಯಾಗಿರುವ ರಮಾ ಮೇಡಂ ನಿರ್ಮಿತ್‌ಗೆ ಆತನ ಅಧ್ಯಯನದಲ್ಲಿ ಸಹಾಯ ಮಾಡಿದರು. ಅವರ ಪ್ರಯತ್ನದ ಫಲವಾಗಿ ನಿರ್ಮಿತ್ ಸ್ವಲ್ಪಮಟ್ಟಿಗೆ ಓದಲು ಮತ್ತು ಬರೆಯಲು ಪ್ರಾರಂಭಿಸಿದನು. ಈ ಸಂದರ್ಭದಲ್ಲಿ ನಾವು ಸ್ವಲ್ಪ ಆರ್ಥಿಕ ಸಮಸ್ಯೆಯನ್ನು ಎದುರಿಸಿದೆವು. ಹೀಗಾಗಿ ನಿರ್ಮಿತ್‌ನನ್ನು ಅರುಷಿಗೆ ಕಳುಹಿಸಲು ಕಷ್ಟವಾಯಿತು. ಆದರೆ ನಮಗೆ ಅರುಷಿಯ ಶಿಕ್ಷಕಿಯರಾದ ಸಪ್ನಾ ಮೇಡಂ ಹಾಗೂ ರಮಾ ಮೇಡಂ ಮತ್ತು ಇತರರ ಸಹಕಾರ ದೊರೆತು. ನಿರ್ಮಿತ್ ಮತ್ತೆ ಅಲ್ಲಿಗೆ ಹೋಗಲು ಪ್ರಾರಂಭಿಸಿದನು. ನಿರ್ಮಿತ್ ಈಗ ಕೇಂದ್ರೀಯ ವಿದ್ಯಾಲಯದಲ್ಲಿ ಕಲಿಯುತ್ತಿದ್ದಾನೆ. ಆತ ಅಲ್ಲಿ ಸಾಮಾನ್ಯ ವಿದ್ಯಾರ್ಥಿಗಳೊಂದಿಗೆ ಸಂಭಾಷಣೆ ನಡೆಸುತ್ತಾನೆ ಮತ್ತು ಅವರ ಜತೆಗೂಡಿ ಕಲಿಯುತ್ತಾನೆ. ಆದರೆ ಆತ ಅಲ್ಲಿಯೂ ಕೆಲವೊಂದು ಸಮಸ್ಯೆಗಳನ್ನು ಎದುರಿಸುತ್ತಿದ್ದನು. ಇತರ ಸಾಮಾನ್ಯ ಮಕ್ಕಳು ನಿರ್ಮಿತ್‌ನಿಂದ ಅಂತರ ಕಾಪಾಡಿಕೊಳ್ಳುತ್ತಿದ್ದರು ಮತ್ತು ಆತನನ್ನು ಅವರ ಜೊತೆ ಕುಳಿತುಕೊಳ್ಳಲು ಬಿಡುತ್ತಿರಲಿಲ್ಲ. ಈ ಸಮಸ್ಯೆಗಳ ನಡುವೆಯೂ ಕೆಲವೊಂದು ಒಳ್ಳೆಯ ವಿಚಾರಗಳು ಇದ್ದವು. ಹಲವು ಮಕ್ಕಳು ಆತನನ್ನು ಬೆಳಗ್ಗಿನ ಶಾಲಾ ಸಭೆಗೆ ಮತ್ತು ಶೌಚಾಲಯ ಇತ್ಯಾದಿ ಸ್ಥಳಗಳಿಗೆ ಕರೆದುಕೊಂಡು ಹೋಗುತ್ತಾರೆ. ಅವರು ಅವನಿಗೆ ಮನೆಕೆಲಸದ ಕುರಿತು ಹೇಳುತ್ತಾರೆ ಮತ್ತು ಅವನ ತರಗತಿ ಕೆಲಸವನ್ನು ನೋಟ್ ಪುಸ್ತಕದಲ್ಲಿ ಬರೆಸುತ್ತಾರೆ. ಅವರ ಬೆಂಬಲದಿಂದಾಗಿಯೇ ನಿರ್ಮಿತ್ ಯಾವುದೇ ಭೀತಿಯಿಲ್ಲದೆ ಶಾಲೆಗೆ ಹೋಗುತ್ತಾನೆ.

ಅರುಷಿಯ ಸಹಾಯದಿಂದಾಗಿಯೇ ನಿರ್ಮಿತ್ ಇಂದು ಇತರ ಮಕ್ಕಳ ಸಾಂಗತ್ಯದಲ್ಲಿ ಆತ್ಮವಿಶ್ವಾಸದಿಂದ ಮತ್ತು ಆರಾಮದಾಯಕವಾಗಿ ಬದುಕುತ್ತಿದ್ದಾನೆ. ಆತನು, ಆರುಷಿಯ ಮಕ್ಕಳು ನಡೆಸುವ ನಾಟಕಗಳಲ್ಲಿ ಆತ್ಮವಿಶ್ವಾಸದಿಂದ ಭಾಗವಹಿಸುತ್ತಾನೆ. ಈ ಕಾರಣಕ್ಕಾಗಿ ನಾವು ಅರುಷಿ ಮತ್ತು ಅಲ್ಲಿನ ಶಿಕ್ಷಕರಿಗೆ ಕೃತಜ್ಞತೆಯನ್ನು ಸಲ್ಲಿಸುತ್ತೇವೆ. ನಿರ್ಮಿತ್‌ನ ಶಿಕ್ಷಣ ಮತ್ತು ಚಿಕಿತ್ಸೆಗಳ ಕಾರಣದಿಂದಾಗಿ ನಮ್ಮ ದಿನಚರಿ ಸಂಪೂರ್ಣವಾಗಿ ಬದಲಾಗಿದೆ. ಈ ಬದಲಾವಣೆಯಿಂದ ನಾವು ಬೇಗನೇ ಏಳುತ್ತೇವೆ, ಆತನನ್ನು ಶಾಲೆಗೆ ಬಿಡುತ್ತೇವೆ, ಬೆಳಗ್ಗೆ 11 ಗಂಟೆಗೆ ಆತನನ್ನು ಶಾಲೆಯಿಂದ ಕರೆದುಕೊಂಡು ಬಂದು ಅರುಷಿಯಲ್ಲಿ ಬಿಡುತ್ತೇವೆ, ಮತ್ತೆ ಅಲ್ಲಿಂದ ಮಧ್ಯಾಹ್ನ 1 ಗಂಟೆಗೆ ಮನೆಗೆ ಕರೆದುಕೊಂಡು ಬರುತ್ತೇವೆ, ಸಂಜೆ 5 ಗಂಟೆಗೆ ಆತನನ್ನು ಚಿಕಿತ್ಸಕರ ಬಳಿ ಕರೆದುಕೊಂಡು ಹೋಗುತ್ತೇವೆ ಹಾಗೂ ಕೊನೆಯದಾಗಿ ಆತ ಥೆರಪಿ ಮುಗಿಸಿ ಮನೆಗೆ ಬಂದಾಗ ಶಾಲಾ ಚಟುವಟಿಕೆಗಳ ಮನೆಕೆಲಸವನ್ನು ಮಾಡಿಸುತ್ತೇವೆ. ಆತನ ಬೆಳಗ್ಗಿನ, ಮಧ್ಯಾಹ್ನದ ಮತ್ತು ಸಂಜೆಯ ಆಹಾರದ ಬಗ್ಗೆಯೂ ನಾವು ಸಾಕಷ್ಟು ಕಾಳಜಿ ವಹಿಸುತ್ತೇವೆ ಮತ್ತು ಆತ ಆಟ ಆಡಲು ಸಮಯ ಒದಗಿಸುತ್ತೇವೆ. ನಾವಿಬ್ಬರೂ ಒಟ್ಟಿಗೆ ಈ ಎಲ್ಲಾ ಚಟುವಟಿಕೆಗಳನ್ನು ನಿರ್ವಹಿಸುತ್ತೇವೆ. ವಿಶೇಷ ಅಗತ್ಯವುಳ್ಳ ಮಕ್ಕಳ ಪೋಷಕರೊಂದಿಗೆ ನಾವು ಇನ್ನೊಂದು ಪ್ರಮುಖವಾದ ವಿಚಾರವನ್ನು ಹಂಚಿಕೊಳ್ಳಲು ಬಯಸುತ್ತೇವೆ. ಈ ಮಕ್ಕಳ ಭವಿಷ್ಯದ ಬಗ್ಗೆ ಅವರು ಹೆಚ್ಚು ಚಿಂತಿಸಬಾರದು. ಬದಲಾಗಿ ಅವರು ಮಕ್ಕಳ ಪ್ರಸ್ತುತ ಅಗತ್ಯತೆಗಳ ಕುರಿತು ಹೆಚ್ಚು ಗಮನ ಹರಿಸಬೇಕು, ಅವರ ಜೊತೆ ಹೆಚ್ಚು ಸಮಯ ಕಳೆಯಬೇಕು ಮತ್ತು ಅವರೊಂದಿಗೆ ಆಟವಾಡಬೇಕು ಹಾಗೂ ನಗುತ್ತಾ ಖುಷಿಯಲ್ಲಿರಬೇಕು. ಅವರ ದೌರ್ಬಲ್ಯದ ಕುರಿತು ಅವರಿಗೆ ತಿಳಿಸುವುದನ್ನು ಬಿಟ್ಟು ಅವರು ಮುಂದೆ ಸ್ವಾವಲಂಬಿ ಜೀವನ ನಡೆಸುವಂತೆ ಉತ್ತೇಜಿಸಬೇಕು. ಕೊನೆಯದಾಗಿ ನಮ್ಮನ್ನು ಕಾಡುವ ದೊಡ್ಡ ವಿಷಾದ ಏನೆಂದರೆ, ನಾವು ಸಕಾಲದಲ್ಲಿ ಸಮಸ್ಯೆಯ ಬಗ್ಗೆ ತಿಳಿದುಕೊಳ್ಳಲಿಲ್ಲ ಮತ್ತು ಇದಕ್ಕಿರುವ ಚಿಕಿತ್ಸೆಯ ಕುರಿತು ನಮಗೆ ಮಾಹಿತಿ ಸಿಗಲಿಲ್ಲ. ಹೀಗಾಗಿ ನಿರ್ಮಿತ್‌ನ ಚಿಕಿತ್ಸೆಯಲ್ಲಿ ವಿಳಂಬವಾಯಿತು. ಸಿ.ಪಿ.(ಮೆದುಳುವಾತ) ಇರುವ ಮಕ್ಕಳ ಪೋಷಕರಿಗೆ ಈ ನ್ಯೂನತೆಯ ಕುರಿತು, ಇದಕ್ಕಿರುವ ಚಿಕಿತ್ಸೆ, ಹೇಗೆ ಮತ್ತು ಏನು ಮಾಡಬೇಕು, ಇದರ ಚಿಕಿತ್ಸೆಗಾಗಿ ಎಲ್ಲಿಗೆ ಹೋಗಬೇಕು ಎಂಬ ಕುರಿತು ಸಂಪೂರ್ಣ ಮಾಹಿತಿಯನ್ನು ನೀಡಬೇಕೆಂದು ನಾವು ಎಲ್ಲಾ ವೈದ್ಯರು, ಪೋಷಕರು, ಶಿಕ್ಷಕರು ಮತ್ತು ಚಿಕಿತ್ಸಕ (ಥೆರಪಿಸ್ಟ್)ರಲ್ಲಿ ವಿನಂತಿಸುತ್ತೇವೆ. ಈ ನ್ಯೂನತೆಯ ಹಂತಗಳು ಮತ್ತು ಮಗು ಬೆಳೆದಂತೆ ಮಗುವಿನ ಮೇಲಾಗುವ ಪರಿಣಾಮ ಮುಂತಾದುವುಗಳ ಕುರಿತು ಪೋಷಕರಿಗೆ ಅರಿವು ಮೂಡಿಸಬೇಕು.

ಇದು ನಮ್ಮ ಮಕ್ಕಳಿಗೆ ಸಹಾಯ ಮಾಡಲು ಬೇಕಾಗಿರುವಂತಹ ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳಲು ನಮ್ಮನ್ನು ತಯಾರು ಮಾಡಿದೆ ಮತ್ತು ಈ ಮಕ್ಕಳಿಗಾಗಿ ಹೊಸ ಪ್ರಪಂಚವನ್ನೇ ಸೃಷ್ಟಿಸಿರುವ ಮತ್ತು ಅವರು ವಿವಿಧ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ಮಾಡಿರುವ ಹಾಗೂ ಅವರು ಮುಕ್ತವಾಗಿ ಬದುಕನ್ನು ಆನಂದಿಸುವಂತೆ ಮಾಡಿರುವ ಅರುಷಿ ಸಂಸ್ಥೆಗೆ ಧನ್ಯವಾದಗಳು.



* ವಿಶೇಷ ಅಗತ್ಯವುಳ್ಳ ಮಕ್ಕಳ ಶಿಕ್ಷಣ, ಆರೋಗ್ಯ, ಉದ್ಯೋಗ ಮತ್ತು ವೃತ್ತಿ ತರಬೇತಿ, ಸಂಶೋಧನೆ ಮತ್ತು ಮಾನವ ಸಂಪನ್ಮೂಲ ಅಭಿವೃದ್ಧಿ, ಪುನರ್ವಸತಿ ಮುಂತಾದ ನಿವಾರಕ ಮತ್ತು ಉತ್ತೇಜಕ ಅಂಶಗಳನ್ನು ಒದಗಿಸುವುದಕ್ಕಾಗಿ ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯವು ಶ್ರೀನಗರ (ಜಮ್ಮು ಮತ್ತು ಕಾಶ್ಮೀರ), ಸುಂದರನಗರ (ಹಿಮಾಚಲ ಪ್ರದೇಶ), ಲಕ್ನೋ (ಉತ್ತರಪ್ರದೇಶ), ಭೋಪಾಲ (ಮಧ್ಯಪ್ರದೇಶ), ಗುವಾಹಟಿ (ಅಸ್ಸಾಂ), ಪಾಟ್ನಾ (ಬಿಹಾರ), ಅಹ್ಮದಾಬಾದ್ (ಗುಜರಾತ್) ಮತ್ತು ಕೋಯಿಕೋಡ್ (ಕೇರಳ) ಹೀಗೆ ಏಳು ಸ್ಥಳಗಳಲ್ಲಿ ವಿಶೇಷ ಅಗತ್ಯವುಳ್ಳ ಮಕ್ಕಳಿಗಾಗಿ ಸಂಯುಕ್ತ ಪ್ರಾದೇಶಿಕ ಕೇಂದ್ರಗಳನ್ನು ಸ್ಥಾಪಿಸಿದೆ.



ಚಿತ್ರ ಶೀರ್ಷಿಕೆ:
**ನಿರ್ಮಿತ್ ನಾಯಕ್‌ನ**
ಪೋಷಕರಾದ ನೀತಾ ಮತ್ತು ನಿತಿನ್ ನಾಯಕ್

ಅನುವಾದ: **ಮೆಲ್ವಿನ್ ಮೆಂಡೊಂಕಾ** । ಪರಿಶೀಲನೆ: **ಲತಾ ಕೆ ಸಿ**

# ವಿಕಲತೆಗಳ ಬದಲು ಸಾಮರ್ಥ್ಯಗಳ ಜೊತೆ ಕಾರ್ಯನಿರ್ವಹಣೆ

## ವಿಶೇಷ ಶಿಕ್ಷಕಳಾಗಿ ನನ್ನ ಅನುಭವ

ಪುಷ್ಪಲತಾ ಪಾಂಡೆ

ವಿಶೇಷ ಅಗತ್ಯವುಳ್ಳ ಮಕ್ಕಳ ಬಗೆಗೆ ಮಾತನಾಡಿದಾಗಲೆಲ್ಲ ಜನ ವಿವಿಧ ರೀತಿಯಲ್ಲಿ ಪ್ರತಿಕ್ರಿಯಿಸುತ್ತಾರೆ ಕೆಲವರು ಅನುಭೂತಿ ತೋರಿಸುತ್ತಾರೆ, ಕೆಲವರು ಅನುಕಂಪ ತೋರಿಸುತ್ತಾರೆ, ಇನ್ನು ಕೆಲವರು ಅವರನ್ನು ಅರ್ಥಮಾಡಿಕೊಳ್ಳುವುದಕ್ಕೇ ಹೋಗುವುದಿಲ್ಲ. ವಿಶೇಷ ಅಗತ್ಯವುಳ್ಳ ಮಕ್ಕಳ ಭಾವನೆ, ವರ್ತನೆ, ಅಗತ್ಯಗಳನ್ನು ಗೌರವಿಸಬೇಕಾದದ್ದು, ಹತ್ತಿರಕ್ಕೆ ಬಿಟ್ಟುಕೊಳ್ಳಬೇಕಾದದ್ದು ಶಿಕ್ಷಕರಾಗಿ ನಮ್ಮ ಕರ್ತವ್ಯ. ನಾವು ಅವರ ಸಮಸ್ಯೆಗಳನ್ನು ಗ್ರಹಿಸಲು ಪ್ರಯತ್ನಿಸಬೇಕು, ಅವರ ಅಗತ್ಯಗಳನ್ನು ಅರಿತುಕೊಳ್ಳಬೇಕು, ಅವರ ಕಲಿಕೆಯ ಅಗತ್ಯಗಳಿಗೆ ಬೇಕಾದ ಸಮಾನ ಅವಕಾಶಗಳು ಸಿಗುತ್ತಿದೆಯೇ ಎಂದು ಖಾತರಿ ಪಡಿಸಿಕೊಳ್ಳಬೇಕು. ತಮ್ಮ ಶಿಕ್ಷಕರ ಜೊತೆಗೆ ಸಂಪರ್ಕದಲ್ಲಿರಲು ಸಾಕಷ್ಟು ಅವಕಾಶಗಳಿವೆಯೇ ಎಂದು ನೋಡಿಕೊಳ್ಳಬೇಕು.

ದೈಹಿಕ ಅಥವಾ ಬೌದ್ಧಿಕ ನ್ಯೂನತೆಗಳು ಕಲಿಕೆಯನ್ನು ಬಾಧಿಸುತ್ತವೆ. ಪ್ರತಿಯೊಬ್ಬ ವೈಕಲ್ಯವುಳ್ಳ ಮಗುವಿನ ನಿರ್ದಿಷ್ಟ ಬೇಡಿಕೆಗಳು ಏನು ಎನ್ನುವುದರ ಬಗ್ಗೆ ನಮಗೆ ಎಚ್ಚರ ಇರಬೇಕು. ನನ್ನ ಪ್ರಕಾರ ಕೆಲವು ವಿಚಾರಗಳು ಮಕ್ಕಳ ಸಮಸ್ಯೆಗಳ ಮೂಲದ ಮೇಲೆ ಸ್ಪಷ್ಟ ಪರಿಣಾಮ ಬೀರುತ್ತವೆ. ಇಂತಹ ಕೆಲವು ವಿಚಾರಗಳು ಎಲ್ಲ ಮಕ್ಕಳಿಗೆ ಸಮಾನ ಆಗಿರಬಹುದು. ಆದರೆ ಉಳಿದವರಿಗೆ ಸಂಬಂಧಿಸಿದಂತೆ ಈ ಮುಂದಿನ ವಿಚಾರಗಳನ್ನು ಶಿಕ್ಷಕರು ಗಮನದಲ್ಲಿ ಇಟ್ಟುಕೊಳ್ಳುವುದು ಉಪಯುಕ್ತ:

- ವೈಯಕ್ತಿಕ ವ್ಯತ್ಯಾಸಗಳು
- ಮಗುವಿನ ಕ್ರಿಯಾತ್ಮಕ ಸಾಮರ್ಥ್ಯವನ್ನು ಹೆಚ್ಚಿಸುವುದಕ್ಕೆ ಬೇಕಾದ ಪೂರಕ ಸಲಕರಣೆಗಳ ಲಭ್ಯತೆ
- ಶಾಲಾಡಳಿತ ಮತ್ತು ಸಹಪಾಠಿಗಳು ವಿಶೇಷ ಅಗತ್ಯವುಳ್ಳ ಮಕ್ಕಳನ್ನು ಸ್ವೀಕರಿಸುವುದು.
- ವೈಯಕ್ತಿಕ ಪ್ರವೃತ್ತಿ ಮತ್ತು ಆಸಕ್ತಿ.
- ಶಾಲೆ ಮತ್ತು ಸಮುದಾಯದ ಒಟ್ಟಾರೆ ಪರಿಸರ

ಈ ಎಲ್ಲ ವಿಚಾರಗಳು ಮಕ್ಕಳ ದೈಹಿಕ, ಮಾನಸಿಕ, ಸಾಮಾಜಿಕ ಮತ್ತು ಭಾವನಾತ್ಮಕ ಬೆಳವಣಿಗೆಯಲ್ಲಿ ಮಹತ್ವದ ಪಾತ್ರ ವಹಿಸುತ್ತವೆ. ವೈಕಲ್ಯವುಳ್ಳ ಮಕ್ಕಳು ಹೆಚ್ಚಿನ ಕಷ್ಟಗಳನ್ನು ಅನುಭವಿಸುತ್ತಾರೆ, ಆದರೆ ಅವರಿಗೆ ತಮ್ಮ ಅಗತ್ಯಗಳನ್ನು ಹೇಳಿಕೊಳ್ಳುವುದಕ್ಕೆ ಸಾಧ್ಯವಾಗದೇ ಹೋಗಬಹುದು. ಇಂತಹ ಸನ್ನಿವೇಶದಲ್ಲಿ, ಶಿಕ್ಷಕರಾಗಿ ನಮ್ಮ ಪಾತ್ರ ನಿರ್ಣಾಯಕವಾದದ್ದಾಗಿರುತ್ತದೆ.

ನನ್ನ ಅನುಭವದ ಪ್ರಕಾರ, ಅನೇಕ ಅಧ್ಯಾಪಕರಿಗೆ ಇಂತಹ ಮಕ್ಕಳಿಗೆ ಏನಾದರೂ ಸಹಾಯ ಮಾಡಬೇಕು ಎನಿಸಿದರೂ ಹೇಗೆ ಎಂದು ಗೊತ್ತಿರುವುದಿಲ್ಲ. ಅದಕ್ಕಾಗಿ ಎಲ್ಲಿಂದ ಬೆಂಬಲ ಪಡೆಯಬಹುದು ಎನ್ನುವುದು ಗೊತ್ತಿರುವುದಿಲ್ಲ. ಕಾಲಸರಿದಂತೆ ವಿಶೇಷ ಅಗತ್ಯವುಳ್ಳ ಮಗು ಒಂದು ತರಗತಿಯಿಂದ ಮುಂದಿನ ತರಗತಿಗೆ ಹೋಗುತ್ತದೆ. ಮಗು ತನ್ನ ಅಧ್ಯಯನ ಪೂರ್ಣಗೊಳಿಸುವ ದಿನದ ಬಗ್ಗೆಯೇ ಶಿಕ್ಷಕರು ಯೋಚಿಸುವುದಕ್ಕೆ ಆರಂಭಿಸುತ್ತಾರೆ. ಮಗು ತೇರ್ಗಡೆ ಹೊಂದಿ ಶಾಲೆಯಿಂದ ಹೋದ ನಂತರ ಶಿಕ್ಷಕರು ಈ ಕುರಿತು ಯೋಚಿಸುವುದನ್ನು ನಿಲಿಸುತ್ತಾರೆ. ಕೆಲವು ಶಾಲೆಗಳು ಅತ್ಯುನ್ನತ ಶೈಕ್ಷಣಿಕ ದಾಖಲೆಯನ್ನು ಕಾಪಾಡುವುದಕ್ಕಾಗಿ, ಶಾಲಾ ದಾಖಲಾತಿ ಘಟ್ಟದಲ್ಲೇ ಅನೇಕ ತಡೆಗಳನ್ನು ಒಡ್ಡುವುದರ ಮೂಲಕ ಒಂದು ಬಗೆಯ ನಾಜೂಕಿನ ಹೊರದಬ್ಬುವಿಕೆ ಪ್ರಕ್ರಿಯೆಯನ್ನು ಪಾಲಿಸುತ್ತವೆ. ಆದರೂ ಹಲವು ಶಿಕ್ಷಕರು ಇಂತಹ ಮಕ್ಕಳು ತರಗತಿಯಲ್ಲಿ ಎದುರಿಸುವ ಅನೇಕ ಸವಾಲುಗಳನ್ನು ಸ್ವೀಕರಿಸುತ್ತಾರೆ, ಅಂತಹ ಮಕ್ಕಳಿಗಾಗಿ ಕ್ರಿಯಾಶೀಲರಾಗುತ್ತಾರೆ ಎನ್ನುವುದು ಕೂಡಾ ಅಷ್ಟೇ ನಿಜ.

### ವಿದ್ಯಾರ್ಥಿಗಳನ್ನು ಗುರುತಿಸುವ ಪ್ರಕ್ರಿಯೆ

ವಿಶೇಷ ಅಗತ್ಯವುಳ್ಳ ಮಕ್ಕಳ ಸಂದರ್ಭದಲ್ಲಿ ನಾವು ಎಷ್ಟು ಬೇಗ ಕ್ರಮ ಕೈಗೊಳ್ಳುತ್ತೇವೋ ಅಷ್ಟು ಬೇಗ ಸಕಾರಾತ್ಮಕ ಫಲಿತಾಂಶಗಳನ್ನು ಸಾಧಿಸುವುದು ಸಾಧ್ಯ. ಇದರ ಪಟ್ಟಿ ಬಹಳ ಉದ್ದವಾಗಿದೆ. ಮಗುವಿನ ಅವಲೋಕನ,; ಪಾಲಕರ ಜೊತೆಗೆ ಸಮಾಲೋಚಿಸಿ ನಿರ್ದಿಷ್ಟ ಅಧ್ಯಯನದ ತಯಾರಿ, ಆರೋಗ್ಯ ಪ್ರಮಾಣಪತ್ರ ಪಡೆಯುವುದು, ಶಿಕ್ಷಕ ಮತ್ತು ಮಗು ಸಂಬಂಧಿ ಚಟುವಟಿಕೆಗಳ ಮಾಹಿತಿ ಪಡೆಯುವುದು, ತರಗತಿಯಲ್ಲಿ ಗಮನಿಸುವುದು, ಸಹಪಾಠಿಗಳ ಜೊತೆಗೆ ಮತ್ತು ಮೈದಾನದಲ್ಲಿ ಅವರ ವರ್ತನೆಯ ಬಗ್ಗೆ ಗಮನಹರಿಸುವುದು, ಪರಿಶೀಲನಾ-ಪಟ್ಟಿ ಬಳಸುವುದು, ಅವರ ಸಹಯೋಗದೊಂದಿಗೆ ವೈಯಕ್ತಿಕ ಶೈಕ್ಷಣಿಕ ಯೋಜನೆ (Individual Educational Plan-IEP) ಯ ತಯಾರಿ, ಕ್ರಿಯಾತ್ಮಕಕ ಮೌಲ್ಯಮಾಪನ ನಡೆಸುವುದು, ಆರೋಗ್ಯ ತಪಾಸಣೆಯ ಪ್ರಮಾಣಪತ್ರ ಪಡೆದುಕೊಳ್ಳುವುದು, ಮಕ್ಕಳ ಕೆಲಸಗಳನ್ನು ಪೂರೈಸುವುದಕ್ಕಾಗಿ ಕಾಲಕಾಲಕ್ಕೆ ಹೆತ್ತವರನ್ನು ತೊಡಗಿಸಿ-ಕೊಳ್ಳುವುದು, ವಾರ್ಷಿಕ ಗುರಿಯನ್ನು ಸಾಧಿಸುವುದಕ್ಕಾಗಿ ತ್ರೈಮಾಸಿಕ ಗುರಿಗಳನ್ನು ಸಿದ್ಧಗೊಳಿಸುವುದು, ಅಭ್ಯಾಸ ಪುಸ್ತಕ ತಯಾರಿಸುವುದು, ಬೌದ್ಧಿಕ ಮತ್ತು ದೈಹಿಕ ಸಾಮರ್ಥ್ಯ ಬೆಳವಣಿಗೆಗಾಗಿ ಚಟುವಟಿಕೆಗಳನ್ನು ಖಾತರಿಪಡಿಸುವುದು, ಸಾಮಾಜಿಕ ಮತ್ತು ಭಾವನಾತ್ಮಕ ಬೆಳವಣಿಗಾಗಿ, ಆಯೋಜಿಸಲಾಗುವ ಚಟುವಟಿಕೆಗಳಲ್ಲಿ ಭಾಗವಹಿಸಲು ಬೇಕಾದ ಅವಕಾಶ ಒದಗಿಸುವುದು ಮತ್ತು ಜವಾಬ್ದಾರಿ ಕೊಡುವುದು.

### ಪಾಲಕರ ಪ್ರತಿಕ್ರಿಯೆ

ತಮ್ಮ ಮಗುವಿನ ದೈಹಿಕ ಅಗತ್ಯಗಳನ್ನು ಒಪ್ಪಿಕೊಂಡು, ವಿಶೇಷ ಶಿಕ್ಷಕರಿಂದ ವಾಸ್ತವ ನಿರೀಕ್ಷೆಗಳನ್ನು ಇಟ್ಟುಕೊಂಡ ಪಾಲಕರೊಂದಿಗೆ ಒಳ್ಳೆಯ ಸಂಬಂಧ ಬೆಳೆಸುವುದು ಸಾಧ್ಯ. ಕೆಲವು ಪಾಲಕರು ಇಂತಹ ಮಕ್ಕಳಿಂದ ಮುಕ್ತರಾಗಲು ಪ್ರಯತ್ನಿಸಿದರೆ ಕೆಲವರು ಹೆಚ್ಚಿನ ಗಮನಹರಿಸುತ್ತಾರೆ. ಕೆಲ ಪೋಷಕರು ಮಕ್ಕಳ ಬೌದ್ಧಿಕ ಅಗತ್ಯಗಳನ್ನು ಅರ್ಥಮಾಡಿಕೊಳ್ಳುವುದಿಲ್ಲ ಅಥವಾ ಸ್ವೀಕರಿಸುವುದಿಲ್ಲ, ಇಲ್ಲವೇ ಸಹಕಾರವನ್ನೂ ನೀಡುವುದಿಲ್ಲ. ಮಕ್ಕಳು ಇದರ ಪರಿಣಾಮವನ್ನು ಎದುರಿಸಬೇಕಾಗುತ್ತದೆ. ಶಾಲೆಯಲ್ಲಿ ಕೆಲವೊಮ್ಮೆ ವಿಶೇಷ ಶಿಕ್ಷಕರ ಬಗೆಗೆ ಕಲ್ಪನೆ ಹೇಗಿರುತ್ತದೆ ಎಂದರೆ ಕೇವಲ ಅಧ್ಯಯನದಲ್ಲಿ ತೊಂದರೆ ಅನುಭವಿಸುವ

ವಿದ್ಯಾರ್ಥಿಗಳು ಮಾತ್ರ ತಮ್ಮ ತರಗತಿಗೆ ಹೋದರೆ ಸಾಕು ಎನ್ನುವಂತಿರುತ್ತದೆ. ಒಬ್ಬ ಮಗುವಿಗೆ ವರ್ತನೆಯ ಸಮಸ್ಯೆ ಇತ್ತು. ಆದರೆ ಮಗು ವಿಶೇಷ ಶಿಕ್ಷಕರ ತರಗತಿಗೆ ಹಾಜರಾಗುತ್ತಿದೆ ಎಂದು ಪಾಲಕರಿಗೆ ತಿಳಿದಾಗ ಆ ವಾಸ್ತವವನ್ನು ಸ್ವೀಕರಿಸಲು ಪಾಲಕರು ತಯಾರಾಗಲಿಲ್ಲ. ಇಂದಿಗೂ ವಿಶೇಷ ಶಿಕ್ಷಣದ ಬಗೆಗೆ ಜಾಗೃತಿಯ ಕೊರತೆ ಇದೆ. ಕೇವಲ ಶಿಕ್ಷಕರ ಪ್ರಯತ್ನದಿಂದಷ್ಟೇ ಇದನ್ನು ಮೀರಲು ಸಾಧ್ಯ. ಅವರು ಮಕ್ಕಳಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಕಡ್ಡಾಯವಾಗಿ ಹೆತ್ತವರೊಂದಿಗೆ ಚರ್ಚಿಸಬೇಕು ಮತ್ತು ಮಕ್ಕಳ ಅಗತ್ಯಗಳನ್ನು ಪಾಲಕರಿಗೆ ಪರಿಚಯಿಸಬೇಕು.

**ಮೌಲ್ಯಮಾಪನ ಮತ್ತು ವಿಕಲತೆಯುಳ್ಳ ಮಕ್ಕಳು**

ಪ್ರತಿ ಮಗುವೂ ತನ್ನದೇ ಆದ ವಿಧಾನದಲ್ಲಿ ಕಲಿಯುತ್ತದೆ ಮತ್ತು ಆಕೆ/ಆತನಿಗೆ ಅವರದ್ದೇ ಆದ ಕಲಿಕಾ ಶೈಲಿ ಎನ್ನುವುದು ಇರುತ್ತದೆ. ನಾವು ನಮ್ಮ ಮಕ್ಕಳನ್ನು ವಿವಿಧ ರೀತಿಯಲ್ಲಿ ಮೌಲ್ಯಮಾಪನ ಮಾಡಬೇಕು. ಗುಂಪು ಕೆಲಸದ ಮೌಲ್ಯಮಾಪನ, ನಿರಂತರ ಮೌಲ್ಯಮಾಪನ, ಮುಕ್ತ ಪುಸ್ತಕ ಪರೀಕ್ಷೆ–ಹೀಗೆ ವಿವಿಧ ರೀತಿಯಲ್ಲಿ ಮೌಲ್ಯಮಾಪನ ಮಾಡಬೇಕು. ನಾವು ಮಗುವಿನ ಸಾಮರ್ಥ್ಯಕ್ಕೆ ಅನುಗುಣವಾಗಿ ಪರೀಕ್ಷೆಗಳನ್ನು ವಿನ್ಯಾಸಗೊಳಿಸಬೇಕು. ಇದರಲ್ಲಿ ವಿಶೇಷ ಶಿಕ್ಷಕರೂ ಒಳಗೊಂಡಿದ್ದರೆ ಎಲ್ಲ ಮಕ್ಕಳಿಗೂ, ಎಲ್ಲಾ ಶಿಕ್ಷಕರಿಗೂ ಪ್ರಯೋಜನವಾಗುತ್ತದೆ. ಕಡ್ಡಾಯ ಶಿಕ್ಷಣದ ಹಕ್ಕು (ಆರ್‌ಟಿಇ) ಕಾಯ್ದೆಯ ಅನುಷ್ಠಾನದ ನಂತರ ತಡೆ ರಹಿತ ಅವಕಾಶದ ನೀತಿ (No-detention provision of the policy) ಎಂದರೆ ಕಲಿಕೆಯ ಮೌಲ್ಯಮಾಪನ ಇಲ್ಲ ಎಂದು ಕೆಲವು ಸಹೋದ್ಯೋಗಿಗಳು ಭಾವಿಸಿದ್ದಾರೆ. ಕಲಿಕಾ ಫಲಿತಾಂಶವನ್ನು ಈ ನಿಯಮಗಳು ದುರ್ಬಲಗೊಳಿಸಿವೆ ಎಂದು ವ್ಯಾಪಕವಾಗಿ ನಂಬಲಾಗಿದೆ ಉಚಿತ ಪರೀಕ್ಷೆಯ ಫಲಿತಾಂಶ ಮಾತ್ರ ಮುಖ್ಯ ಎಂದು ನಾವು ಭಾವಿಸಿದ್ದೇವೆ. ಆದರೆ ಅದು ಹಾಗಲ್ಲ. ಎನ್‌ಸಿಎಫ್ 2005 ಮೌಲ್ಯಮಾಪನದಲ್ಲಿ ಸುಧಾರಣೆ ತರುವಂತೆ ಸಲಹೆಗಳನ್ನು ನೀಡಿದೆ. ಮೌಲ್ಯಮಾಪನ ಎನ್ನುವುದು ಮಕ್ಕಳ ಸಾಮರ್ಥ್ಯ ಮತ್ತು ದೌರ್ಬಲ್ಯಗಳನ್ನು ಗುರುತಿಸಬೇಕು ಎಂದು ಅದು ಒತ್ತಿ ಹೇಳುತ್ತದೆ. ಅದರ ಪ್ರಕಾರ ಮಕ್ಕಳಿಗೆ ಪ್ರಗತಿ ಸಾಧಿಸಲು ನೆರವಾಗಬೇಕು. ಪರಿಹಾರ ಕಲಿಕಾ ಯೋಜನೆಗಳನ್ನು ವಿಶೇಷ ಅಗತ್ಯವುಳ್ಳ ವಿದ್ಯಾರ್ಥಿಗಳಿಗಾಗಿ ಸಿದ್ಧಗೊಳಿಸಬೇಕು.

**ಮರೆಯಲಾಗದ ಪ್ರಭಾ**

ವಿಶೇಷ ಶಿಕ್ಷಕಳಾಗಿ ನನಗೆ ಅನೇಕ ಮರೆಯಲಾಗದ ಅನುಭವಗಳಿವೆ. ಇಂದು, ನನ್ನ ಹಳೆಯ ನೆನಪುಗಳ ಪುಟಗಳನ್ನು ತಿರುವಿಹಾಕಿದರೆ, ನನಗೆ ಪ್ರಭಾ ನೆನಪಾಗುತ್ತಾಳೆ. ನನ್ನ ಮತ್ತು ಪ್ರಭಾ ನಡುವೆ ವಿಶಿಷ್ಟ ಸಂಬಂಧ ಇತ್ತು ಅತ್ಯಂತ ಅಲ್ಪಾವಧಿಯಲ್ಲೇ ನಾವು ಗೆಳತಿಯರಾದೆವು. ದೇವಪುರದ ಸರ್ಕಾರಿ ಪ್ರಾಥಮಿಕ ಶಾಲೆಯಲ್ಲಿ ಆಕೆ 4ನೇ ತರಗತಿ ಕಲಿಯುತ್ತಿದ್ದಳು. ತರಗತಿಯ ಪರಿವೀಕ್ಷಣೆಯ ಸಂದರ್ಭದಲ್ಲಿ ಪ್ರಭಾಗೆ ದೃಷ್ಟಿಗೆ ಸಂಬಂಧಿಸಿದ ತೊಂದರೆ ಇದೆ ಎನ್ನುವುದನ್ನು ಗುರುತಿಸಿದೆವು. ಅದು ಆಕೆಗೆ ತರಗತಿಯಲ್ಲಿ ತೊಂದರೆ ಕೊಡುತ್ತಿತ್ತು, ಹಾಗಾಗಿ ಆಕೆಯ ಕಣ್ಣಿನ ಪರೀಕ್ಷೆ ಮಾಡಿಸಲಾಯಿತು. ಆಕೆಯ ದೃಷ್ಟಿ ಶಕ್ತಿ ಅತ್ಯಂತ ತ್ವರಿತ ಗತಿಯಲ್ಲಿ ಕುಸಿಯುತ್ತಿರುವುದು ಪತ್ತೆಯಾಯಿತು. ಮೆಡಿಕಲ್ ಪರೀಕ್ಷೆ ಮಾಡಿಸುವಂತೆ ಹೆತ್ತವರಿಗೆ ತಿಳಿಸಲಾಯಿತು. ಇವೆಲ್ಲ ಪ್ರಕ್ರಿಯೆಗಳಲ್ಲಿ ಒಂದು ವರ್ಷವೇ ಸರಿದುಹೋಯಿತು. ಆಕೆಯ ಮಂದದೃಷ್ಟಿಯ ವಿಕಲತೆಯನ್ನು ಗಮನದಲ್ಲಿಟ್ಟುಕೊಂಡು ಬೋಧನಾ ಕೆಲಸವನ್ನು ಯೋಜಿಸಲಾಯಿತು. ಆ ಹೊತ್ತಿಗೆ, ಮಂದದೃಷ್ಟಿಗೆ ಸಂಬಂಧಿಸಿದ ಉಪಕರಣಗಳನ್ನು (10+ Dome Magnifier) ಬಳಸಿ ಪುಸ್ತಕಗಳನ್ನು ಓದುವುದಕ್ಕಾಗಿ ಮತ್ತು ಬರೆಯುವುದಕ್ಕಾಗಿ ಕ್ರಿಯಾಯೋಜನೆಯೊಂದನ್ನು ವಿನ್ಯಾಸಗೊಳಿಸಲಾಯಿತು. ವೈದ್ಯಕೀಯ ವರದಿಯ ಪ್ರಕಾರ, ದೃಷ್ಟಿ ನರ ದೋಷ (Optic nerve disease) ಕಾರಣದಿಂದ ಶೀಘ್ರದಲ್ಲೇ ಆಕೆ ದೃಷ್ಟಿ ಕಳೆದುಕೊಳ್ಳಲಿದ್ದಾಳೆ ಎಂದು ತಿಳಿಯಿತು. ಇದರ ಬಗ್ಗೆ ಪ್ರಭಾಗೆ ಏನನ್ನೂ ಹೇಳಲಿಲ್ಲ. ನಾವು ಮನೆಯಲ್ಲಿ ವಾರಕ್ಕೆ ಎರಡು ಬಾರಿ ಭೇಟಿಯಾಗುತ್ತಿದ್ದೆವು. ಒಂದು ದಿವಸ ಶಾಲೆಯಲ್ಲಿ ಪ್ರಭಾ, 'ಇವತ್ತು ನನಗೆ ನಿಮ್ಮ ಮುಖ ಸರಿಯಾಗಿ ಕಾಣಿಸುತ್ತಿಲ್ಲ ಮೇಡಂ' ಎಂದಳು. ನನ್ನನ್ನು ಮುಟ್ಟಿ ಆಕೆ ಈ ಮಾತನ್ನು ಹೇಳಿದ್ದಳು. ಇದನ್ನು ಕೇಳಿ ಏನೂ ಮಾಡಲಾಗದ ಅಸಹಾಯಕ ಸ್ಥಿತಿಯಲ್ಲಿ ದುಃಖಿತಳಾದೆ. ಕ್ರಮೇಣ ಪ್ರಭಾಳ ದೃಷ್ಟಿ ಇನ್ನೂ ಹದಗೆಟ್ಟಿತು. ಆದರೆ ಅದೃಷ್ಟವಶಾತ್ ಆಕೆಯ ಮನೆಯವರು ಸಮಸ್ಯೆಯನ್ನು ಅರ್ಥ ಮಾಡಿಕೊಂಡು ಆಕೆಗೆ ಸಹಕಾರ ನೀಡಿದರು. ವಿಶೇಷ ಶಿಕ್ಷಕಿಯಾಗಿ ನಾನು ಆಕೆಗೆ ಬ್ರೈಲ್ ಲಿಪಿ ಕಲಿಸಲು ನಿರ್ಧರಿಸಿದೆ. ಅವಳು ತನ್ನ ಶಿಕ್ಷಣವನ್ನು ಮುಂದುವರಿಸಿದಳು.

**ಹೆತ್ತವರ ಪಾತ್ರ**

ನಮ್ಮ ಬದುಕಿನಲ್ಲಿ ಹೆತ್ತವರು ಮಹತ್ವದ ಪಾತ್ರ ವಹಿಸುತ್ತಾರೆ. ಅವರು ನಮ್ಮ ಒಳ್ಳೆಯ ಗುಣಗಳನ್ನು ಮತ್ತು ದೌರ್ಬಲ್ಯಗಳನ್ನು ಅರ್ಥಮಾಡಿಕೊಳ್ಳುತ್ತಾರೆ ಮತ್ತು ಸ್ವೀಕರಿಸುತ್ತಾರೆ. ಪ್ರತಿಯೊಂದು ಮಗುವಿನ ಅಗತ್ಯ ಬೇರೆ ಬೇರೆಯಾಗಿರುತ್ತದೆ. ವಿಶೇಷ ಅಗತ್ಯವುಳ್ಳ ಮಕ್ಕಳ ವೈಯಕ್ತಿಕ ಅಗತ್ಯಗಳಿಗೆ ಪಾಲಕರು ಆದಷ್ಟು ಬೇಗ ಪ್ರತಿಸ್ಪಂದಿಸಬೇಕು ಮತ್ತು ಅವರ ವಿಕಲತೆ ಅವರ ಬೆಳವಣಿಗೆಗೆ ಅಡ್ಡಿಯಾಗದಂತೆ ನೋಡಿಕೊಳ್ಳಬೇಕು ಎಂದು ನಿರೀಕ್ಷಿಸುತ್ತೇವೆ. ಪಾಲಕರು ಮಕ್ಕಳನ್ನು ಸ್ವೀಕರಿಸಬೇಕು ಮತ್ತು ಇತರರ ಮುಂದೆ ಅವರನ್ನು ತಮ್ಮವರೆಂದೇ ಭಾವಿಸಬೇಕು. ಅವರ ಶಿಕ್ಷಣ ಎನ್ನುವುದು ಸಮನ್ವಯ ಶಿಕ್ಷಣ ಆಗಬೇಕು. ಶಿಕ್ಷಕರು ಮತ್ತು ಹೆತ್ತವರ ಸಹಕಾರದೊಂದಿಗೆ ಎಲ್ಲ ಅಡೆತಡೆಗಳನ್ನು ದಾಟುವುದು ಸಾಧ್ಯ. ಮುಖ್ಯವಾಗಿ ತಜ್ಞರು, ವಿಶೇಷ ತಜ್ಞರಿಗೆ ನಾವು ಸಹಕರಿಸ–ಬೇಕಾದದ್ದು ಅಗತ್ಯ.

**ವಿಶೇಷ ಶಿಕ್ಷಕರ ಪಾತ್ರ**

ಮಕ್ಕಳನ್ನು ಭೇಟಿಮಾಡುವುದರೊಂದಿಗೆ ಓರ್ವ ಶಿಕ್ಷಕರಾಗಿ ನಿಮ್ಮ ಸಂಬಂಧ ಶುರುವಾಗುತ್ತದೆ. ಮಗು ಎಷ್ಟೇ ಕಷ್ಟದ ಸಮಸ್ಯೆಯನ್ನು ಹೊಂದಿರಲಿ, ಆಕೆ/ಆತನನ್ನು ತಿಳಿದುಕೊಳ್ಳುವ ಸವಾಲನ್ನು ನೀವು ಒಪ್ಪಿಕೊಳ್ಳಬೇಕಾಗುತ್ತದೆ. ನಿಮ್ಮ ತರಗತಿಯ ಬೋಧನೆ – ಕಲಿಕಾ ವಾತಾವರಣ ಸಕಾರಾತ್ಮಕವಾಗಿರಬೇಕು. ಮಕ್ಕಳ ದೈಹಿಕ, ಬೌದ್ಧಿಕ, ಭಾವನಾತ್ಮಕ ಮತ್ತು ಸಾಮಾಜಿಕ ಅಗತ್ಯಗಳ ಬಗೆಗೆ ಶಿಕ್ಷಕರಿಗೆ ಜಾಗೃತಿ ಇರಬೇಕು. ನಿಮ್ಮ ತರಗತಿ ಗುಂಪು ಕೆಲಸಕ್ಕೆ ಸೂಕ್ತವಾಗಿರಬೇಕು. ನಿಮ್ಮ ಬೋಧನೆಯ ಪ್ರಕ್ರಿಯೆಯಲ್ಲಿ ನೀವು ಸಾಕಷ್ಟು ಕಷ್ಟಗಳನ್ನು ಎದುರಿಸಬೇಕಾಗಿ ಬರಬಹುದು. ವಿಶೇಷ ಅಗತ್ಯವುಳ್ಳ ಮಕ್ಕಳು ತಮ್ಮ ತಮ್ಮ ಬೆಳವಣಿಗೆಯ ತೊಂದರೆಗಳನ್ನು ಮಾತ್ರ ಎದುರಿಸುವುದಲ್ಲ, ಅವರು ತಮ್ಮ ಸಹಪಾಠಿಗಳ ಅಥವಾ ಕೆಲವೊಮ್ಮೆ ಸಂಬಂಧಿಕರ ನಕಾರಾತ್ಮಕ ನೋಟಗಳನ್ನು ಎದುರಿಸಬೇಕಾಗುತ್ತದೆ. ನೀವು ತರಗತಿ ಕೊಠಡಿಯಲ್ಲಿ ಅವರ

ಅಸಾಮರ್ಥ್ಯಗಳಗಿಂತ ಸಾಮರ್ಥ್ಯಗಳ ಜೊತೆಗೆ ಕೆಲಸ ಮಾಡಬೇಕು. ಮಕ್ಕಳು ಹೇಗೆ ತಮ್ಮ ಕೌಶಲಗಳೊಂದಿಗೆ ನಿಯತವಾಗಿ ಮುಂದುವರೆಯಬೇಕು ಎಂದು ಯೋಚಿಸಿ. ಎಲ್ಲ ತರಗತಿ ಕೊಠಡಿಯ ಚಟುವಟಿಕೆಗಳು ಅವರ ಅಗತ್ಯಕ್ಕೆ ತಕ್ಕಂತೆ ಇದ್ದಾಗ ಅವರು ಕ್ರಮೇಣ ಬೆಳೆಯುತ್ತಾರೆ ಮತ್ತು ಅವುಗಳಲ್ಲಿ ಪಾಲ್ಗೊಳ್ಳುತ್ತಾರೆ. ಪ್ರಾಯೋಗಿಕ ಸಮಸ್ಯೆಗಳಿಗೆ ವೈಯಕ್ತಿಕ ಕ್ರಮ ತೆಗೆದು ಕೊಳ್ಳುವುದಕ್ಕಿಂತ ಮೊದಲು ನಾವು ಚೆನ್ನಾಗಿ ತಿಳಿದುಕೊಳ್ಳ-ಬೇಕಾಗುತ್ತದೆ. ಮಕ್ಕಳಿಗೆ ಸಂಬಂಧಿಸಿದ ಯಶೋಗಾಥೆಗಳನ್ನು ಅವರಿಗೆ ತೋರಿಸಬೇಕು ಮತ್ತು ಹೇಳಬೇಕು. ಪ್ರತಿಯೊಬ್ಬ ಮಗುವೂ ವಿಭಿನ್ನ, ಅಲ್ಲಿ ಶಿಕ್ಷಕರ ಪಾತ್ರ ಅತ್ಯಂತ ಮಹತ್ವಪೂರ್ಣ.

ಪ್ರತಿಯೊಬ್ಬರಿಗೂ ತಮ್ಮ ಶಿಕ್ಷಣ ಪೂರೈಸುವ ಎಲ್ಲ ಹಕ್ಕುಇದೆ. ಶಿಕ್ಷಣದ ಮುಖ್ಯ ಉದ್ದೇಶ ಒಳ್ಳೆಯ ನಾಗರಿಕರನ್ನು ತಯಾರು ಮಾಡುವುದೇ ಆಗಿದೆ. ಈ ನಿಟ್ಟಿನಲ್ಲಿ ಒಂದು ಶಾಲೆ ತೆಗೆದುಕೊಳ್ಳುವ ಕ್ರಮ ಸಮಾಜಕ್ಕೇ ಒಂದು ನಿದರ್ಶನವನ್ನು ತೋರಿಸಬಹುದು ಮತ್ತು ಪಾಲಕರಲ್ಲಿ ಜಾಗೃತಿಯನ್ನು ಉಂಟುಮಾಡಬಹುದು.



**ಪುಷ್ಪಲತಾ ಪಾಂಡೆ** ಅವರು ಈಗ ಧಮ್‌ತರಿ ಜಿಲ್ಲೆಯ ಅಜೀಂ ಪ್ರೇಮ್‌ಜಿ ಶಾಲೆಯಲ್ಲಿ ವಿಶೇಷ ಶಿಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಅವರಿಗೆ ವಿಶೇಷ ಅಗತ್ಯವುಳ್ಳ ಮಕ್ಕಳ ಜೊತೆಗೆ 12 ವರ್ಷಗಳ ಸೇವಾನುಭವ ಇದೆ. ಐದು ವರ್ಷಗಳ ಕಾಲ ಸರಕಾರಿ ಇಲಾಖೆ ಮತ್ತು ಎನ್‌ಜಿಓಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಅವರನ್ನು pushplata.pandey@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಬಾಲಕೃಷ್ಣ ಹೊಸಂಗಡಿ** । ಪರಿಶೀಲನೆ: **ನಾಗಮಣಿ ಎಸ್ ಎನ್**

# ಅಗತ್ಯವಿರುವುದು ಅವಕಾಶ, ಅನುಕಂಪವಲ್ಲ
## ವೈಕಲ್ಯವುಳ್ಳ ಮಕ್ಕಳ ಬಾಲಮೇಳ
ಆಂಗ್ಲ ಮೂಲ: ಶಂಕರ್ ಬಡಗರವರ ಜೊತೆಯಲ್ಲಿ ಅನ್ವರ್ ಮತ್ತು ವೆಂಕಟೇಶ್

ಎಂದಿನಂತೆ ಅಂದೂ ನಾನು ನನ್ನ ವಾಡಿಕೆಯ ಶಾಲಾ ಭೇಟಿಗಳಲ್ಲಿ ನಿರತನಾಗಿದ್ದೆ. ಆದರೆ, ಅಂದು ನಾನು ಭೇಟಿ ನೀಡಿದ ಶಾಲೆಯು ವಿಶಿಷ್ಟವಾಗಿದ್ದು, ನನ್ನ ಒಳಗಣ್ಣು ತೆರೆಯುವಂತೆ ಮಾಡಿತು. ನಾನಿಲ್ಲಿ ಸುರಪುರದ (ಯಾದಗಿರಿ ಜಿಲ್ಲೆ) ಕುಪಗಲ್ ಗ್ರಾಮದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಬಗ್ಗೆ ಹೇಳುತ್ತಿದ್ದೇನೆ. ನಾನು ಅಂದು 6 ಮತ್ತು 7ನೇ ಇಯತ್ತೆಯ ಮಕ್ಕಳೊಂದಿಗೆ ಮಾತನಾಡುತ್ತಿದ್ದೆ. ಅವರ ನಡುವೆ ಒಂದು ಮಗು ನನ್ನ ಮಾತನ್ನು ಅರ್ಥಮಾಡಿಕೊಳ್ಳ-ಲಾಗದ್ದರಿಂದ ಪ್ರತಿಕ್ರಿಯಿಸದೆ ಸುಮ್ಮನಿತ್ತು. ಆಗ, ಅವಳ ಸ್ನೇಹಿತೆಯರು ಕೈಸನ್ನೆಗಳ ಮೂಲಕ ಅವಳಿಗೆ ನೆರವು ನೀಡಿ ನಾನು ಹೇಳುತ್ತಿರುವುದನ್ನು ಅರ್ಥಮಾಡಿಕೊಳ್ಳುವಂತೆ ಮಾಡಿದರು. ಆಕೆ ಶ್ರವಣಶಕ್ತಿ ಹೀನಳೆಂದೂ, ಆಕೆಯ ಒಡಹುಟ್ಟಿದವರಿಗೂ ಅದೇ ಸ್ಥಿತಿಯೆಂದೂ ತಿಳಿದುಬಂದಿತು. ಆಕೆಯೊಂದಿಗೆ ಸಹಜವಾಗಿ ವ್ಯವಹರಿಸಲು ನನಗೆ ಸಾಧ್ಯವಾಗದಿದ್ದರೂ, ಅವಳ ಗೆಳತಿಯರಿಗೆ ಆಕೆಯೊಂದಿಗೆ ವ್ಯವಹರಿಸಲು ಯಾವುದೇ ತೊಂದರೆಯಾದಂತೆ ಕಾಣಲಿಲ್ಲ. ಬಹುಶಃ ಈ ಮಕ್ಕಳಲ್ಲಿಯೂ ವಿಶೇಷ ಸಾಮರ್ಥ್ಯಗಳಿದ್ದು, ನಾವು ಅವರನ್ನು ಇನ್ನೂ ಚೆನ್ನಾಗಿ ಅರ್ಥಮಾಡಿಕೊಂಡು ಅವರಿಗೆ ವಿಭಿನ್ನ ಅವಕಾಶಗಳನ್ನು ನೀಡಬಲ್ಲೆವಾದರೆ ಅವರೂ ತಮ್ಮ ಅಧ್ಯಯನದಲ್ಲಿ ಯಶಸ್ವಿಯಾದಾರು ಎಂದು ಈ ಘಟನೆಯು ನನ್ನನ್ನು ಚಿಂತನೆಗೆ ಹಚ್ಚಿತು. ಅವರಲ್ಲಿ ಪ್ರಕಟವಾಗಲು ಕಾಯುತ್ತಿರುವ ಸಾಮರ್ಥ್ಯಗಳು ಹೊರಬರಲು ಸಹಾಯಮಾಡುವ ಅವಕಾಶಗಳಷ್ಟೇ ಅವರಿಗೆ ಬೇಕಿರುವುದು, ಯಾವುದೇ ಸಹಾನುಭೂತಿ ಅಲ್ಲ ಎಂಬುದನ್ನು ಇದರಿಂದ ನಾನು ಮನಗಂಡೆ.

ಇನ್ನೂ ಒಳಹೊಕ್ಕು ನೋಡಿದಾಗ, ಪ್ರತಿ ಶಾಲೆಯಲ್ಲೂ ಕಡಿಮೆ ಎಂದರೂ ಅಂತಹ ಮೂರು-ನಾಲ್ಕು ಮಕ್ಕಳಿರುತ್ತಾರೆ ಎಂಬ ಸಂಗತಿ ತಿಳಿದುಬಂತು.ಸುರಪುರ ವಿಭಾಗದಲ್ಲಿಯೇ 573 ವಿಶೇಷ ಅಗತ್ಯ ಬೇಕಾದ ಮಕ್ಕಳು ಪ್ರಾಥಮಿಕ ಶಾಲೆಗಳಲ್ಲಿ ಕಲಿಯುತ್ತಿದ್ದಾರೆ. ನಾವು ಅವರನ್ನು ಉಳಿದ ಮಕ್ಕಳೊಂದಿಗೆ ಸಮಾನವಾಗಿಎಂದೂ ನೋಡದೆ ಅವರ ವೈಕಲ್ಯಕ್ಕೆ ಸಹಾನುಭೂತಿ ತೋರುತ್ತಾ, ಅವರ ದೌರ್ಭಾಗ್ಯಕ್ಕಾಗಿ ಸೃಷ್ಟಿಕರ್ತನನ್ನು ತೆಗಳುತ್ತೇವೆಯೇ ಹೊರತು, ಅವರಲ್ಲಿರುವ ಸುಪ್ತ ಸಾಮರ್ಥ್ಯಗಳನ್ನು ಹೊರತರುವ ಅವಕಾಶಗಳನ್ನು ಕಲ್ಪಿಸಿಕೊಡುವ ವಿಧಾನಗಳನ್ನು ಹುಡುಕುವುದಿಲ್ಲ. ಸಮಯ ದೊರೆತಾಗಲೆಲ್ಲ ನಾವು ಸಾಂವಿಧಾನಿಕ ಮೌಲ್ಯಗಳಾದ ಸಮಾನತೆ, ನಿಷ್ಪಕ್ಷಪಾತ ಹಾಗು ಸ್ವಾತಂತ್ರ್ಯಗಳ ಬಗ್ಗೆ ಮಾತನಾಡುತ್ತೇವೆಯೇ ಹೊರತು ಅವುಗಳು ಈ ಮಕ್ಕಳಿಗೆ ದೊರೆಯುವಂತೆ ಮಾಡುವುದನ್ನು ಬಹಳಷ್ಟು ಬಾರಿ ಕಡೆಗಣಿಸಿದ್ದೇವೆ. ಶಿಕ್ಷಣವು ಎಲ್ಲ ಮಕ್ಕಳ ಮೂಲಭೂತ ಹಕ್ಕು. ಅದುದೊರೆಯುವಂತೆ ನೋಡಿಕೊಳ್ಳುವುದು ಸಮಾಜ, ಸರ್ಕಾರ ಹಾಗು ಶಾಲೆಯ ಜವಾಬ್ದಾರಿ. ಪ್ರತಿ ಶಾಲೆಯೂ, ಎಲ್ಲಮಕ್ಕಳಿಗೂ ಪ್ರವೇಶಾವಕಾಶ ನೀಡಬೇಕಲ್ಲದೆ, ವಿಶೇಷ ಅಗತ್ಯ ಬೇಕಾದ ಮಕ್ಕಳಿಗೂ ಗುಣಮಟ್ಟದ ಶಿಕ್ಷಣ ದೊರೆಯುವಂತೆ ನೋಡಿಕೊಳ್ಳುವುದು ಅವುಗಳ ಪರಮಧ್ಯೇಯವಾಗಬೇಕು. ವಿಶೇಷ ಅಗತ್ಯ ಬೇಕಾದ ಮಕ್ಕಳಿಗೆ ಗುಣಮಟ್ಟದ ಶಿಕ್ಷಣ ನೀಡಿ, ಅವರನ್ನು ಸಮಾಜದ ಮುಖ್ಯವಾಹಿನಿಗೆ ಕರೆತರುವುದು ನಮ್ಮ ಆಶಯವಷ್ಟೇಆಗಿರದೆ, ಸಾಂವಿಧಾನಿಕ ಆಣತಿಯೂ ಆಗಿದೆ. ಈ ಮಕ್ಕಳು ಇತರ ಮಕ್ಕಳಂತೆಯೇ ತಮ್ಮ ಜೀವನದ ಘನತೆಯನ್ನು ಎತ್ತಿ ಹಿಡಿಯಲು ಸಾಧ್ಯವಾಗಬೇಕು ಹಾಗು, ಈ ನಿಟ್ಟಿನಲ್ಲಿ ಅವರಿಗೆ ಸಮಾನ ಅವಕಾಶಗಳನ್ನು ಕಲ್ಪಿಸುವ ಅಗತ್ಯವಿದೆ. ಒಳಗೊಳ್ಳುವ ಶಿಕ್ಷಣ ನೀತಿಯಂತೆ ಶಿಕ್ಷಣ ಇಲಾಖೆಯು ವಿಶೇಷ ಅಗತ್ಯ ಬೇಕಾದ ಮಕ್ಕಳಿಗೂ ಎಲ್ಲಾ ಮಕ್ಕಳ ಜೊತೆಗೆ ಶಿಕ್ಷಣ (ಸಮನ್ವಯ ಶಿಕ್ಷಣ) ನೀಡಲು ವಿಶೇಷ ವಿಭಾಗವನ್ನೇ ತೆರೆದಿದೆ.

### "ಸಮನ್ವಯ ಶಿಕ್ಷಣ"ದ ಉದ್ದೇಶಗಳು

ಸಮನ್ವಯ ಶಿಕ್ಷಣ 2018-19ರ ಕಿರುಹೊತ್ತಗೆ, '2018-19ರ ಸಾಲಿನ ಸಮನ್ವಯ ಶಿಕ್ಷಣ ಕೈಪಿಡಿ'ಯ (Samanvaya Shikshana Kaipidi 2018-19) ಪ್ರಕಾರ:

- ಸಾಮಾನ್ಯ ಶಾಲೆಗಳಲ್ಲಿ ಈಮಕ್ಕಳಿಗೆ ಪ್ರವೇಶಾನುಮತಿಯ ಅವಕಾಶಗಳು ಲಭ್ಯವಾಗುವಂತೆ ನೋಡಿಕೊಳ್ಳುವುದು.
- ವಿಶೇಷ ಅಗತ್ಯದ ಮಕ್ಕಳು ಹಾಗು ಉಳಿದ ಮಕ್ಕಳ ನಡುವೆ ಸಾಮಾಜಿಕ ಸಂಬಂಧ ಬೆಳೆಯುವಂತೆ ನೋಡಿ ಕೊಳ್ಳುವುದು.
- ಉತ್ತಮ ಕಲಿಕಾ ಪ್ರಕ್ರಿಯೆಗಾಗಿ ವಿಶೇಷ ಬೋಧನೆ-ಕಲಿಕೆಯ ಸಾಮಗ್ರಿಗಳು (Special teaching-learning materials - TLMs) ಹಾಗು ಸಂಪನ್ಮೂಲಗಳನ್ನು ಅವಶ್ಯ ಬಳಸಿಕೊಳ್ಳುವುದು.
- ವಿಶೇಷ ಸಾಮರ್ಥ್ಯದ ಮಕ್ಕಳ ಬಗ್ಗೆ ಇರುವ ನಕಾರಾತ್ಮಕ ಮನೋಧರ್ಮವನ್ನು ಸರಿಪಡಿಸಲೇಬೇಕು.

ಕಳೆದ ಒಂದು ದಶಕದಿಂದ ನಾವು ಅನೇಕ ವೇದಿಕೆಗಳಲ್ಲಿ ಸಾರ್ವಜನಿಕ ಶಿಕ್ಷಣ ವಲಯದ ಮಕ್ಕಳು ಹಾಗು ಶಿಕ್ಷಕರೊಂದಿಗೆ ವಿಚಾರ ವಿನಿಮಯ ನಡೆಸುತ್ತಿದ್ದೇವೆ. ಆದರೆ, ಇದುವರೆಗೂ ವಿಶೇಷ ಅಗತ್ಯ ಬೇಕಾದ ಮಕ್ಕಳೂ ಇದರಲ್ಲಿ ಪಾಲ್ಗೊಳ್ಳುವಂತೆ ಮಾಡಲು ಯಾವುದೇ ಹೆಜ್ಜೆ ಇಟ್ಟಿಲ್ಲ, ಅವರಿಗಾಗಿ ಯಾವುದೇ ಪ್ರತ್ಯೇಕ ಕಾರ್ಯಕ್ರಮಗಳನ್ನೂ ಹಮ್ಮಿಕೊಂಡಿಲ್ಲ.

ಅಜೀಂ ಪ್ರೇಮ್‌ಜಿ ಪ್ರತಿಷ್ಠಾನದ ಅಂದಿನ ಘಟಕ ಸಂಚಾಲಕರಾದ ಅಡಿವೆಪ್ಪ ಅವರು ಕೊನೆಗೂ ಈ ದಿಸೆಯಲ್ಲಿ ಮೊದಲ ಹೆಜ್ಜೆ ಇಡುವಂತೆ ಆಯಿತು. ಬಳಿಕ, ಇಲಾಖೆಯ ಅಧಿಕಾರಿಗಳೊಂದಿಗೆ ಒಂದು ಚರ್ಚೆ ಆರಂಭವಾಗಿ, ಅವರು ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ವಿಶೇಷ ಕಾರ್ಯ-ಕ್ರಮವೊಂದನ್ನು ಏರ್ಪಡಿಸುವ ಬಗ್ಗೆ ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದರು. ಅಜೀಂ ಪ್ರೇಮ್‌ಜಿ ಪ್ರತಿಷ್ಠಾನ ಹಾಗು ಶಿಕ್ಷಣ ಇಲಾಖೆ ಜಂಟಿಯಾಗಿ ಒಂದು ತಯಾರಿ ಸಭೆ ನಡೆಸಿ, ಅಲ್ಲಿ ವಿಶೇಷ ಅಗತ್ಯವುಳ್ಳ ಮಕ್ಕಳಿಗಾಗಿಯೇ ಪ್ರತ್ಯೇಕ ಬಾಲಮೇಳ ಆಯೋಜನೆಯ ಪರಿಕಲ್ಪನೆಯ ಬಗ್ಗೆ ಚರ್ಚಿಸಿದೆವು. ಮತ್ತು ಆ ಕಾರ್ಯಕ್ರಮದ ಉದ್ದೇಶಗಳ ಬಗ್ಗೆ ಒಂದು ಕಡತ ಸಿದ್ಧಪಡಿಸಿದೆವು. ಈ ಸಂವಾದದಲ್ಲಿ ಕೆಲವು ಮುಖ್ಯ ವಿಷಯಗಳನ್ನು ಪಟ್ಟಿ ಮಾಡಲಾಯಿತು:

- ಈ ಮಕ್ಕಳ ಸಾಮರ್ಥ್ಯದ ಬಗ್ಗೆ ಪೋಷಕರು ಹಾಗು ಸಮುದಾಯವು ತಪ್ಪುಕಲ್ಪನೆ ಹೊಂದಿರುತ್ತದೆ.
- ಈ ಮಕ್ಕಳನ್ನು ಹಿಂದಿನ ಪಾಪದ ಫಲವೆಂದು ನಂಬಲಾಗುತ್ತದೆ.
- ವೈದ್ಯಕೀಯ ನೆರವಿನ ಬಗ್ಗೆ ಸಾಕಷ್ಟು ಅರಿವಿಲ್ಲ.
- ಶಾಲಾ ವಾತಾವರಣವೂ ಈ ಮಕ್ಕಳನ್ನು ಇತರ ಮಕ್ಕಳಿಂದ ಬೇರ್ಪಡಿಸಿ ನೋಡುತ್ತದೆ.

ಇಂತಹ ತಪ್ಪು ಕಲ್ಪನೆಗಳನ್ನು ತೊಡೆದುಹಾಕುವ, ವಿಶೇಷ ಅಗತ್ಯ ಬೇಕಾದ ಮಕ್ಕಳ ಸಾಮರ್ಥ್ಯವನ್ನು ಹೊರತರುವ ಪ್ರಯತ್ನಗಳು ಈ ಮೇಳದ ಮುಖ್ಯಉದ್ದೇಶವಾಗಿತ್ತು.

**ಮೇಳದ ಉದ್ದೇಶಗಳು**
ಪೋಷಕರು ಮತ್ತು ಸಮುದಾಯದಲ್ಲಿ ಜಾಗೃತಿ ಮೂಡಿಸುವುದು ಮತ್ತು ವಿಶೇಷ ಅಗತ್ಯ ಬೇಕಾದ ಮಕ್ಕಳ ಸಾಮರ್ಥ್ಯದ ಬಗ್ಗೆ ಹಾಗು ಅದನ್ನು ಗುರುತಿಸುವ ಪರಿಸರ ನಿರ್ಮಾಣದ ಬಗ್ಗೆ ತಿಳುವಳಿಕೆ ಮೂಡಿಸುವುದು.

ಮಕ್ಕಳ ಹಕ್ಕುಗಳು ಹಾಗು ಸಾಂವಿಧಾನಿಕ ಮೌಲ್ಯಗಳ ಬಗ್ಗೆ ತಿಳುವಳಿಕೆ ಮೂಡಿಸುವುದು.

ವಿಶೇಷ ಅಗತ್ಯ ಬೇಕಾದ ಮಕ್ಕಳ ಯೋಗಕ್ಷೇಮಕ್ಕಾಗಿ ಇರುವ ವಿವಿಧ ಸರ್ಕಾರಿ ಯೋಜನೆಗಳ ಬಗ್ಗೆ ಪ್ರಚುರ ಪಡಿಸಿ, ಆ ಸವಲತ್ತುಗಳು ಅವರಿಗೆ ತಲುಪುವಂತೆ ನೆರವಾಗುವುದು.

**ಮೇಳಕ್ಕಾಗಿ ತಯಾರಿ**
ನಮಗೂ ಈ ಮೇಳವು ಒಂದು ಸವಾಲಾಗಿತ್ತು. ಶಿಕ್ಷಕರ ಸಹಾಯದಿಂದ ಈ ಮಕ್ಕಳಿಗೆ ಕಲಿಕೆಯನ್ನು ದಾಟಿಸುವಲ್ಲಿ ಸೂಕ್ತ ಬೋಧನ ಕಲೆಗಳನ್ನು ಬಳಸಿಕೊಳ್ಳುವುದು ನಮ್ಮೆದುರಿಗಿದ್ದ ಮೊದಲ ಅಡಚಣೆಯಾಗಿತ್ತು. ಎರಡನೆಯದಾಗಿ, ಈ ಮಕ್ಕಳ ಯೋಗ-ಕ್ಷೇಮಕ್ಕಾಗಿ ಇರುವ ಯೋಜನೆಗಳು ಹಾಗು ಮೀಸಲಾತಿಗಳ ಬಗ್ಗೆ ವಿಚಾರಿಸಿ ತಿಳಿಯಲು ನಾವು ವಿವಿಧ ಇಲಾಖೆಗಳಾದ ಶಿಕ್ಷಣ, ತಾಲೂಕು ಪಂಚಾಯತಿ, ಸಮಾಜ ಕಲ್ಯಾಣ, ಸ್ತ್ರೀ ಹಾಗು ಶಿಶು ಕಲ್ಯಾಣ, ಸಾರಿಗೆ, ಅಂಗವಿಕಲರ ಕಲ್ಯಾಣ, ನಗರಪಾಲಿಕೆ ಹಾಗು ದಿವ್ಯಾಂಗ ಮಕ್ಕಳ ಸಂಘಗಳೊಂದಿಗೆ ಸಂವಾದ ನಡೆಸಿದೆವು. ಈ ಎಲ್ಲಾ ಇಲಾಖೆಗಳನ್ನೂ ಮೇಳದಲ್ಲಿ ತಮ್ಮದೇ ಆದ ಚಟುವಟಿಕೆಗಳೊಂದಿಗೆ ಸಹಭಾಗಿಗಳಾಗಲು ಕೇಳಿಕೊಂಡೆವು.

ವಿಶೇಷ ಅಗತ್ಯ ಬೇಕಾದ ಮಕ್ಕಳಿರುವ 30 ಶಾಲೆಗಳನ್ನು ಗುರುತಿಸುವ, ವಿವಿಧ ಇಲಾಖೆಗಳ ಸಂಪನ್ಮೂಲ ವ್ಯಕ್ತಿಗಳೊಂದಿಗೆ ಕೈಜೋಡಿಸುವ ಹಾಗು ಗುರುತಿಸಲಾದ ಶಾಲೆಗಳ ಶಿಕ್ಷಕರನ್ನು ಒಂದು ತಿಂಗಳ ಕಾಲ ನಮ್ಮ ಕಲಿಕಾ ಪ್ರಕ್ರಿಯೆಯಲ್ಲಿ ಸೇರಿಸಿಕೊಳ್ಳುವ ಒಂದು ಯೋಜನೆಯನ್ನು ಪ್ರತಿಷ್ಠಾನದ ಸದಸ್ಯರಿಗಾಗಿ ಸಿದ್ಧಪಡಿಸಲಾಯಿತು. ಸರಳ ಗಣಿತ ಹಾಗು ಭಾಷೆಗಳ ವ್ಯಾಪ್ತಿಯಲ್ಲಿ ವೈವಿಧ್ಯಮಯ ಚಟುವಟಿಕೆಗಳ ಮೂಲಕ ನಾವು ಈ ಮಕ್ಕಳೊಂದಿಗೆ ಒಡನಾಡುತ್ತಾ, ಅವರುತಮ್ಮ ಅಗತ್ಯಗಳನ್ನು, ತಮ್ಮ ಪ್ರತಿಭೆಯನ್ನು ನಮ್ಮೊಡನೆ ಹಂಚಿಕೊಳ್ಳುವಂತೆ ಹುರಿದುಂಬಿಸಿದೆವು. ಈ ಪ್ರಕ್ರಿಯೆಯು ಮಕ್ಕಳ ಸಾಮರ್ಥ್ಯವನ್ನು ಪೋಷಕರು ಹಾಗು ಶಿಕ್ಷಕರು ಇನ್ನೂ ಉತ್ತಮವಾಗಿ ಅರಿತುಕೊಳ್ಳಲು ಸಾಧ್ಯವಾಗಿಸಿತು. ಇದರಿಂದ ಪೋಷಕರು ಹಾಗು ಶಿಕ್ಷಕರೊಂದಿಗೆ ಕೈಜೋಡಿಸಲು ನಮಗೆ ಸಹಾಯವಾಯಿತು.

**ಮೇಳದ ಮೊದಲ ದಿನ (ಫೆಬ್ರವರಿ 8, 2018)**
ಮಾಜಿ ವಿಧಾನಸಭಾ ಸದಸ್ಯ ಶ್ರೀ ಮದನಗೋಪಾಲ್ ನಾಯ್ಕ ಅವರು ಉದ್ಘಾಟಿಸಿದ ಈ ಮೇಳದಲ್ಲಿ ವಿವಿಧ ಇಲಾಖೆಗಳ ಅಧಿಕಾರಿಗಳು ಉಪಸ್ಥಿತರಿದ್ದರು. ಸರಿ ಸುಮಾರು ನೂರು ವಿಶೇಷ ಅಗತ್ಯ ಬೇಕಾದ ಮಕ್ಕಳು ಸರಳಗಣಿತ, ಸಮಾಜ ವಿಜ್ಞಾನ, ಭಾಷೆ ಹಾಗು ದಿನನಿತ್ಯದ ಜೀವನ-ನಿರ್ವಹಣಾ ಕೌಶಲಗಳಿಗೆ ಸಂಬಂಧಿಸಿದಂತೆ ಐವತ್ತು ವಿವಿಧ ಚಟುವಟಿಕೆಗಳಲ್ಲಿ ಭಾಗವಹಿಸಿದ್ದರು. ತಂತಮ್ಮ ಪ್ರದರ್ಶನ ಮಳಿಗೆಗಳಲ್ಲಿ ವಿಶೇಷ ಅಗತ್ಯ ಬೇಕಾದ ಮಕ್ಕಳಿಗಾಗಿ ಇರುವ ಮೀಸಲಾತಿ ಹಾಗು ಅವರ ಯೋಗಕ್ಷೇಮ ಯೋಜನೆಗಳ ಬಗ್ಗೆ ಅರಿವು ಮೂಡಿಸಲು ವಿವಿಧ ಸರ್ಕಾರಿ ಇಲಾಖೆಗಳು (ಶಿಕ್ಷಣ ಇಲಾಖೆ, ತಾಲೂಕು ಪಂಚಾಯತಿ, ಸಮಾಜಕಲ್ಯಾಣ, ಮಹಿಳಾ ಮತ್ತು ಮಕ್ಕಳ ಕಲ್ಯಾಣ, ಆರೋಗ್ಯ, ಸಾರಿಗೆ, ಅಂಗವಿಕಲರ ಕಲ್ಯಾಣ, ನಗರ ಪಾಲಿಕೆ) ಸೇರಿದಂತೆ ದಿವ್ಯಾಂಗ ಮಕ್ಕಳ ಸಂಘಗಳೂ ಭಾಗವಹಿಸಿದ್ದವು. ಎಲ್ಲೆಡೆ ಹಬ್ಬದ ವಾತಾವರಣ ಮನೆಮಾಡಿತ್ತು. ಉಳಿದ ಮೇಳಗಳಿಗೆ ಹೋಲಿಸಿದರೆ ಇದು ಒಂದು ವಿಭಿನ್ನ ರೀತಿಯ ಅನುಭವವಾಗಿತ್ತು. ಇಂತಹ ವಿಶೇಷ ಕಾರ್ಯಕ್ರಮವನ್ನು ಆಯೋಜಿಸಿದ ಹೆಮ್ಮೆ ಹಾಗು ತೃಪ್ತಿಯನ್ನು ಈ ಕ್ಷೇತ್ರದ ಕಾರ್ಯಕರ್ತರು ಅನುಭವಿಸಿದರು. ಮೇಳಕ್ಕೆ ಭೇಟಿ ಇತ್ತ ಪ್ರೇಕ್ಷಕರೊಂದಿಗೆ ಮಕ್ಕಳು ತಮ್ಮ ಆಯ್ಕೆಯ ವಿಷಯವನ್ನು ತಮ್ಮ ಸಾಮರ್ಥ್ಯಕ್ಕೆ ತಕ್ಕಂತೆ ಚರ್ಚಿಸಿದರು.

ಊಟದ ವಿರಾಮದ ಬಳಿಕ ವಿಶೇಷ ಸಾಮರ್ಥ್ಯಗಳಿರುವ ಸಾಧಕರಿಗೆ ತಮ್ಮ ಚಿಂತನೆಗಳನ್ನು ಹಂಚಿಕೊಳ್ಳಲು ವೇದಿಕೆಯನ್ನು ಕಲ್ಪಿಸಿಕೊಡಲಾಯಿತು. ಶ್ರೀ ಬಸವರಾಜ್ ಉಂಬ್ರಾಣಿ ಮತ್ತು ಡಾ. ಶಿವರಾಜ ಶಾಸ್ತ್ರಿ ಅವರು, ಸಾಧನೆಯ ಪಥದಲ್ಲಿ ತಾವು ಎದುರಿಸಿದ ಸವಾಲುಗಳು, ತಮ್ಮ ಗೆಲುವಿನ ಕಥೆಗಳ ಬಗ್ಗೆ ಮಾತನಾಡಿದರು. ಅಂಧ ಸಾಧಕ ಶ್ರೀ ಬಸವರಾಜ ಉಂಬ್ರಾಣಿ ಅವರು ರಾಷ್ಟ್ರೀಯ ಪ್ರಶಸ್ತಿ ವಿಜೇತರು. ಅವರು ಮಾತನಾಡಿ, “ವಿಕಲತೆಯಿರುವುದು ಭೌತಿಕ-ಜಗತ್ತಿನಲ್ಲೇ ಹೊರತು, ಮಾನಸಿಕ ಜಗತ್ತಿನಲ್ಲಲ್ಲ” ಎಂಬ ಸಂದೇಶವನ್ನು ಸಾರಿದರು. ಕರ್ನಾಟಕ ರಾಜ್ಯದಲ್ಲಿ ಸುರಪುರವು ಈ ವಿಶೇಷ ಸಾಮರ್ಥ್ಯದ ಮಕ್ಕಳಿಗೆ ಅವಕಾಶಗಳನ್ನು ಕಲ್ಪಿಸಿಕೊಡುವಲ್ಲಿ ಮುಂಚೂಣಿಯಲ್ಲಿದೆ ಎಂದರು. ಅವರು ಸಂಕಲನ, ಭಾಗಾಕಾರ ಹಾಗು ಗುಣಾಕಾರದಂತಹ ಗಣಿತ ಪ್ರಕ್ರಿಯೆಗಳನ್ನು ಆರು ಸ್ಥಾನ-ಬೆಲೆಯವರೆಗೂ ಯಾವುದೇ ಬಾಹ್ಯಸಹಾಯವಿಲ್ಲದೆ ಕ್ಷಣಗಳಲ್ಲಿ ಬಿಡಿಸುತ್ತಿದ್ದದ್ದು ಪ್ರೇಕ್ಷಕರನ್ನು ದಂಗುಬಡಿಸಿತು. ವಿಶೇಷ ಅಗತ್ಯಬೇಕಾದ ಮಕ್ಕಳಿಗೆ ವಿಶೇಷ ಸಾಮರ್ಥ್ಯಗಳಿರುತ್ತವೆಂದೂ, ನಾವು ಅವನ್ನು ಗುರುತಿಸಿ ಈ ಪ್ರತಿಭೆಗಳು ಪ್ರಕಟವಾಗಲು ಬೆಂಬಲ ನೀಡಬೇಕು ಎಂದೂ ಅವರು ಅಭಿಪ್ರಾಯಪಟ್ಟರು. ಮತ್ತೊಬ್ಬ ಭಾಷಣಕಾರರಾದ ಕಲಬುರ್ಗಿಯ ಶರಣ ಬಸಪ್ಪ ಕಾಲೇಜಿನ ಕನ್ನಡ ಅಧ್ಯಾಪಕರಾದ ದೃಷ್ಟಿಹೀನ ಡಾ.ಶಿವರಾಜ ಶಾಸ್ತ್ರಿ ಅವರು ಮಾತನಾಡಿ, ಮಾನವ ಜಾತಿಯು ವಿಶೇಷವೆಂದೂ, ನಮಗೆ ಲಭ್ಯವಿರುವುದರ ಪೂರ್ಣ ಪ್ರಯೋಜನ ಪಡೆಯಬೇಕೆಂದು ತಿಳಿಸುತ್ತಾ, “ಒಂದು ಕೈ ಇಲ್ಲದಿದ್ದರೆ, ಮತ್ತೊಂದನ್ನು ಬಳಸು” ಎಂಬ ಸಲಹೆ ಇತ್ತರು. ಪ್ರೇಕ್ಷಕರಲ್ಲಿ ಸುಮಾರು ಒಂದು ಸಾವಿರ ಜನರಿದ್ದು, ಅವರಲ್ಲಿ ಮಕ್ಕಳು, ಪೋಷಕರು ಹಾಗು ಬಳಗದ ಸದಸ್ಯರೂ ಸೇರಿದ್ದರು.



ಮೇಳದಿಂದ ದೊರೆತ ಒಳನೋಟಗಳು



ವಿಶೇಷ ಅಗತ್ಯ ಬೇಕಾದ ಮಕ್ಕಳು ಸಹ ಉಳಿದ ಮಕ್ಕಳಿಗೆ ಹೆಗಲೆಣೆಯಾಗಿ ಕಲಿಯಬಹುದು ಎಂಬ ಅನಿಸಿಕೆಯು ಮೇಳದಲ್ಲಿ ಸಾಬೀತಾಯಿತು. ನಾವು ಶಾಲೆಗಳಿಗೆ ಭೇಟಿ ಇತ್ತಾಗ ವಿಶೇಷ ಅಗತ್ಯವುಳ್ಳ ಮಕ್ಕಳು ಕೂಡ, ಅವರ ಸಹಪಾಠಿಗಳ ಸಹಾಯ–ದೊಂದಿಗೆ, ಕಲಿಕೆಯ ಪ್ರಕ್ರಿಯೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಶಿಕ್ಷಕರು ನೋಡಿ–ಕೊಳ್ಳುತ್ತಿದ್ದುದು ಕಂಡುಬಂದಿತು.

ಶಿಕ್ಷಕರು ಈ ಮಕ್ಕಳಿಗೆ ಕಲಿಸುವ ಭರವಸೆ ಹೊಂದಿದ್ದಲ್ಲಿ ಮಕ್ಕಳು ಜಯಶಾಲಿಗಳಾಗಿ ಹೊರಹೊಮ್ಮುತ್ತಾರೆ.

"ಅವಕಾಶಗಳ ಅಗತ್ಯವಿದೆ, ಅನುಕಂಪವಲ್ಲ" ಎಂಬ ಘೋಷವಾಕ್ಯವು ಎಲ್ಲರಲ್ಲೂ ಒಂದು ನಿರ್ಣಾಯಕ ಚಿಂತನೆಯ ಪ್ರಕ್ರಿಯೆಯನ್ನು ಹುಟ್ಟುಹಾಕಿತು.

ಈ ಮಕ್ಕಳು ಯಶಸ್ಸು ಕಾಣಲು ಬೇಕಿರುವುದು ಅವಕಾಶಗಳ ಜೊತೆಗೆ ತಾಳ್ಮೆ, ಪ್ರೀತಿ ಹಾಗು ಆದರಗಳೇ ಹೊರತು ಸಹಾನುಭೂತಿಯಲ್ಲ.

ವಿಶೇಷ ಅಗತ್ಯ ಬೇಕಾದ ಮಕ್ಕಳು ತಮಗೆ ಹೊರೆಯಲ್ಲ ಹಾಗು ತಮ್ಮ ಮಕ್ಕಳೂ ಉಳಿದವರಂತೆ ಸಹಜ ಜೀವನವನ್ನು ನಡೆಸಬಲ್ಲರು ಎಂಬುದನ್ನು ಪೋಷಕರೂ ಮನಗಂಡರು.

ದಿನದ ಕೊನೆಗೆ ಅಪೂರ್ವವಾದದ್ದನ್ನು ಸಾಧಿಸಿದ ತೃಪ್ತಿಯ ಭಾವನೆ ನಮ್ಮ ಸದಸ್ಯರಲ್ಲಿ ಕಾಣಿಸಿತ್ತು. ಅದೇ, ಮಕ್ಕಳ ಮುಖದ ಮೇಲೆ ಅಂದು ಕಂಡ ಸಂತೋಷ ಹಾಗು ಹೆಮ್ಮೆಯ ನಗುವಿಗೆ ಬೆಲೆಕಟ್ಟಲು ಸಾಧ್ಯವಿಲ್ಲ. ಮೇಳವು ಸಾಂವಿಧಾನಿಕ ಆಣತಿಯನ್ನು ಖಾತ್ರಿಪಡಿಸುವುದರ ಜೊತೆಗೆ ವಿಶೇಷ ಅಗತ್ಯ ಬೇಕಾದ ಮಕ್ಕಳ ಸಾಮರ್ಥ್ಯಗಳನ್ನು ಗುರುತಿಸಿ ಗೌರವಿಸುವ ವೇದಿಕೆಯೊಂದನ್ನು ನಿರ್ಮಿಸಿಕೊಟ್ಟಿತು.

"ಎಲ್ಲರೂ ಒಟ್ಟುಗೂಡಿ ಕಲಿಯುವ ಪ್ರಕ್ರಿಯೆಯಾದ "ಸಮನ್ವಯ ಶಿಕ್ಷಣ"ವು ನಮ್ಮ ಶಿಕ್ಷಣ ವ್ಯವಸ್ಥೆಯಾದ್ಯಂತ ಎಲ್ಲಾ ಶಾಲೆಗಳಲ್ಲೂ ಕಾರ್ಯರೂಪಕ್ಕೆ ಬರಬೇಕಿದೆ. ಶಾಲೆಯ ಒಳಗೆ ಮತ್ತು ಹೊರಗೆ, ಎಲ್ಲೆಡೆಯೂ, ಜೀವನದ ಎಲ್ಲಾ ಕಾರ್ಯಕ್ಷೇತ್ರಗಳಲ್ಲೂ ಎಲ್ಲಾ ಮಕ್ಕಳೂ ಭಾಗವಹಿಸುವುದನ್ನು ಉತ್ತೇಜಿಸಬೇಕಿದೆ. ಶಾಲೆಗಳು ಮಕ್ಕಳನ್ನು ಜೀವನಕ್ಕಾಗಿ ತರಬೇತು ಮಾಡುವ ಕೇಂದ್ರಗಳಾಗ–ಬೇಕಿದ್ದು, ಎಲ್ಲಾ ಮಕ್ಕಳೂ, ಅದರಲ್ಲೂ ಮುಖ್ಯವಾಗಿ ವಿಶೇಷ ಅಗತ್ಯ ಬೇಕಾದ ಮಕ್ಕಳು, ಸೌಲಭ್ಯವಂಚಿತ ವರ್ಗದ ಮಕ್ಕಳು ಹಾಗು ಕಷ್ಟದ ಪರಿಸ್ಥಿತಿಗಳನ್ನು ಎದುರಿಸುತ್ತಿರುವ ಮಕ್ಕಳು ಈ ನಿರ್ಣಾಯಕ ಕ್ಷೇತ್ರವಾದ ಶಿಕ್ಷಣದ ಗರಿಷ್ಠ ಲಾಭ ಪಡೆದುಕೊಳ್ಳುವುದನ್ನು ಖಾತ್ರಿಪಡಿಸಬೇಕಿದೆ. ಪ್ರತಿಭೆಗಳನ್ನು ಪ್ರದರ್ಶಿಸುವ ಹಾಗು ಸಹಪಾಠಿಗಳೊಂದಿಗೆ ಹಂಚಿಕೊಳ್ಳುವ ಅವಕಾಶಗಳು ಮಕ್ಕಳ ನಡುವೆ ಪ್ರೇರಣೆ ಹಾಗು ಪಾಲ್ಗೊಳ್ಳುವಿಕೆಯನ್ನು ಪೋಷಿಸಬಲ್ಲ ಪ್ರಬಲ ಸಾಧನಗಳು". (೨೦೦೫ರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು; 4.3.2 "ಒಳಗೊಳ್ಳುವಿಕೆಯ ನೀತಿ")– (NCF 2005 -4.3.2.Policy of Inclusion).





**ಶಂಕರ್ ಬಡಗ** ಅವರು ಯಾದಗಿರಿಯ ಸುರಪುರದಲ್ಲಿನ ಅಜೀಂ ಪ್ರೇಮ್‌ಜಿ ಪ್ರತಿಷ್ಠಾನದ ಕ್ಷೇತ್ರ ಸಂಪನ್ಮೂಲ ಕೇಂದ್ರದಲ್ಲಿ "ಸಮನ್ವಯ ಶಿಕ್ಷಣ"ದ ಸಂಪನ್ಮೂಲ ತರಬೇತಿ ವ್ಯಕ್ತಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅವರು ಶಿಕ್ಷಣ ಇಲಾಖೆಯಲ್ಲಿ ಕ್ಲಸ್ಟರ್ ಸಂಪನ್ಮೂಲ ವ್ಯಕ್ತಿಯಾಗಿ ಹಾಗು ಕನ್ನಡ ಮತ್ತು ಸಮಾಜ ವಿಜ್ಞಾನಗಳ ಸಹಾಯಕ ಶಿಕ್ಷಕರಾಗಿ, ವಿವಿಧ ಹುದ್ದೆಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಇವರನ್ನು ಸಂಪರ್ಕಿಸಬಹುದಾದ ಮಿಂಚಂಚೆ ವಿಳಾಸ: shankrappabbadaga@gmail.com



**ಅನ್ವರ್** ಅವರು ಯಾದಗಿರಿಯ ಸುರಪುರದಲ್ಲಿ ಕನ್ನಡ ಸಂಪನ್ಮೂಲ ವ್ಯಕ್ತಿಯಾಗಿ 2008ರಿಂದ ಅಜೀಂ ಪ್ರೇಮ್‌ಜಿ ಪ್ರತಿಷ್ಠಾನದೊಂದಿಗೆ ಇದ್ದಾರೆ. ಅವರು "ಕಲಿಕೆ ಖಾತರಿ ಕಾರ್ಯ-ಕ್ರಮ", "ಶಿಶುಪರ ಶಾಲೆ"ಯಂತಹ ವಿಭಿನ್ನ ಉಪಕ್ರಮಗಳ ಭಾಗವಾಗಿದ್ದಾರೆ. ಅವರು ಕಲಬುರ್ಗಿ ಜಿಲ್ಲೆಯ ಸೇಡಂನಲ್ಲಿ ಪ್ರತಿಷ್ಠಾನದ ಕ್ಷೇತ್ರ ಚಟುವಟಿಕೆಗಳ ಉಸ್ತುವಾರಿಯನ್ನು ನಿಭಾಯಿಸಿದ್ದಾರೆ. ಅವರನ್ನು ಸಂಪರ್ಕಿಸ-ಬಹುದಾದ ಮಿಂಚಂಚೆ ವಿಳಾಸ: anwar.m@azimpremjifoundation.org



**ವೆಂಕಟೇಶ್** ಅವರು ಸದ್ಯಕ್ಕೆ ಯಾದಗಿರಿಯ ಸುರಪುರದಲ್ಲಿ ಅಜೀಂ ಪ್ರೇಮ್‌ಜಿ ಪ್ರತಿಷ್ಠಾನದ ಸದಸ್ಯರಾಗಿದ್ದಾರೆ. ಉಕ್ಕು ಕೈಗಾರಿಕಾ ಯೋಜನೆ ನಿರ್ವಹಣೆಯಲ್ಲಿ ಅನುಭವ ಪಡೆದಿರುವ ಇವರು ಕರ್ನಾಟಕದ "ರಾಷ್ಟ್ರೀಯ ತಂತ್ರಜ್ಞಾನ ಸಂಸ್ಥೆಯ" ಮೆಕ್ಯಾನಿಕಲ್ ಎಂಜಿನಿಯರಿಂಗ್ ಪದವೀಧರರಾಗಿದ್ದಾರೆ. ಇವರನ್ನು ಸಂಪರ್ಕಿಸಬಹುದಾದ ಮಿಂಚಂಚೆ ವಿಳಾಸ: venkatesh.k@azimpremjifoundation.org

ಅನುವಾದ: **ಕುಶಾಲ್ ಬಿ ಎಸ್** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ಸ್ವೀಕರಿಸುವಿಕೆಯ ಸುದೀರ್ಘ ಹಾದಿ

ಸೀತಾ ಕೃಷ್ಣಮೂರ್ತಿ

ಈ ಜಗತ್ತಿನ ಬಹುತೇಕ ನಾವೆಲ್ಲರೂ ಆರಾಮದಾಯಕವಾದ, ಹಣ, ಅಂತಸ್ತು ಮತ್ತು ಆಕರ್ಷಕ ವೃತ್ತಿ ಬದುಕು ಇವುಗಳನ್ನೇ ಗುರಿಯಾಗಿರಿಸಿಕೊಂಡು ಬೆಳೆದಿರುತ್ತೇವೆ. ಪೋಷಕರಾಗಿಯಾಗಲೀ, ಒಡಹುಟ್ಟಿದವರಾಗಿಯಾಗಲೀ ಅಥವಾ ಶಿಕ್ಷಕರಾಗಿಯೋ ನಮ್ಮ ಜೀವನದ ಈ ಯೋಜನೆಯಲ್ಲಿ ವಿಶೇಷ ಅಗತ್ಯಗಳ ವ್ಯಕ್ತಿಯ ಬಗ್ಗೆ ಅವಕಾಶವಾಗಲಿ ಅಥವಾ ಒಂದು ಸಣ್ಣ ಚಿಂತನೆಯಾಗಲಿ ಕೂಡ ಇರುವುದಿಲ್ಲ. ಹಾಗಾಗಿ ಯಾವುದೇ ರೀತಿಯ ವೈಕಲ್ಯದ ಮಗು ಹುಟ್ಟಿದಾಗ ತಮ್ಮ ಬದುಕಿನ ಯೋಜನೆಯಲ್ಲಿ ಇಂತಹ ಮಗುವಿನ ಪಾತ್ರವಿರಲಿಲ್ಲವಾದ್ದರಿಂದ ಮಗುವನ್ನು ವಿಶೇಷ ಅಗತ್ಯವುಳ್ಳ ಮಗು ಎಂದು ಒಪ್ಪಿಕೊಳ್ಳಲು ಪೋಷಕರು ತುಂಬ ಹೆಣಗಾಡುತ್ತಾರೆ. ಹುಟ್ಟಿದ ಪ್ರತಿ 59 ಮಕ್ಕಳಿಗೆ ಒಂದು ಮಗು ಆಟಿಸಂ ಸ್ಪೆಕ್ಟ್ರಮ್ ತೊಂದರೆಯಿಂದ (Autism Spectrum Disorder-ಎಎಸ್‌ಡಿ) ಬಳಲುತ್ತಿರುತ್ತದೆ ಎಂದು ಅಂಕಿ–ಅಂಶಗಳಿಂದ ತಿಳಿಯುತ್ತದೆ. ಆದರೆ ಇತರ ವೈಕಲ್ಯಗಳಾದ ಬೌದ್ಧಿಕ ಸವಾಲುಗಳು (Intellectual challenges), ದುರ್ಬಲತೆ (Spasticity), ಕಲಿಕಾ ನ್ಯೂನತೆ (Learning disability) (ಭಾರತದಲ್ಲಿ ಹೆಸರಿಸುವಂತೆ), ಡೌನ್ ಸಿಂಡ್ರೋಮ್ (DS) ಹಾಗೂ ಅತಿ ಚಟುವಟಿಕೆಯ (Hyperactive disorder), ಗಮನದ ಕೊರತೆಯ ತೊಂದರೆ (Hyperactive disorder) ಇವುಗಳು ತುಸು ಕಡಿಮೆ ಮಟ್ಟದಲ್ಲಿವೆ.

ವೈಕಲ್ಯವುಳ್ಳ ಮಕ್ಕಳ ಅಗತ್ಯಗಳಿಗೆ ಸ್ಪಂದಿಸಲು ಪೋಷಕರು ಸಾಕಷ್ಟು ತಯಾರಾಗಿಲ್ಲ. ಅವರು ಸಹೃದಯಿ ಸ್ನೇಹಿತರು, ಸಂಬಂಧಿಕರಿಂದ ಬಹಳಷ್ಟು 'ಸಲಹೆ'ಗಳನ್ನು ಪಡೆಯುತ್ತಾರೆ. ಶಿಕ್ಷಿತ ವರ್ಗದವರು ಗೂಗಲ್‌ನ ಮೊರೆಹೋಗುತ್ತಾರೆ. ಆದರೆ ಅರ್ಥಪೂರ್ಣವಾದ ಮಾಹಿತಿ ಮತ್ತು ಒತ್ತಾಸೆಯ ವ್ಯವಸ್ಥೆ ಅಲ್ಲಿ ಸಿಗುವುದೇ ಇಲ್ಲ. ದೊಡ್ಡ ನಗರಗಳಲ್ಲೂ ಕೂಡ ಸಾಕಷ್ಟು ಪೂರಕ ಮೂಲಸೌಕರ್ಯ ಇಲ್ಲದಿರುವುದರಿಂದ, ಎಲ್ಲ ಬಗೆಯ ವಿಕಲತೆಗಳಿರುವ ಮಕ್ಕಳನ್ನೂ ವಿಶೇಷ ಶಾಲೆಗಳಲ್ಲಿ ಸೇರಿಸಿಕೊಳ್ಳಲಾಗುತ್ತದೆ ಯಾದರೂ ಮಕ್ಕಳಿಗೆ ಅತ್ಯಗತ್ಯವಾದ ನಿರ್ದಿಷ್ಟ ಚಿಕಿತ್ಸೆ ಮತ್ತು ತರಬೇತಿ ನೀಡಲು ಸಾಧ್ಯವಾಗುತ್ತಿಲ್ಲ. ಸಮನ್ವಯ ಶಿಕ್ಷಣ ಪದ್ಧತಿ ಅನುಸರಿಸುವ ಮುಖ್ಯವಾಹಿನಿಯ ಶಾಲೆಗಳಲ್ಲೂ ಶಿಕ್ಷಕರಿಗೆ ಸಂಪೂರ್ಣ ತಿಳುವಳಿಕೆ ಮತ್ತು ಅಗತ್ಯ ತರಬೇತಿ ಇಲ್ಲದೆ ಕಠಿಣ ಸನ್ನಿವೇಶವಿದೆ. ಆದರೂ ವಿಶೇಷ ಶಾಲೆಗಳ ಮತ್ತು ವಿಶೇಷ ಸಾಮರ್ಥ್ಯದ ಮಕ್ಕಳ ಪೋಷಕರ ಬಲುದೊಡ್ಡ ಆತಂಕವೆಂದರೆ ಸಮಾಜದಲ್ಲಿನ ಅರಿವಿನ ಕೊರತೆ.

ವಿಶೇಷ ಅಗತ್ಯ ಬೇಕಾದ ಮಕ್ಕಳೆಡೆಗಿನ ನಮ್ಮ ಗುರಿಗಳನ್ನು ಸಮಾಜವು ತಿರಸ್ಕರಿಸುವ ಮೂಲಕ ಅದಕ್ಕೆ ತಡೆಯೊಡ್ಡಿದೆ ಎಂಬುದನ್ನು ನಾನು ಗಮನಿಸಿದ್ದೇನೆ. ವಿಶೇಷ ಅಗತ್ಯವುಳ್ಳ ಮಕ್ಕಳನ್ನು ಇತರ ನರವೈಶಿಷ್ಟ್ಯ ಹೊಂದಿರುವ ಸಮಷ್ಟಿಯ (Neuro-typical population) ಮಟ್ಟಕ್ಕೆ ಸಾಧ್ಯವಾದಷ್ಟೂ ತರಲು ವರ್ಷಗಳಿಂದಲೂ ನಾವು ಪಠ್ಯಕ್ರಮವನ್ನು ಮತ್ತೆಮತ್ತೆ ಮರು ವಿನ್ಯಾಸ ಮಾಡಬೇಕಾಯಿತು. ವಿಶೇಷ ಅಗತ್ಯ ಬೇಕಾದವರನ್ನು ಕೀಳಾಗಿ ಕಾಣುವುದು, ಭಯಪಡುವುದು, ಅಸಹ್ಯ ತೋರುವುದು ಅಲ್ಲದೆ ಅವರನ್ನು ತಿರಸ್ಕರಿಸುವುದಕ್ಕೆಲ್ಲ ಕಾರಣವೇನಿರ ಬಹುದು? ಆರ್ಥಿಕ ಪರಿಸ್ಥಿತಿ, ವಿಶೇಷ ಕೌಶಲಗಳು ಅಥವಾ ಶೈಕ್ಷಣಿಕ ಪದವಿಗಳು ಇವು ಯಾವುದೂ ಈ ಮಕ್ಕಳು ಸಾಮಾಜಿಕವಾಗಿ ಬೆರೆಯುವ ಮತ್ತು ಸಂವಹನ ಮಾಡುವ ಸಾಮರ್ಥ್ಯದಷ್ಟು ಮುಖ್ಯ ಎನಿಸುವುದಿಲ್ಲ. ದೀಪಿಕಾ ಶಾಲೆಯಲ್ಲಿ ನಾವು ಈ ಸಾಮರ್ಥ್ಯಗಳನ್ನು ಹೆಚ್ಚಿಸಲು ಮತ್ತು ವಿಶೇಷ ಅಗತ್ಯ ಬೇಕಾದ ಮಕ್ಕಳನ್ನು ಸಮಾಜದ ಮುಖ್ಯವಾಹಿನಿಗೆ ತರಲು ಪ್ರಯತ್ನಿಸುತ್ತಿದ್ದೇವೆ ಧರ್ಮ ಮೊದಲು ಮನೆಯಿಂದ ಆರಂಭವಾಗಬೇಕು ಎಂಬ ನಾಣ್ಣುಡಿಯಂತೆ, ಮೊದಲ ಹೆಜ್ಜೆಯಾಗಿ ನಾವು ನಮ್ಮ ಶಾಲೆಗಳಲ್ಲಿ ಶಿಕ್ಷಕರನ್ನು ಸದೃಢಗೊಳಿಸಬೇಕು ಮತ್ತು ಅವರ ವ್ಯಕ್ತಿತ್ವ, ಸ್ವಂತ ಸಾಮರ್ಥ್ಯಗಳನ್ನು ಹೆಚ್ಚಿಸಿಕೊಳ್ಳಬೇಕಿದೆ. ಎಲ್ಲ ವಿಶೇಷ ಶಿಕ್ಷಕರಿಗೂ ಅಧ್ಯಾಪನ ಮತ್ತು ಮೃದುಕೌಶಲಗಳಲ್ಲಿ ವಿಸ್ತೃತವಾದ ತರಬೇತಿ ನೀಡಲಾಗುತ್ತಿದೆ. ಜೊತೆಗೆ ಶಾಲಾ ವಾಹನಗಳನ್ನು ಓಡಿಸುವ ಚಾಲಕರು, ಆಡಳಿತ ಸಿಬ್ಬಂದಿ ಮೊದಲಾದ ಪೂರಕ ಸಿಬ್ಬಂದಿ ವರ್ಗಕ್ಕೂ, ಮಕ್ಕಳನ್ನು ಪ್ರೀತಿಸಿ ಅವರಿರುವಂತೆಯೇ ಸ್ವೀಕರಿಸಲು ಮತ್ತು ಆ ಮೂಲಕ ಶಾಲೆಯು ತನ್ನ ಗುರಿಗಳನ್ನು ಮುಟ್ಟಲು ಸಹಕರಿಸುವಂತೆ ತರಬೇತಿ ನೀಡಲಾಗುತ್ತಿದೆ.

**ನಾವು ನಡೆದು ಬಂದ ಹಾದಿ**

ನಾನು ಮುಖ್ಯವಾಹಿನಿಯ ಶಾಲೆಯೊಂದರಲ್ಲಿ ಕಲಿಸುತ್ತಿದ್ದಾಗ, ಮಮತಾಳಿಗೆ ತರಗತಿಯಲ್ಲಿ ಹೇಳಿಕೊಟ್ಟಿದ್ದನ್ನು ಅರ್ಥ–ಮಾಡಿಕೊಳ್ಳುವ ಅಥವಾ ಕೆಲವು ಕ್ಷಣಗಳಿಗಿಂತ ಹೆಚ್ಚಿನ ಸಮಯ ನೆನಪಿಟ್ಟುಕೊಳ್ಳುವ ಸಾಮರ್ಥ್ಯದ ಕೊರತೆಯಿದ್ದ ಬಗ್ಗೆ ಅರಿತು–ಕೊಳ್ಳಲು ನನಗೆ ಸಾಧ್ಯವೇ ಆಗಲಿಲ್ಲ. ಎಲ್ಲ ಮಕ್ಕಳೂ ಬಹಳ ಆಸಕ್ತಿಯಿಂದ ಚಟುವಟಿಕೆಗಳಲ್ಲಿ ಭಾಗವಹಿಸಿದರೂ, ದಿನೇಶ* ಮಾತ್ರ ಯಾವುದರಲ್ಲೂ ಭಾಗವಹಿಸದೆ, ಯಾರಲ್ಲೂ ಮಾತನಾಡದೆ, ದಿವ್ಯವಾದ ಮುಗುಳ್ನಗು ಬೀರುತ್ತಿದ್ದ. ನನ್ನ ಮನಸ್ಸಿನಲ್ಲಿ ಮೂಡಿದ 'ಹೀಗೇಕೆ' ಎಂಬ ದೃಢವಾದ ಪ್ರಶ್ನೆ ಒಂದು ಹೊಸ ಪ್ರಪಂಚವನ್ನು ಶೋಧಿಸಲು ಕಾರಣವಾಯಿತು. ಮತ್ತು ಅದರಿಂದ ಸಂತೋಷ ಮತ್ತು ಒಂದು ಬಗೆಯ ಸಂತೃಪ್ತಿಯ ಭಾವನೆಯನ್ನು ಹೊಂದಲು ಅನುಕೂಲವಾಯಿತು.

ವಿಶೇಷ ಮಕ್ಕಳೊಡನೆ ನಾವು ಕೆಲಸ ಮಾಡಲು ಆರಂಭಿಸಿದಾಗ ನಮ್ಮ ಮುಂದಿದ್ದ ಒಂದೇ ಸವಾಲೆಂದರೆ ನಿಧಾನ ಗತಿಯ ಕಲಿಕೆ. ಮಕ್ಕಳು ಮೌನವಾಗಿ ಕುಳಿತು, ಗಮನವಿಟ್ಟು ಕೇಳಿ ಸಂತೋಷದಿಂದ ಕಲಿಯುತ್ತಿದ್ದರು. ಅವರಿಗೆ ಕಲಿಸುವುದು ಅತ್ಯಂತ ಸುಲಭವಾದುದಾಗಿತ್ತು. ಅವರು ಅತ್ಯುತ್ತಮ ಸಾಮಾಜಿಕ ಮತ್ತು ಸಂವಹನ ಕೌಶಲಗಳನ್ನು ಹೊಂದಿದ್ದರು. ಅವರಿಗಿದ್ದುದು ಕೇವಲ ಶೈಕ್ಷಣಿಕ ಕಲಿಕೆಯ ಸಮಸ್ಯೆಯಷ್ಟೇ. ಹಾಗಾಗಿ, ಒಂದು ವರ್ಷದಲ್ಲಿ ಒಮ್ಮೆಲೆ 3ರಿಂದ 12 ಮಕ್ಕಳಿಗೆ ತರಗತಿಯ ಗಾತ್ರ ಹೆಚ್ಚಿದಾಗಬಂದ ಸವಾಲುಗಳನ್ನು ಎದುರಿಸಲು ನಾವು ಸ್ಪಷ್ಟವಾಗಿ ತಯಾರಾಗಿರಲಿಲ್ಲ. ಇಲ್ಲಿನ ಮಕ್ಕಳು ಅತಿ ಚಟುವಟಿಕೆಯ ತೊಂದರೆಯಿಂದ (Hyperactive Disorder) ಹಿಡಿದು ಅಸ್ಪರ್ಗರ್ ಸಿಂಡ್ರೋಮ್‌ವರೆಗೆ

(Asperger's Syndrome) ಬೇರೆಬೇರೆ ರೀತಿಯ ಸಮಸ್ಯೆಗಳನ್ನು ಹೊಂದಿದ್ದರು! ಅದೂ ಯಾರೂ ಅಸ್ಪರ್ಗರ್ ಸಿಂಡ್ರೋಮ್ ಬಗ್ಗೆ ಕೇಳಿಯೇ ಇರದಿದ್ದ ಸಮಯದಲ್ಲಿ.ಗೂಗಲ್ ಇರಲಿಲ್ಲ ಮತ್ತು ಆಟಿಸಂ ಜೊತೆಗೆ ಕೆಲಸ ಮಾಡಿದ ಅನುಭವ ಇರಲೇ ಇಲ್ಲ, ಏನು ಮಾಡಬೇಕೆಂದೇ ನಮಗೆ ತೋಚುತ್ತಿರಲಿಲ್ಲ.

ಅತಿ ಚಟುವಟಿಕೆಯ ಅರವಿಂದಓದುವುದು ಮತ್ತು ಬರೆಯುವುದನ್ನು ದ್ವೇಷಿಸುತ್ತಿದ್ದ. ಡೆಸ್ಕ್ ಮೇಲೆ ಕುಳಿತರೆ, ಕಾಲಿನಿಂದ ಡೆಸ್ಕಿನ ಕೆಳಗೆ ಬಡಿಯುತ್ತಿದ್ದ ಮತ್ತು ಡೆಸ್ಕನ ಮೇಲೂ ಕೈಯಲ್ಲಿ ಬಡಿಯುತ್ತಿದ್ದ. ಉಳಿದ ಮಕ್ಕಳಿಗೆ, ತಾವು ಮಾಡುತ್ತಿರುವ ಕೆಲಸವನ್ನು ನಿಲ್ಲಿಸಿ ಇವನಂತೆಯೇ ಅನುಕರಿಸಲು ಇದು ಸೂಚನೆಯಾಗುತ್ತಿತ್ತು ಇವನ ಹಿಂದೆ ಓಡುವುದರಲ್ಲಿಯೇ ನಮ್ಮ ಅಮೂಲ್ಯವಾದ ಸಮಯವನ್ನು ಕಳೆದುಬಿಡುತ್ತಿದ್ದೆವು. ಕೇವಲ ಟಿವಿ ವಾಹಿನಿಗಳ ಹೆಸರಿನ ಉದ್ದನೆಯ ಪಟ್ಟಿಯನ್ನಷ್ಟೇ ಪದಭಂಡಾರವಾಗಿಟ್ಟು ಕೊಂಡಿದ್ದ ಆಟಿಸಂ ಇದ್ದ ಮಗು ವಿಶಾಲ್, ಅದನ್ನು ನಿರಂತರವಾಗಿ ಪುನರುಚ್ಚರಿಸುತ್ತಲೇ ಇರುತ್ತಿದ್ದ. ಆ ಸಮಯದಲ್ಲಿ ನಮ್ಮೊಡನೆ ಏನನ್ನೋ ಹೇಳಲು ಪ್ರಯತ್ನಿಸುತ್ತಿದ್ದಾನೆ ಎಂಬುದು ತಿಳುವಳಿಕೆಯ ಕೊರತೆಯಿಂದಾಗಿ ನಮ್ಮ ಅರಿವಿಗೆ ಬರಲೇ ಇಲ್ಲ. ಕಿವಿಯಲ್ಲಿ ಬೆರಳುಗಳನ್ನು ಇಟ್ಟುಕೊಂಡು ಕುಳಿತಿದ್ದ ಸ್ನೇಹಾಳು ಶಬ್ದದೆಡೆಗಿನ ಅತಿ ಸೂಕ್ಷ್ಮತೆಯ (Hypersensitivity to sound) ತೊಂದರೆಯಿಂದ ಬಳಲುತ್ತಿದ್ದಾಳೆ ಎಂದು ನಮಗೆ ತಿಳಿದಿರಲಿಲ್ಲ. ನಿಸ್ಸಂದೇಹವಾಗಿ ನಮಗೆ ಸಾಕಷ್ಟು ಕಲಿಯುವುದಿತ್ತು. ಹಿರಿಯ ವಿಶೇಷ ಶಿಕ್ಷಕರು, ವೈದ್ಯರು ಮತ್ತು ಎಷ್ಟು ಸಾಧ್ಯವೋ ಅಷ್ಟು ವೈಕಲ್ಯ ಚಿಕಿತ್ಸಾ ಕೇಂದ್ರದ ಹಲವು ವಿಶೇಷ ತಜ್ಞರನ್ನು ಭೇಟಿ ಮಾಡಿದೆವು. ನಮ್ಮ ಜ್ಞಾನವನ್ನು ವಿಸ್ತರಿಸಿಕೊಳ್ಳಲು ಪ್ರಯತ್ನಿಸಿ ನಾವು ಭಾರತದಾದ್ಯಂತ ಕಾರ್ಯಾಗಾರ, ಸಮ್ಮೇಳನಗಳಿಗೆ ಹಾಜರಾದೆವು. ದುರದೃಷ್ಟವೆಂದರೆ ನಾವು, ಕೇವಲ ವಾಡಿಕೆಯ, 'ಏನು' ಮತ್ತು 'ಏಕೆ' ಎಂಬವುಗಳನ್ನಷ್ಟೇ ಕಲಿತೆವು, ಆದರೆ 'ಹೇಗೆ' ಎಂಬುದನ್ನು ಕಲಿಯಲಾಗಿಲ್ಲ. ಅರವಿಂದ, ವಿಶಾಲ್ ಮತ್ತು ಸ್ನೇಹ ಅಷ್ಟೇ ಅಲ್ಲ, ಮುಖ್ಯವಾಹಿನಿಯ ಶಾಲೆಗಳಿಂದ ತಿರಸ್ಕೃತರಾಗಿರುವ ಇನ್ನೂ ಸಾಕಷ್ಟು ಮಕ್ಕಳಿಗೆ ನೆರವಾಗಬೇಕಿತ್ತು. ನಾವು ಮುಖ್ಯವಾಹಿನಿಯ ಶಾಲೆಗಳನ್ನಷ್ಟೇ ದೂರುತ್ತಿಲ್ಲ. ಮಕ್ಕಳಿಗೆ ಸಹಾಯ ಮಾಡುವುದು ಒತ್ತಟ್ಟಿಗಿರಲಿ, ಅವರಿಗೆ ಏನು ಮಾಡಬೇಕೆಂಬುದೇ ತಿಳಿದಿರಲಿಲ್ಲ. ನಮಗೂ ಆಗ ತಿಳಿದಿರಲಿಲ್ಲ ಎಂಬುದನ್ನು ಗಮನಿಸಿದಾಗ ಪರಿಸ್ಥಿತಿ ಅರ್ಥ ಮಾಡಿ–ಕೊಳ್ಳಬಹುದು!.

**ನಾವು ಕಲಿತ ಪಾಠಗಳು**

ವಿವಿಧ ಬಗೆಯ ವಿಕಲತೆಗಳ ಕುರಿತ ಹಲವು ಪುಸ್ತಕಗಳನ್ನು ಕೊಂಡು ಓದಿದೆವು. ಆದರೆ ಇವಾವುದೂ ಭಾರತೀಯ ಮಕ್ಕಳಿಗೆ ಅನ್ವಯಿಸಿದಂತೆ ಕಾಣಲಿಲ್ಲ. ಆಗಲೇ ನಮಗೆ ಗಮನಿಸುವಿಕೆಯ ಮಹತ್ವ ತಿಳಿದದ್ದು.ಮಕ್ಕಳ ಕುರಿತ ಪೂರ್ವಾಗ್ರಹವಿಲ್ಲದ, ಸೂಕ್ಷ್ಮವಾದ ಗಮನಿಸುವಿಕೆಯ ಒಂದು ವಸ್ತುನಿಷ್ಠ ವಿಶ್ಲೇಷಣೆಯು, ವಿಶೇಷ ಅಗತ್ಯ ಬೇಕಾದ, ಅದರಲ್ಲೂ ಮುಖ್ಯವಾಗಿ ಆಟಿಸಂ ಇರುವ ಮಕ್ಕಳ ಜಗತ್ತಿನ ಬಗ್ಗೆ ನಮಗೆ ಒಳನೋಟಗಳನ್ನು ನೀಡಿತು.

ದೈಹಿಕ ಚಟುವಟಿಕೆಗಳು ಮತ್ತು ನಿಯಮಿತ ವ್ಯಾಯಾಮವು ಮಕ್ಕಳ ಚಲನೆಯ ಬೆಳವಣಿಗೆಗೆ (Motor development) ಮಾತ್ರವಲ್ಲದೆ ಅವರ ಕೆಲವು ಗ್ರಹಣೇಂದ್ರಿಯಗಳ ಸಮಸ್ಯೆಗಳನ್ನೂ (Sensory Problems) ಮೀರಲು ಸಹಕಾರಿ ಎಂದು ನಾವು ಅರಿತುಕೊಂಡೆವು. ಈವರೆಗೆ ಸ್ವಸಹಾಯ ಕೌಶಲಗಳು ಮತ್ತು ವೈಯಕ್ತಿಕ ಶುಚಿತ್ವ ಪೋಷಕರ ಜವಾಬ್ದಾರಿಯೆಂದು ನಿರೀಕ್ಷಿಸಿದ್ದರೂ, ಅವನ್ನು ಕಲಿಸುವ, ಮೇಲ್ವಿಚಾರಣೆ ಮಾಡುವ ಅಗತ್ಯವೂ ಇತ್ತು..

ವಿವಿಧ ರಾಜ್ಯದಿಂದ ಬಂದ, ತಮ್ಮ ಮಾತೃ ಭಾಷೆಯಲ್ಲೇ ಕಷ್ಟ ಅನುಭವಿಸುತ್ತಿದ್ದ ಮಕ್ಕಳಿಗೆ ಇಂಗ್ಲಿಷನ್ನು ಮಾತನಾಡಲು ಮತ್ತು ಅರ್ಥೈಸಲು ಕಲಿಸುವುದು ಒಂದು ಬಲುದೊಡ್ಡ ಸವಾಲಾಯಿತು. ನಮಗೆ ಅವರ ಭಾಷೆ ಅಥವಾ ಉಪಭಾಷೆ ತಿಳಿದಿರಲಿಲ್ಲವಾದ್ದರಿಂದ ಸಂಜ್ಞೆಗಳು ಅಥವಾ ಮೂಕಾಭಿನಯದ ಮೂಲಕ ಅವರಿಗೆ ಅರ್ಥ ಮಾಡಿಸಬೇಕಿತ್ತು. ಅಲ್ಲಿದ್ದ ಕೌಶಿಕ್ ಎಂಬಾತ ಮಾತನಾಡು–ವಾಗಲೆಲ್ಲಾ ಭಾರೀ ಪದಗಳ ಪ್ರವಾಹವನ್ನೇ ಹರಿಸುತ್ತಿದ್ದನು. ಕೇವಲ ಬೈಗುಳಗಳನ್ನೇ ಹೊರಹಾಕುತ್ತಿದ್ದ ಎಂದು ಆನಂತರದಲ್ಲಿ ನಮಗೆ ಗೊತ್ತಾಯಿತು, ಅದೃಷ್ಟವಶಾತ್ ಆತನ ಮಾತುಗಳು ನಮಗೆ ಅರ್ಥವಾಗುತ್ತಿರಲಿಲ್ಲ. ಮುಂದೆ ಅರ್ಥೈಸುವುದು, ಪುನರ್ಮನನ, ವಿಶ್ಲೇಷಣೆ, ಅನ್ವಯಿಸುವ ಮತ್ತು ಸಾರ್ವತ್ರಿಕಗೊಳಿಸುವ ಕ್ರಿಯೆಗಳನ್ನು ಮಕ್ಕಳಿಗೆ ಹೇಳಿಕೊಡುವ ಸವಾಲು ಎದುರಾಯಿತು. ಪ್ರತೀ ಕಲಿಕಾ ಪ್ರಕ್ರಿಯೆಯ ಕಾರ್ಯತಂತ್ರಗಳನ್ನು ವಿಶ್ಲೇಷಿಸಿ ಅರ್ಥಮಾಡಿಕೊಂಡು ಜೋಡಿಸಬೇಕಿತ್ತು. ಎಲ್ಲ ಶೈಕ್ಷಣಿಕ ಮತ್ತು ವೃತ್ತಿ ತರಬೇತಿ ಹೆಚ್ಚಿನದಾಗಿ ಗ್ರಹಣ ಶಕ್ತಿಯ ಮೇಲೆಯೇ ನಿಂತಿದೆ. ಮಕ್ಕಳ ಗ್ರಹಣ ಕೌಶಲವನ್ನು ಹೆಚ್ಚಿಸಲು ಚಟುವಟಿಕೆಗಳನ್ನು ವಿನ್ಯಾಸಗೊಳಿಸ ಬೇಕಿತ್ತು ಮತ್ತು ಸಾಕಷ್ಟು ಯೋಜನೆಯ ಅಗತ್ಯವಿತ್ತು. ಸೂಕ್ತ ತರಬೇತಿಯ ಮುಖಾಂತರ ಮಕ್ಕಳ ಅರ್ಥೈಸುವಿಕೆಯ ಸಾಮರ್ಥ್ಯವನ್ನು ಒಂದು ಹಂತದವರೆಗೆ ಹೆಚ್ಚಿಸಬಹುದೆಂದು ಮತ್ತು ಅವರಲ್ಲಿ ಸಾಧನೆಯ ಭಾವನೆಯು ಮೂಡುವಂತೆ ಮಾಡಬಹುದು ಎಂದು ಕಂಡುಕೊಂಡೆವು.



ಆದಾಗ್ಯೂ, ವಿಶೇಷವಾಗಿ ಮಕ್ಕಳು ಹದಿಹರೆಯಕ್ಕೆ ಬಂದು ಅವರ ವರ್ತನೆಗಳಲ್ಲಿ ಮಹತ್ವದ ಬದಲಾವಣೆಗಳು ಕಾಣಿಸುತ್ತಿದ್ದಾಗ ನಾವು ಅವರ ಸಾಮಾಜಿಕ ಮತ್ತು ಸಂವಹನ ಕೌಶಲಗಳೊಡನೆ ಕೆಲಸ ಮಾಡದಿದ್ದರೆ ಮೇಲಿನದೆಲ್ಲ ಸಾಧ್ಯವಾಗುತ್ತಲೇ ಇರಲಿಲ್ಲ. ಆಗ ಕೇವಲ ಗ್ರಹಣಶಕ್ತಿಯೊಂದೇ ಸಾಲುವುದಿಲ್ಲ. ವಿದ್ಯಾರ್ಥಿಗಳು ಋಣಾತ್ಮಕ ವರ್ತನೆಗಳನ್ನು ಬೆಳೆಸಿಕೊಂಡಿದ್ದರೆ ಮತ್ತು ಅವರನ್ನು ಗುಂಪುಗಳಲ್ಲಿ ತರಬೇತುಗೊಳಿಸಲು ಅಸಾಧ್ಯವಾದರೆ, ನಮ್ಮ ವರ್ಷಗಳ ಪ್ರಯತ್ನ ಮತ್ತು ಶ್ರಮ ವ್ಯರ್ಥವಾದಂತೆಯೇ. ಅವರನ್ನು

ಒಪ್ಪಿಕೊಳ್ಳುವಂತಾಗಲು ನಾವು ಮೃದು–ಕೌಶಲಗಳೆಡೆಗೇ ಗಮನ ನೀಡಬೇಕಿತ್ತು.

**ಸಫಲತೆಯೆಡೆಗಿನ ಪಯಣ**

ನಾವು ಸ್ವಲ್ಪ ವಿಶಾಲವಾದ ಸ್ಥಳಕ್ಕೆ ಹೋದ ನಂತರ ನಿಧಾನವಾಗಿ ಅಗತ್ಯ ಚಿಕಿತ್ಸೆಗಳನ್ನು ಆರಂಭಿಸಿದೆವು : ಶಬ್ದೇತರ ಸಂವಹನದ ಮಕ್ಕಳು ಮತ್ತು ಮಾತಿನ ತೊಂದರೆಯುಳ್ಳ ಮಕ್ಕಳಿಗೆ ವಾಕ್ ಚಿಕಿತ್ಸೆ (Speech therapy) ನೀಡಲಾಯಿತು, ತುಂಬ ಸೂಕ್ಷ್ಮ ಮತ್ತು ಕಾಳಜಿಯುಳ್ಳ ಮಕ್ಕಳ ಭೌತಚಿಕಿತ್ಸಕರೊಬ್ಬರು (Paediatric physiotherapist) ಒಂದು ಸಣ್ಣ ಕೇಂದ್ರವನ್ನು ಸ್ಥಾಪಿಸಿ, ಚಲನಾ ಅಗತ್ಯತೆಯಿದ್ದ (Motor requirements) ಮಕ್ಕಳಿಗೆ ಹಾಗೂ ಬೆಳಕು, ಶಬ್ದ, ಸ್ಪರ್ಶ, ವಾಸನೆ ಮತ್ತು ರುಚಿ ಇವುಗಳಿಗೆ ಹೆಚ್ಚು ತೀಕ್ಷ್ಣವಾಗಿ ಪ್ರತಿಕ್ರಿಯಿಸುವವರಿಗೆ ಸಂವೇದನೆಯ ಸಮನ್ವಯ ಚಿಕಿತ್ಸೆ (Sensory integration therapy) ನೀಡಿದರು. ಪೋಷಕರ ಸಹಾಯ ಮತ್ತು ಬೆಂಬಲದೊಂದಿಗೆ ಸುಸಜ್ಜಿತ ವೃತ್ತಿ ಚಿಕಿತ್ಸೆಯ ಘಟಕವೂ ಆರಂಭವಾಯಿತು.

ಈ ಎಲ್ಲವೂ ಅವರ ಭೌತಿಕ ಅಗತ್ಯಗಳನ್ನು ಪೂರೈಸಿದವು. ಈಗ ಮಕ್ಕಳು ಪರಸ್ಪರ ಸ್ವೀಕಾರ ಮತ್ತು ಹಂಚಿಕೆ, ಸಂತೋಷಕರ ಜೀವನ, ಸೂಕ್ತ ಮತ್ತು ಒಪ್ಪಿತವಾದ ಸಾಮಾಜಿಕ ನಡವಳಿಕೆ, ಸಂಸ್ಕೃತಿ, ಸ್ವ–ಅಭಿವ್ಯಕ್ತಿ ಮುಂತಾದವುಗಳನ್ನು ಕಲಿಯಬೇಕಿತ್ತು. ಸಂಗೀತ, ನೃತ್ಯ, ಕಲೆ, ಕರಕುಶಲ ಮತ್ತು ಅಡುಗೆ ಅವರ ಕಲಿಕೆಯ ಭಾಗವಾಯಿತು. ಕಲೆ ಆಧಾರಿತ ಚಿಕಿತ್ಸೆಯನ್ನು ಕೆಲವು ನಿರ್ದಿಷ್ಟ ಅಗತ್ಯಗಳಿಗೆ ಗುಣಪಡಿಸುವ ಪ್ರಕ್ರಿಯೆಯಾಗಿ ಬಳಸಿಕೊಳ್ಳಲಾಯಿತು.

ಮಕ್ಕಳ ಜೊತೆಗೆ ಆಂಧ್ರದ ಬೇಲಂ ಗುಹೆಗಳಿಗೆ ನೀಡಿದ ಕಲಿಕಾ ಪ್ರವಾಸವು ನಮ್ಮ ಕಲಿಕಾ ಪ್ರಕ್ರಿಯೆಯಲ್ಲಿ ಒಂದು ಬಲು ದೊಡ್ಡ ಹೆಜ್ಜೆಯಾಯಿತು. ಈ ಪ್ರವಾಸವು ಬಹು ಕಲಿಕಾ ತಂತ್ರ ಅಳವಡಿಕೆಯ ವಿಶಾಲ ಸಾಧ್ಯತೆಯನ್ನು ತೆರೆಯಿತು, ಮಕ್ಕಳು ರೈಲುಗಳನ್ನು ಹುಡುಕಲು, ಟಿಕೆಟ್ ಕಾಯ್ದಿರಿಸಲು, ಪ್ರಯಾಣ ಮತ್ತು ವಸತಿಗೆ ಅಗತ್ಯವಾದ ಹಣದ ಲೆಕ್ಕಹಾಕಲು ಕಲಿತರು. ಸಾಮಾಜಿಕ ಒಡನಾಟ ಮತ್ತು ಸಂವಹನ ಸಹಜವಾಗಿ ನಡೆಯಿತು. ಸ್ವಸಹಾಯ ಕೌಶಲ ಮತ್ತು ವೈಯಕ್ತಿಕ ಆರೈಕೆ ಸುಧಾರಿಸಿತು. ಅವರ ಚರಿತ್ರೆ, ಭೂಗೋಳ ಮತ್ತು ಗಣಿತದ ಜ್ಞಾನವೂ ಹೆಚ್ಚಿತು. ಪ್ರತಿವರ್ಷ ವಿದ್ಯಾರ್ಥಿಗಳು ಪ್ರವಾಸಕ್ಕೆ ಹೋಗುವುದನ್ನು ಆರಂಭಿಸಲಾಯಿತು. ಮೊದಲಿಗೆ ಸಿದ್ಧತೆಗಾಗಿ ಸಣ್ಣ ವಿಹಾರ, ಬಳಿಕ ಎರಡು ವಾರ ಅಥವಾ ಅದಕ್ಕೂ ಹೆಚ್ಚಿನ ಸುದೀರ್ಘ ಪ್ರವಾಸಗಳಿಗೆ ಹೋಗಲು ಆರಂಭಿಸಿದೆವು.

ಹಾಗೆಂದು ಇದು ಅತಿ ಸುಲಭವೇನೂ ಆಗಿರಲಿಲ್ಲ. ಬಹಳಷ್ಟು ಮಕ್ಕಳು ಹಾಸಿಗೆಯಲ್ಲಿ ಮೂತ್ರ ವಿಸರ್ಜನೆ ಮಾಡುತ್ತಿದ್ದರು, ಹೇಗೆ ಸ್ನಾನ ಮಾಡಬೇಕೆಂದು ತಿಳಿದಿರಲಿಲ್ಲ ಅಥವಾ ಶೌಚಾಲಯ ಬಳಕೆಯ ಸಾಮಾನ್ಯ ಸೌಜನ್ಯವನ್ನೂ ತಿಳಿದಿರಲಿಲ್ಲ. ಕೆಲವು ಮಕ್ಕಳು ತಮ್ಮ ಆಹಾರದ ಬಗ್ಗೆ ಬಹಳ ಸೂಕ್ಷ್ಮ ಆಯ್ಕೆ ಉಳ್ಳವರಾಗಿದ್ದರು, ಕೆಲವರು ರಾತ್ರಿಯಿಡೀ ಎಚ್ಚರವಿರುತ್ತಿದ್ದರು. ಹೀಗೆ ಸಮಸ್ಯೆಗಳು ಬಹಳವಿತ್ತು. ಒಂದು ಸುದೀರ್ಘ ಪ್ರವಾಸದಲ್ಲಿ ರಾತ್ರಿ, ನಾವು 2 ಸಾವಿರ ಕಿ.ಮೀ. ದೂರದಲ್ಲಿದ್ದಾಗ, ಹದಿನೈದು ವರ್ಷದ ರಾಜೀವ, ತಾನು ಅಮ್ಮನ ಬಳಿ ಹೋಗಬೇಕೆಂದು ಎದೆ ಬಿರಿಯುವಂತೆ ಅಳತೊಡಗಿದ್ದ! ಅಷ್ಟೇ ಅಲ್ಲದೇ ಕೆಲವು ಮಕ್ಕಳು ಅನಿರೀಕ್ಷಿತವಾಗಿ ಅದ್ಭುತ ಕೌಶಲಗಳನ್ನು ತೋರುತ್ತಿದ್ದರು. ಅಸ್ಪರ್ಜರ್ ಸಿಂಡ್ರೋಮ್ (Asperger's Syndrome) ಇದ್ದ ಒಂದು ಮಗುವು ರೈಲು ಅತಿವೇಗದಲ್ಲಿ ಸಂಚರಿಸುತ್ತಿದ್ದಾಗಲೂ ಹಾದುಹೋದ ಎಲ್ಲಾ ರೈಲು ನಿಲ್ದಾಣ ಮತ್ತು ನದಿಗಳ ಹೆಸರುಗಳನ್ನು ಓದುತ್ತಿತ್ತು! ಕೆಲವು ಹುಡುಗ ಹುಡುಗಿಯರು ಉತ್ಕೃಷ್ಟ ನಾಯಕತ್ವದ ಗುಣಗಳನ್ನು ಪ್ರದರ್ಶಿಸಿದರು.ಆ ಮೂಲಕ ಶಿಕ್ಷಕರ ಹೊರೆಯನ್ನು ಸಾಕಷ್ಟು ತಗ್ಗಿಸಿದರು. ಇವೆಲ್ಲಾ ಚಿಕಿತ್ಸೆ ಮತ್ತು ಪ್ರವಾಸಗಳ ಆಶ್ಚರ್ಯಕರ ಮತ್ತು ಸಂತಸದಾಯಕ ಫಲಿತವೆಂದರೆ ಮಕ್ಕಳಲ್ಲಿ ಇವು ಬೆಳೆಸಿದ ಮೌಲ್ಯಗಳು ಮತ್ತು ಸಂಯಮ.

ಇಷ್ಟರಲ್ಲಿ ನಮಗೆ ಪಠ್ಯಾಧಾರಿತ ಶಿಕ್ಷಣಕ್ಕೆ ಗಮನ ನೀಡಲು ಧೈರ್ಯ ಮೂಡಿತು. ದೆಹಲಿಯ ರಾಷ್ಟ್ರೀಯ ಮುಕ್ತ ಶಾಲಾ ಶಿಕ್ಷಣ ಸಂಸ್ಥೆಯ (ಎನ್ಐಒಎಸ್) ಮುಕ್ತ ಮೂಲ ಶಿಕ್ಷಣದ ಮೂಲಕ ಮಕ್ಕಳನ್ನು ನಾವು 3 ಮತ್ತು 5ನೇ ತರಗತಿಯ ಪರೀಕ್ಷೆಗಳನ್ನು ಬರೆಯಲು ತರಬೇತುಗೊಳಿಸಿದೆವು. ಸ್ಥಳೀಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯ ಮತ್ತು ಎನ್ಐಒಎಸ್ ಮೂಲಕ ಪ್ರೌಢ ಪರೀಕ್ಷೆಗಳನ್ನೂ ಬರೆಯುವಂತೆ ತರಬೇತಿ ನೀಡಿದೆವು. ಇವೆಲ್ಲಾ ಪರೀಕ್ಷಾ ಫಲಿತಾಂಶಗಳ ಯಶಸ್ಸಿನಿಂದ ಧೈರ್ಯ ಬಂದು ಪ್ರೌಢ ಪರೀಕ್ಷೆಗಳಿಗೆ ಕಲಿಕೆ ಮತ್ತು ಶೈಕ್ಷಣಿಕ ತರಬೇತಿಯಲ್ಲಿ ಮುಂದುವರೆಯಲಾರದವರಿಗೆ ಕೌಶಲಾಭಿವೃದ್ಧಿ ತರಬೇತಿ ನಿಡುವ ಸಾಹಸ ಮಾಡಿದೆವು. ಇಂದು ಮಕ್ಕಳ ಒಂದು ಸಾಮಾನ್ಯ ದಿನವು ಪ್ರಾರ್ಥನೆ ಮತ್ತು ಸ್ತೋತ್ರ ಪಠನ, ಮಿದುಳಿನ ಕಸರತ್ತು, ಜಿಮ್, ತರಗತಿಯಲ್ಲಿ ಮಧ್ಯೆಮಧ್ಯೆ ಆಟಗಳನ್ನಾಡುತ್ತಾ ಕಲಿಕೆ, ದೈಹಿಕ ವ್ಯಾಯಾಮ, ಕಲೆ ಮತ್ತು ಸಂಗೀತಗಳೊಂದಿಗೆ ಆರಂಭವಾಗುತ್ತದೆ. ಅವರಲ್ಲಿ ಕೆಲವರಿಗೆ ಮಾತಿನ ಚಿಕಿತ್ಸೆ (Speech therapy), ಇನ್ನು ಕೆಲವರಿಗೆ ಭೌತಚಿಕಿತ್ಸೆ (Physiotherapy) ನೀಡಲಾಗುತ್ತದೆ. ಆಟಿಸಂ ಸ್ಪೆಕ್ಟ್ರಮ್ ಇರುವ ಮಕ್ಕಳಿಗೆ ಸಂವೇದನಾ ಸಮನ್ವಯ (Sensory integration) ಚಿಕಿತ್ಸೆಯನ್ನೂ ನೀಡಲಾಗುತ್ತದೆ. ಕೆಲವು ದಿನ ಸಂಗೀತ–ನೃತ್ಯ ಮತ್ತು ಕಲೆಯನ್ನು ಆಧರಿಸಿದ ಚಿಕಿತ್ಸೆ ಇರುತ್ತದೆ. ಪ್ರತಿವಾರವೂ ಆಟ ಹಾಗೂ ಸುತ್ತಮುತ್ತ ವೀಕ್ಷಣೆ, ಸಾರ್ವಜನಿಕರ ಜೊತೆ ಒಡನಾಟಕ್ಕಾಗಿ ವಿಹಾರವನ್ನೂ ಆಯೋಜಿಸಲಾಗುತ್ತದೆ.

12ರಿಂದ 18ರ ವಯಸ್ಸಿನ ಒಳಗಿರುವ ಹಿರಿಯ ವಿದ್ಯಾರ್ಥಿಗಳಿಗೆ ಅವರ ಕಲಿಕಾ ಸಾಮರ್ಥ್ಯಕ್ಕನುಗುಣವಾಗಿ ಶೈಕ್ಷಣಿಕ ತರಬೇತಿಗಳನ್ನು ನೀಡಲಾಗುತ್ತದೆ. ಯಾರಿಗೆ ತೀವ್ರತರವಾದ ಕಲಿಕಾ ಸವಾಲು ಇದೆಯೋ ಅವರಿಗೆ ಸೂಕ್ತವಾದ ಮತ್ತು ಅರ್ಥಪೂರ್ಣ ವೃತ್ತಿ ತರಬೇತಿಯನ್ನು ಆರಂಭಿಸಲಾಗುತ್ತದೆ. ಸಾಕಷ್ಟು ಉತ್ತಮ ದೃಶ್ಯ ಗ್ರಹಿಕೆಯಿರುವ ಮಕ್ಕಳಿಗೆ ಮಲ್ಟಿಮೀಡಿಯಾ ಮತ್ತು ಅನಿಮೇಶನ್ ತರಬೇತಿ ನೀಡಲಾಗುತ್ತದೆ, ಅಲ್ಲದೆ ಪಾಕಶಾಸ್ತ್ರ, ಸೌಂದರ್ಯ ಮತ್ತು ಕೇಶಶೃಂಗಾರ, ಗೃಹನಿರ್ವಹಣೆ, ಬಟ್ಟೆ ಶುಚಿಗೊಳಿಸುವುದು, ಕಾಗದದ ವಸ್ತುಗಳನ್ನು ತಯಾರಿಸುವುದು ಇನ್ನು ಮುಂತಾದ ವಿಷಯಗಳ ತರಬೇತಿ ನೀಡಲಾಗುತ್ತದೆ.

ಪ್ರತಿವರ್ಷವೂ ನಾವು ಮಕ್ಕಳ ಸಾಮರ್ಥ್ಯಕ್ಕೆ ಅನುಗುಣವಾಗಿರುವ ಒಂದು ವಿಷಯಾಧಾರಿತ ಪ್ರದರ್ಶನವನ್ನು ಆಯೋಜಿಸುತ್ತೇವೆ. ಭಾರತದ ಪಾಕ ಕಲೆಗಳಿಗೆ ಸಂಬಂಧಿಸಿದ ಟೇಸ್ಟ್ ಆಫ್ ಇಂಡಿಯಾ ಎಂಬ ಒಂದು ಕಾರ್ಯಕ್ರಮ ಭಾರೀ ಯಶಸ್ಸು ಪಡೆಯಿತು. ಶಿಕ್ಷಕರು ಮತ್ತು ಮಕ್ಕಳು ಜೊತೆಯಾಗಿ ಭಾರತದ ಬೇರೆಬೇರೆ ಪ್ರದೇಶಗಳನ್ನು ಪ್ರತಿನಿಧಿಸುವ ತಂಡಗಳನ್ನು ಮಾಡಿಕೊಂಡು ಬಾಯಲ್ಲಿ ನೀರೂರಿಸುವ ತಿನಿಸುಗಳನ್ನು ತಯಾರಿಸಿದರು. ಮಾಲಿನ್ಯದ ಅಪಾಯಗಳು ಮತ್ತು ತ್ಯಾಜ್ಯ ನಿರ್ವಹಣೆಯ ಪ್ರಾಮುಖ್ಯತೆ ಸಾರುವ ಸ್ವಚ್ಛ ಭಾರತದ ಬಗೆಗಿನ ಒಂದು ಕಾರ್ಯಕ್ರಮವನ್ನು ನಡೆಸಲಾಯಿತು. ಜೊತೆಗೆ ಸ್ವಚ್ಛ ಭಾರತದ ಬಗೆಗಿನ ಹಾಡು ಮತ್ತು ನೃತ್ಯಗಳನ್ನು ಸುಂದರವಾಗಿ ಪ್ರದರ್ಶಿಸಲಾಯಿತು. ನಾವು ಕೇವಲ

ಮಕ್ಕಳಿಗಷ್ಟೇ ಅಲ್ಲದೆ ಶಿಕ್ಷಕರ ಪ್ರತಿಭೆಗಳ ಉತ್ತೇಜನಕ್ಕಾಗಿ 'ಡ್ಯಾನ್ಸಸ್ ಆಫ್ ಇಂಡಿಯಾ' ಮತ್ತು 'ರಿದಮ್ಸ್ ಆಫ್ ಇಂಡಿಯಾ' ಎಂಬ ಕಾರ್ಯಕ್ರಮಗಳನ್ನೂ ಆಯೋಜಿಸುತ್ತೇವೆ ಅಂತಹ ಸಂದರ್ಭಗಳಲ್ಲಿ ಆ ಮಕ್ಕಳ ಪೋಷಕರ ಮುಖದ ಮೇಲೂ ಅಪರೂಪದ ಹೆಮ್ಮೆ ಮತ್ತು ಸಂತೋಷದ ಎಳೆಯನ್ನು ನಾವು ನೋಡುತ್ತೇವೆ. ತಾವು ಯಾವುದರಿಂದ ಸಂತೋಷ ಪಡೆಯುತ್ತೇವೋ, ತಮಗೆ ಯಾವುದರಲ್ಲಿ ಸಾಮರ್ಥ್ಯವಿದೆಯೋ ಅದನ್ನು ಮಾಡಿದ ಮಕ್ಕಳ ಮುಖದಲ್ಲಿ ಏಕರೂಪದಲ್ಲಿ ಮೂಡುವ ಒಂದು ಬಗೆಯ ಆನಂದವನ್ನು ನೋಡಿದಾಗ ಹೃದಯ ತುಂಬಿ ಬರುತ್ತದೆ.

**ಸುಗಮಕಾರರು (The facilitators)**

ವರ್ತಮಾನದಲ್ಲೇ ಜೀವಿಸುವ ಮಕ್ಕಳೊಂದಿಗೆ ಕಾಲ-ಕಳೆಯುವುದು ಬಹಳ ಆನಂದದಾಯಕವಾದುದು. ವಿಶೇಷ ಮಕ್ಕಳ ಅಗತ್ಯಗಳನ್ನು ಅರಿತುಕೊಳ್ಳಲು ಕ್ರಮಿಸುವ ದಾರಿಯೇನೂ ಸುಗಮವಾಗಿರಲಿಲ್ಲ. ಯಾವುದೇ ವೈಕಲ್ಯ ಇದ್ದರೂ ಪ್ರತಿಯೊಂದು ಮಗುವೂ ಅನನ್ಯವಾದ ಕಲಿಕಾ ಅಗತ್ಯ ಮತ್ತು ಕಲಿಕೆಯ ರೀತಿಗಳನ್ನು ಹೊಂದಿರುತ್ತದೆ. ಅವರೊಡನೆ ಅಧಿಕಾರಯುತವಾಗಿ ಮತ್ತು ದೃಢವಾಗಿ ವರ್ತಿಸುವುದು ಸರಿಯಾಗಿ ಕೆಲಸ ಮಾಡಿದರೂ ಬಹಳ ಶಿಕ್ಷಕರಿಗೆ ಅದನ್ನು ರೂಢಿಸಿಕೊಳ್ಳುವುದು ಸುಲಭವಲ್ಲ.

ಅತಿ ಚುರುಕಿನ ಚಟುವಟಿಕೆಯುಳ್ಳ ಮಕ್ಕಳೊಡನೆ (Hyperactive children) ಕೆಲಸ ಮಾಡುವಾಗ ನಾವು ಸದಾ ಜಾಗರೂಕರಾಗಿರ-ಬೇಕು. ಬೌದ್ಧಿಕವಾಗಿ ಸವಾಲನ್ನೆದುರಿಸುತ್ತಿರುವ ಮಕ್ಕಳೊಡನೆ ಕೆಲಸ ಮಾಡುವಾಗ ನಾವು ಅವರ ಮಟ್ಟದ ಆಧಾರದಲ್ಲೇ ಕಲಿಕೆಯನ್ನು ಪರಿಗಣಿಸಬೇಕು. ಸಾಧಿಸಬಹುದಾದ ಗುರಿಯನ್ನು ನಿಧಾನ-ಗತಿಯಲ್ಲಿ ಮುಟ್ಟಿದರೂ, ಅದು ಮಕ್ಕಳಲ್ಲಿ ಅದ್ಭುತವನ್ನು ಮೂಡಿಸುತ್ತದೆ. ಬೇರೆಲ್ಲ ವಿಷಯಗಳಲ್ಲಿ ಸಾಮಾನ್ಯರಾಗಿ ಮತ್ತು ಬುದ್ಧಿವಂತರಾಗಿದ್ದರೂ, ಡಿಸ್ಲೆಕ್ಸಿಯಾವನ್ನು ಯಾರೂ ಒಂದು ನರ ದೌರ್ಬಲ್ಯ (Neurological Condition) ಎಂದು ಅರ್ಥ ಮಾಡಿಕೊಳ್ಳದಿರುವುದರಿಂದಲೇ ಈ ಮಕ್ಕಳು ಹೆಚ್ಚು ಕಷ್ಟ ಅನುಭವಿಸುತ್ತಾರೆ. ಶಾಲೆಯಲ್ಲಿ ಸಾಕಷ್ಟು ಅರಿವು ನೀಡುವ ಕಾರ್ಯಕ್ರಮಗಳು ನಡೆದರೂ, ಇಂದಿಗೂ ಕೂಡ ಮಕ್ಕಳು ಶಾಲೆ ಮತ್ತು ಪಾಲಕರಿಂದ ಪೀಡನೆ ಮತ್ತು ದೌರ್ಜನ್ಯ-ಕ್ಕೊಳಗಾಗುತ್ತಾರೆ. ಸಾಮಾನ್ಯವಾಗಿ ಕೇಳಿ ಬರುವ ಮಾತೆಂದರೆ, 'ಎಲ್ಲ ಉತ್ತರಗಳು ಗೊತ್ತಿದ್ದರೂ ಯಾಕೆ ಅವನಿಗೆ/ಆಗೆ ಪರೀಕ್ಷೆಗಳಲ್ಲಿ ಚೆನ್ನಾಗಿ ಬರೆಯಲು ಮತ್ತು ಓದಲು ಆಗುವುದಿಲ್ಲ?'

'ಎಎಸ್‌ಡಿ ಇರುವ ಮಕ್ಕಳೊಡನೆ ಕೆಲಸ ಮಾಡಬೇಕೆಂದರೆ ನೀವು ಅವರನ್ನು ಮೊದಲು ನಿಮ್ಮ ಹೃದಯದೊಳಗೆ ಪ್ರತಿಷ್ಠಾಪಿಸಬೇಕು' ಈ ಒಂದು ಅತ್ಯಗತ್ಯವಾದ ಪಾಠವನ್ನು ಆಟಿಸಂ ಮಕ್ಕಳೊಡನೆ ಕೆಲಸ ಆರಂಭಿಸುವ ಮುನ್ನ ನಮಗೆ ಹೇಳುತ್ತಾರೆ. ಅವರನ್ನು ಅರ್ಥಮಾಡಿಕೊಂಡು ತರಬೇತಿ ನೀಡಲು ಅಪಾರ ಪ್ರೀತಿ, ಸಂಯಮ ಮತ್ತು ಅನುಕಂಪಗಳು ಬೇಕು. ವಿಶೇಷ ಶಿಕ್ಷಕರು ಇಲ್ಲಿ ಮುಖ್ಯ ಪಾತ್ರವಹಿಸುತ್ತಾರೆ. ಅವರ ವ್ಯಕ್ತಿತ್ವ, ದೃಷ್ಟಿಕೋನ, ಶಬ್ದಸಂಪತ್ತು ಮತ್ತು ಜ್ಞಾನ ಎಲ್ಲವೂ ಬಲು ಮುಖ್ಯ. ಇದನ್ನು ಕೇವಲ ಒಂದು ವೃತ್ತಿಯೆಂದಷ್ಟೇ ಅಲ್ಲದೆ ಸಮಾಜದ ಅತಿದೊಡ್ಡ ಅಗತ್ಯವೆಂದು



ಶಿಕ್ಷಕರ ಅಭಿವೃದ್ಧಿ ಕಾರ್ಯಕ್ರಮಗಳು

ಪರಿಗಣಿಸಬೇಕು. ಶಿಕ್ಷಕರಾದ ನಮಗೆ ಈ ಮಕ್ಕಳು ನಮ್ಮ ಮನಸ್ಥಿತಿಗಳನ್ನು ಬೇಗನೆ ಗುರುತಿಸಬಲ್ಲರು ಎಂಬುದು ನೆನಪಿರಲಿ. ಶಿಕ್ಷಕರಿಗೆ ನಿರ್ದಿಷ್ಟ ವೈಕಲ್ಯದ ಬಗ್ಗೆ ತರಬೇತಿ ನೀಡಬೇಕಾದದ್ದು ಕಡ್ಡಾಯವಾದರೂ ಅದು ಅವರ ತರಬೇತಿ ಕಾರ್ಯಕ್ರಮದ ಒಂದು ಸಣ್ಣ ಭಾಗವಷ್ಟೇ. ಯಾರು ಬೇಕಾದರೂ ತರಬೇತಿ ಪಡೆದು ತೇರ್ಗಡೆ ಹೊಂದಿ ಪದವಿಯನ್ನು ಪಡೆಯಬಹುದಾದರೂ ಇದು ಅವರನ್ನು ಉತ್ತಮ ಶಿಕ್ಷಕರನ್ನಾಗಿ ಮಾಡುವುದಿಲ್ಲ. ಒಂದು ಸಮತೋಲಿತ ವ್ಯಕ್ತಿತ್ವ, ಭಾವನಾತ್ಮಕ ದೃಢತೆ, ಸಮಸ್ಯೆಗಳನ್ನು ಪರಿಹರಿಸುವ ಕೌಶಲ, ಸೃಜನಶೀಲ ಚಿಂತನಾ ಕೌಶಲಗಳು, ಪರಿಣಾಮಕಾರಿ ಸಂವಹನ ಕೌಶಲಗಳು, ಸಹಾನುಭೂತಿ ಮತ್ತು ಉತ್ತಮವಾದ ಪರಸ್ಪರ ಬಾಂಧವ್ಯ ಇವು ಅಗತ್ಯ ಬೇಕು. ಈ ಕೌಶಲಗಳನ್ನು ಬೆಳೆಸಿಕೊಳ್ಳಲು ಉತ್ತೇಜಕ ಮತ್ತು ಬೆಂಬಲ ನೀಡುವ ಪರಿಸರ, ಜೊತೆಗೆ ಶಿಕ್ಷಕರಿಗೆ ಅವರೊಳಗಿನ ಉತ್ಕೃಷ್ಟವಾದುದನ್ನು ಹೊರತರಲು ಅವಕಾಶಗಳು ಇರಲೇಬೇಕು. ಶಾಲೆಯ ಮುಖ್ಯಸ್ಥರಿಗೆ ಮತ್ತು ಆಡಳಿತ ಮಂಡಳಿಗೆ ಪ್ರತಿ ಮಕ್ಕಳ ಅಗತ್ಯಗಳ ಅರಿವಿರಲು ಸಾಧ್ಯವಿಲ್ಲ. ಆದರೆ ಅದು ಶಿಕ್ಷಕರಿಗೆ ತಿಳಿದಿರಲು ಸಾಧ್ಯ. ಹಾಗಾಗಿಯೇ ಮಗು ಕೇಂದ್ರಿತ ಪಠ್ಯವನ್ನು (Child-specific curriculum) ರಚಿಸುವ ಜವಾಬ್ದಾರಿ ಶಿಕ್ಷಕರಿಗೆ ನೀಡಬೇಕೆಂದು ನಾವು ಭಾವಿಸುತ್ತೇವೆ. ಶಿಕ್ಷಕರಿಗೆ ವಿಸ್ತೃತವಾದ ಒಂದು ಚೌಕಟ್ಟು ನೀಡಲಾಗುತ್ತದೆ. ಆದರೆ ನಿತ್ಯದ ತರಬೇತಿಗಳ ವಿವರಗಳನ್ನು ಅವರೇ ನಿರ್ಧರಿಸಬೇಕು.

ಎಲ್ಲಕ್ಕಿಂತಲೂ ಮಿಗಿಲಾಗಿ ಮಕ್ಕಳ ತೀವ್ರ ಸಂವೇದನೆಗಳ ಬಗ್ಗೆಯೂ ಶಿಕ್ಷಕರಿಗೆ ತಿಳಿದಿರಬೇಕು. ಜೋರಾದ ಮತ್ತು ಕೀರಲು ಧ್ವನಿ, ಕೆಲವೊಮ್ಮೆ ತುಂಬಾ ಮಿನುಗುವ ಮತ್ತು ಕಣ್ಣು ಕೋರೈಸುವ ಬಟ್ಟೆಗಳು ಕೂಡ ಮಕ್ಕಳಲ್ಲಿ ತುಂಬಾ ಗಲಾಟೆಯ ವರ್ತನೆಗೆ ಕಾರಣವಾಗಬಹುದು. ಎಲ್ಲ ಸುಗಮಕಾರರು ಹಾಗೂ ಚಿಕಿತ್ಸಕರಿಗೂ ತರಬೇತಿ ಕಾರ್ಯಕ್ರಮಗಳು ನಿಯಮಿತವಾಗಿ ನಡೆಯುತ್ತವೆ. ತಂಡವಾಗಿ ಕೆಲಸಮಾಡುವ ಕೌಶಲಗಳು, ಹೊಸ ಕಲಿಕಾ ತಂತ್ರಗಳು ಹಾಗೂ ವಿಶೇಷ ಶಿಕ್ಷಣಕ್ಕೆ ಅಗತ್ಯವಾದ ತಾಂತ್ರಿಕ ಸಾಧನಗಳಲ್ಲಿನ ಹೊಸ ಬೆಳವಣಿಗೆಗಳು ಇನ್ನೂ ಮುಂತಾದ ವಿಷಯಗಳ ಬಗ್ಗೆ ಮಾಸಿಕ ಕಾರ್ಯಕ್ರಮಗಳಿರುತ್ತವೆ. ಒತ್ತಡ ನಿವಾರಣೆಯ ಕಾರ್ಯ–ಕ್ರಮಗಳನ್ನೂ ಆಯೋಜಿಸಲಾಗುತ್ತದೆ. ವೈಕಲ್ಯತೆಯಿರುವ ಮಕ್ಕಳಿಗೆ ಕಲಿಸುವುದಕ್ಕೆ ಒಂದು ವಿಶೇಷ ರೀತಿಯದೇ ಅಗತ್ಯವಿದೆಯಾದರೂ ಅದೊಂದು ಹೆಚ್ಚು ಪುರಸ್ಕಾರಕ್ಕೆ ಪಾತ್ರವಾದ ಮತ್ತು ನೆಮ್ಮದಿ ಕೊಡುವ ವೃತ್ತಿ. ಅಧ್ಯಾತ್ಮ ಬೆಳವಣಿಗೆಗಿನ ನಿಯಮಿತ ತರಬೇತಿಯೂ ತುಂಬಾ ಅಮೂಲ್ಯವೇ. ಶಿಕ್ಷಕರಿಗೆ ಒತ್ತಡ ಕಡಿಮೆ ಮಾಡಲು ನಾವು ಪ್ರವಾಸಗಳನ್ನೂ, ವಿಹಾರಗಳನ್ನೂ ಆಯೋಜಿಸುತ್ತೇವೆ, ಸಂಗೀತ ನೃತ್ಯಗಳ ತರಬೇತಿ ನೀಡುತ್ತೇವೆ, ನಿಯಮಿತವಾಗಿ ಕ್ರೀಡೆಗೂ ಸಮಯ ನೀಡುತ್ತೇವೆ ಇವು ಕೇವಲ–ನಿರಾಳವಾಗಲಷ್ಟೇ ಅಲ್ಲ, ಅವರ ಆತ್ಮಾಭಿಮಾನ ಮತ್ತು ಆರೋಗ್ಯವನ್ನು ಹೆಚ್ಚಿಸಲೂ ಉಪಯುಕ್ತ. ಆಡಳಿತ ಮಂಡಳಿ ಅವರನ್ನು ಕೇವಲ ನೌಕರರನ್ನಾಗಿ ಅಷ್ಟೇ ನೋಡುವುದಿಲ್ಲ, ಬದಲಿಗೆ ಅವರನ್ನು ನಿಯಮಿತವಾಗಿ ಬೆಂಬಲ ಮತ್ತು ಮಾರ್ಗದರ್ಶನ ಬೇಕಾಗಿರುವ, ಆದರೆ ಮೇಲ್ವಿಚಾರಣೆಯ ಅಗತ್ಯವಿಲ್ಲದ ಸಂಪನ್ಮೂಲ ವ್ಯಕ್ತಿಗಳಾಗಿ ಪರಿಗಣಿಸಿದರೆ, ಬದ್ಧತೆಯಿಂದ ತೊಡಗಿಸಿಕೊಂಡು ವಿಶೇಷ ಸಾಮರ್ಥ್ಯದ ಮಕ್ಕಳನ್ನು ಅವರು ನಿರ್ವಹಿಸುತ್ತಾರೆ.

**ಪೋಷಕರು**

ನೀರಿನ ಬಾವಿಗಳನ್ನು ನಾವು ಜತನದಿಂದ ನೋಡಿಕೊಳ್ಳದಿದ್ದರೆ ಅವು ಒಣಗಿ ಹೋಗುತ್ತವೆ. ವಿಶೇಷ ಮಕ್ಕಳ ಪೋಷಕರಿಗೆ ಕಾಳಜಿ, ಸಹಸ್ಪಂದನೆ ಮತ್ತು ನಿರಂತರ ಬೆಂಬಲಗಳ ಅಗತ್ಯ ಹೆಚ್ಚು ಇರುತ್ತದೆ. ನಾವು ಅವರೊಡನೆ ಮಾತನಾಡಿದಾಗ ಅವರ ಪ್ರತಿದಿನದ ಬದುಕಿನ ಬವಣೆ ಎಷ್ಟಿದೆ ಎಂದು ಗೊತ್ತಾಗುತ್ತದೆ. ಎಷ್ಟೋ ಪೋಷಕರಿಗೆ ಹೊರಗಿನವರ ಬೆಂಬಲವೇ ಇಲ್ಲ. ಕೆಲವೊಮ್ಮೆ ಪೋಷಕರಿಗೆ ತಮ್ಮ ಹತ್ತಿರದ ಸಂಬಂಧಿಗಳಿಂದಲೇ ಅಥವಾ ತಮ್ಮ ಸಹವರ್ತಿಯಿಂದಲೇ ಬೆಂಬಲ ದೊರೆಯುವುದಿಲ್ಲ. ಚಿಕಿತ್ಸೆ ಮತ್ತು ಆರೋಗ್ಯದ ಖರ್ಚುಗಳು ಹೆಚ್ಚಿದ್ದು ಆಗಲೇ ಆರ್ಥಿಕಸಂಕಷ್ಟದಿಂದ ಬಳಲುತ್ತಿರುವ ಪೋಷಕರಿಗೆ, ಅಗತ್ಯ ಎಂದು ಅರಿವಿದ್ದರೂ ಹೆಚ್ಚಿನ ಚಿಕಿತ್ಸೆಗಳಿಗೆ ಹಣ ನೀಡಲು ಆಗುವುದಿಲ್ಲ. ಆಡಳಿತ ಮಂಡಳಿ ಮತ್ತು ಶಿಕ್ಷಕರು ಇಬ್ಬರೂ ಅವರನ್ನು ಸಂವೇದನೆ ಮತ್ತು ಪ್ರೀತಿಯಿಂದಲೇ ಕಾಣಬೇಕು. ಹಾಗಾಗಿ ವೈದ್ಯರು, ಆಪ್ತ ಸಲಹೆಗಾರರು ಮತ್ತು ಚಿಕಿತ್ಸಕರ ಜೊತೆಗೆ ಪೋಷಕರಿಗಾಗಿಯೇ ಆಗಾಗ ಕಾರ್ಯಕ್ರಮಗಳನ್ನು ಆಯೋಜಿಸುತ್ತೇವೆ.

ಕೇವಲ ಪೋಷಕರ ಬೆಂಬಲ ಇದ್ದರೆ ಮಾತ್ರ ನಾವು ಮಕ್ಕಳಿಗೆ ಸಹಾಯಮಾಡಬಲ್ಲೆವು. ನಿಯಮಿತವಾಗಿ ಪೋಷಕರೊಡನೆ ಮಕ್ಕಳ ಬೆಳವಣಿಗೆಯ ಬಗ್ಗೆ ಸಂವಾದಗಳು ನಡೆಯುತ್ತವೆ. ಅವರೇ ನಮಗೆ ಮೊದಲ ಹಂತದ ಆಧಾರ ಮತ್ತು ಅವರ ಸಹಕಾರ ಅತ್ಯಮೂಲ್ಯ. ಪ್ರತೀ ಶೈಕ್ಷಣಿಕ ವರ್ಷದ ಆರಂಭದಲ್ಲಿ ಒಂದು ದಿನ ಪೋಷಕರು, ಶಿಕ್ಷಕರು, ಶಾಲೆಯ ಸಿಬ್ಬಂದಿಗಳ ಜೊತೆಗೆ ಪ್ರವಾಸವನ್ನು ಆಯೋಜಿಸುವ ಮೂಲಕ 'ಬಾಂಧವ್ಯದ ದಿನ'ವನ್ನು ಆಚರಿಸುತ್ತೇವೆ. ಕೆಲವೊಮ್ಮೆ ಅವರ ಒಡಹುಟ್ಟಿದವರು ಮತ್ತು ಇತರ ಕುಟುಂಬ ಸದಸ್ಯರು ನಮ್ಮೊಡನೆ ಬರುತ್ತಾರೆ. ಈ ರೀತಿಯ ಅನೌಪಚಾರಿಕ ಪರಿಸರವೇ ಪೋಷಕರು ಮತ್ತು ಶಿಕ್ಷಕರ ನಡುವಿನ ಬಾಂಧವ್ಯವನ್ನು ಬೇರೆಲ್ಲ ರೀತಿಗಳಿಗಿಂತಲೂ ಹೆಚ್ಚಾಗಿ ಬೆಸೆಯುತ್ತದೆ.

ನಮ್ಮ ಮಕ್ಕಳನ್ನು ಒಪ್ಪಿಕೊಳ್ಳಲು ಮತ್ತು ಒಳಗೊಳ್ಳುವಂತೆ ಮಾಡಲು ಒಂದು ಬಲು ದೂರದ ದಾರಿಯಲ್ಲಿ ಸಾಗಿ ಬಂದಿದ್ದೇವೆ. ನಮ್ಮ ಸುತ್ತಲಿನ ಸಮಾಜವು ಒಳಗೊಳ್ಳುವಿಕೆಯನ್ನು ಒಪ್ಪಿಕೊಳ್ಳುವಂತೆ ಮಾಡಿ ಯಾವುದೇ ರೀತಿಯ ಭೇದವೆಣಿಸುವುದು, ತಿರಸ್ಕರಿಸುವುದು ಇಲ್ಲದ ಕೇವಲ ಪ್ರೀತಿ ಮತ್ತು ವಿಶ್ವಾಸ ಇರುವ ಸಮಾಜವನ್ನು ಕಟ್ಟುತ್ತೇವೆಂದು ನಾವು ಪ್ರಮಾಣ ಮಾಡೋಣ.



**ಸೀತಾ ಕೃಷ್ಣಮೂರ್ತಿ** ಅವರು ವಿಶೇಷ ಅಗತ್ಯದ ಮಕ್ಕಳ ದೀಪಿಕಾ ಶಾಲೆ, ದೀಪಿಕಾ ವೃತ್ತಿ ಸಂಸ್ಥೆ ಮತ್ತು ಸಮಾಶ್ರಯ ಕೌಶಲ ತರಬೇತಿ ಕೇಂದ್ರ ಇವುಗಳ ಸ್ಥಾಪಕ ಪ್ರಾಂಶುಪಾಲರು. ಕಲಾ ವಿಭಾಗದಲ್ಲಿ ಸ್ನಾತಕೋತ್ತರ ಪದವೀಧರೆಯಾದ ಇವರು ನಿರ್ದಿಷ್ಟ ಕಲಿಕಾ ನ್ಯೂನತೆಯಲ್ಲಿ ಡಿಪ್ಲೊಮಾ, ಆಪ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಡಿಪ್ಲೊಮಾ ಮತ್ತು ಇಂಗ್ಲೀಷ್ ಭಾಷಾ ಶಿಕ್ಷಣದಲ್ಲಿ ಪಿಜಿ ಡಿಪ್ಲೊಮಾ ಪಡೆದಿದ್ದಾರೆ. ಸೀತಾರವರು 36 ವರ್ಷಗಳ ಶಿಕ್ಷಕ ಅನುಭವವನ್ನು ಹೊಂದಿದ್ದು, 27 ವರ್ಷಗಳನ್ನು ವಿಶೇಷ ಮಕ್ಕಳ, ಅದರಲ್ಲೂ ಡಿಸ್ಲೆಕ್ಸಿಯಾ, ಬೌದ್ಧಿಕ ಅಸಾಮರ್ಥ್ಯ ಮತ್ತು ಆಟಿಸಂ ಬಗ್ಗೆಯೇ ಕೆಲಸ ಮಾಡಿದ್ದಾರೆ. ಇವರು ಬೆಂಗಳೂರಿನ ಬಸವನಗುಡಿಯಲ್ಲಿರುವ ಬೆಳವಣಿಗೆ ನ್ಯೂನತೆಗಳ ಮಾಹಿತಿ ಮತ್ತು ಸಂಪನ್ಮೂಲ ಕೇಂದ್ರದಲ್ಲಿ ಶಿಕ್ಷಕ ತರಬೇತಿ ಕಾರ್ಯಕ್ರಮಗಳ ನಿರ್ದೇಶಕರಾಗಿದ್ದಾರೆ. ಸೀತಾ ಕೃಷ್ಣಮೂರ್ತಿ ಅವರನ್ನು ಇಮೇಲ್ sita.krishnamurthy@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ಜನಾರ್ಧನ್** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ವಿಕಲತೆಯುಳ್ಳ ಮಕ್ಕಳ ಶಿಕ್ಷಣ

## ಸೂಕ್ತ ಬೆಂಬಲದೊಂದಿಗೆ ಸಮನ್ವಯಗೊಳ್ಳುವ ಹಕ್ಕು

ಡಾ. ಸುದೇಶ್ ಮುಖೋಪಾಧ್ಯಾಯ

**ಪ್ರಸ್ತಾವನೆ**

ಉತ್ತರದಾಯಿತ್ವವೆಂಬುದು ಇಂದು ಬಹು ಪ್ರಚಲಿತದಲ್ಲಿರುವ ಪದವಾಗಿದೆ. ಇದನ್ನು ಮೇಲಿನವರ ಸಂಬಂಧದಲ್ಲೂ ಹಾಗೂ ಅಧೀನದಲ್ಲಿರುವವರ ಸಂಬಂಧದಲ್ಲೂ ಬಳಸಬಹುದು. ನಮ್ಮಲ್ಲಿ ಪ್ರತಿಯೊಬ್ಬರೂ ಈ ಘಟನೆಗಳ ಅವಿಚ್ಛಿನ್ನ ಸರಣಿಯಲ್ಲಿ ನಾವು ಯಾವುದೇ ಹುದ್ದೆ ಅಥವಾ ಸ್ಥಾನದಲಿರಲಿ, ಹಿಂದೆಂದಿಗಿಂತಲೂ ಈಗ ಈ ನಿಟ್ಟಿನಲ್ಲಿ ಆಲೋಚಿಸಬೇಕಾಗಿದೆ ಮತ್ತು ಪ್ರತಿಕ್ರಿಯಿಸಬೇಕಾಗಿದೆ. ನಾವು ಏನು ಹೇಳುತ್ತಿದ್ದೇವೋ ಅಥವಾ ವಾಗ್ದಾನ ನೀಡುತ್ತಿದ್ದೇವೂ ಅದನ್ನು ನಿಜವಾಗಿ ಹೇಳುತ್ತಿದ್ದೇವೆಯೇ ಮತ್ತು ಅದರಂತೆ ನಡೆದು ಕೊಳ್ಳುತ್ತಿದ್ದೇವೆಯೇ? ನನಗೆ ಈ ನಿಲುವನ್ನು ತಾಳಲು ಏನಾದರೂ ಕಾರಣವಿದೆಯೇ? ಎಂದು ಆಲೋಚಿಸಬೇಕಾಗಿದೆ. ಭಾರತದ ಶಿಕ್ಷಣ ವ್ಯವಸ್ಥೆಯ ಅತ್ಯಂತ ಪ್ರಬಲ ಸಂಸ್ಥೆಯಾದ ಕೇಂದ್ರ ಶಿಕ್ಷಣ ಸಲಹಾ ಮಂಡಳಿಯು The Central Advisory Board of Education - CABE) 2019ರ ಸೆಪ್ಟೆಂಬರ್ 21ರಂದು ನಡೆಸಿದ ಸಭೆಯಲ್ಲಿ, ಗೌರವಾನ್ವಿತ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವರು ತಮ್ಮ ಉದ್ಘಾಟನಾ ಭಾಷಣದಲ್ಲಿ ಈ ಮಾತುಗಳನ್ನು ಹೇಳಿದರು:

"ರಾಷ್ಟ್ರೀಯಕರಡು ಶಿಕ್ಷಣ ನೀತಿ 2019 (Draft National Education Policy 2019) ಅನ್ನು ಪ್ರವೇಶಾವಕಾಶ, ನ್ಯಾಯಪರತೆ, ಉತ್ತಮ ಗುಣಮಟ್ಟ, ಉತ್ತರದಾಯಿತ್ವ ಮತ್ತು ಕೈಗೆಟುಕುವಿಕೆಯ ಸ್ತಂಭಗಳ ಆಧಾರದ ಮೇಲೆ ರೂಪಿಸಲಾಗಿದೆ. ಇದು ಇತರ ವಿಷಯಗಳ ಜೊತೆಗೆ ಗುಣಮಟ್ಟ ಮತ್ತು ನ್ಯಾಯಬದ್ಧತೆಯ ಆಧಾರದ ಮೇಲೆ ಒಂದು ನಿಷ್ಪಕ್ಷಪಾತ, ನ್ಯಾಯಯುತ ಮತ್ತು ಮಾನವೀಯತೆಯುಳ್ಳ ಸಮಾಜವನ್ನು ನಿರ್ಮಿಸಲು ಶಿಕ್ಷಣ ವ್ಯವಸ್ಥೆಯನ್ನು ರೂಪಿಸುವ ಗುರಿಯನ್ನು ಹೊಂದಿದೆ. ಇಡೀ ದೇಶದಲ್ಲಿ ಎಲ್ಲಾ ವಿದ್ಯಾರ್ಥಿಗಳು ಗುಣಮಟ್ಟದ ಶಿಕ್ಷಣಪಡೆಯಲು ಸಮಾನ ಪ್ರವೇಶಾವಕಾಶವನ್ನು ಹೊಂದುವಂತೆ ಮಾಡುವುದಕ್ಕಾಗಿ ರಾಷ್ಟ್ರೀಯ ಕರಡು ಶಿಕ್ಷಣ ನೀತಿ 2019ರಲ್ಲಿ ಹಲವಾರು ಸುಧಾರಣಾ ಕ್ರಮಗಳನ್ನು ಪ್ರಸ್ತಾಪಿಸಲಾಗಿದೆ."[1]

ಈ ದೇಶದ ಮುಂದಿನ ಹಾಗೂ ಈಗಿರುವ ಪೀಳಿಗೆಯ ವೈಕಲ್ಯವುಳ್ಳ ಮಕ್ಕಳೂ (CwDs) ಸೇರಿದಂತೆ ಲಕ್ಷಾಂತರ ಮಕ್ಕಳಿಗೆ ಈ ರಾಷ್ಟ್ರೀಯ ಕರಡು ಶಿಕ್ಷಣ ನೀತಿ 2019 ಏನನ್ನು ಒದಗಿಸುತ್ತದೆಂದು ನಾವು ನೋಡೋಣ. ಈ ನೀತಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ, ಇತರೆ ಹಿಂದುಳಿದ ವರ್ಗಗಳು, ಅಲ್ಪಸಂಖ್ಯಾತರು ಮುಂತಾದ ಅವಕಾಶ ವಂಚಿತ ಗುಂಪುಗಳನ್ನು ಕಡಿಮೆ ಪ್ರಾತಿನಿಧ್ಯ ಹೊಂದಿರುವ ಗುಂಪುಗಳು (Under-Represented Groups) ಎಂದು ಕರೆಯಲಾಗಿದೆ. ಇಲ್ಲಿನ ಗಮನಾರ್ಹ ಅಂಶವೆಂದರೆ ಎಲ್ಲಾ ಜನವರ್ಗಕ್ಕೂ ಅನ್ವಯಿಸುವಂತೆ ಲಿಂಗವನ್ನೂ ಒಂದು ವಿದ್ಯಮಾನವೆಂದು ಗುರುತಿಸಲಾಗಿದೆ. ಆದರೆ ನನ್ನ ಏಕೈಕ ಆತಂಕವೆಂದರೆ ಕಡಿಮೆ ಪ್ರಾತಿನಿಧ್ಯ / ಅನಾನುಕೂಲತೆಯನ್ನು ವ್ಯಾಖ್ಯಾನಿಸುವ ಎಲ್ಲಾ ಸಾಮಾಜಿಕ, ಆರ್ಥಿಕ, ಭೌಗೋಳಿಕ ಮತ್ತು ಇತರ ಮಾನವ ರಚಿತ ಗಣನಾಂಶಗಳಲ್ಲಿ ಕಂಡುಬರುವ ಒಂದು ಅನಾನುಕೂಲವಾದ ವಿಕಲತೆಯನ್ನೂ ಇಲ್ಲಿ ಏಕೆ ಪರಿಗಣಿಸಿಲ್ಲ? ಸರ್ಕಾರವು ಭರವಸೆ ನೀಡಿದಂತೆ ಕೊನೆಯ ಮತ್ತು ಹೆಚ್ಚು ಸಮಗ್ರವಾದ ರಾಷ್ಟ್ರೀಯ ಶಿಕ್ಷಣ ನೀತಿಯು ಈಗ ದೊರಕಿದೆ. ಇದನ್ನು ಸಂಸತ್ತು ಇನ್ನೂ ಅನುಮೋದಿಸಬೇಕಾಗಿದೆ. ಆದರೆ ಅದರ ಸೆಕ್ಷನ್ 6ರಲ್ಲಿ ಈಗಲೂ 'ವಿಕಲತೆ'ಯನ್ನು ಎಲ್ಲ ವರ್ಗಗಳಲ್ಲೂ ಕಂಡುಬರುವ ಒಂದು ಸವಾಲೆಂದು ಹೇಳಿಲ್ಲ.

ನಾವು ಮುಂಬರುವ ಪೀಳಿಗೆಗಳಿಗೆ ನಿಜಕ್ಕೂ ಉತ್ತರದಾಯಿ-ಗಳಾಗಲು ನಮ್ಮ ಮುಂದಿರುವ ಸವಾಲುಗಳನ್ನು ಎದುರಿಸಲು ಮತ್ತು ಅವಕಾಶಗಳನ್ನು ಬಳಸಿಕೊಳ್ಳಲುಸಿದ್ಧರಿದ್ದೇವೆಯೇ? ಸ್ವೀಡನ್ ದೇಶದ 16 ವರ್ಷದ ವಿದ್ಯಾರ್ಥಿನಿ ಗ್ರೆಟಾ ಥನ್‌ಬರ್ಗ್ ಹವಾಮಾನ ಬದಲಾವಣೆಯ ಬಗ್ಗೆ ಒಂದು ಚಳುವಳಿಯನ್ನು ಇತ್ತೀಚೆಗೆ ಪ್ರಾರಂಭಿಸಿದ್ದಾಳೆ ಮತ್ತು ನಮ್ಮಲ್ಲಿ ಪ್ರತಿಯೊಬ್ಬರಿಗೂ ನಾವು ಆಗಬೇಕಾಗಿರುವಷ್ಟು ಕೆಲಸ ಮಾಡುತ್ತಿದ್ದೇವೆಯೇ? ಎಂಬ ಪ್ರಶ್ನೆಯನ್ನು ಕೇಳಿದ್ದಾಳೆ. ಅವಳು ಪ್ರಪಂಚದಾದ್ಯಂತದ ಅನೇಕ ವಿದ್ಯಾರ್ಥಿಗಳು ಮತ್ತು ನಾಗರಿಕರನ್ನು ತಲುಪಿದ್ದಾಳೆ. ಕುತೂಹಲಕಾರಿ ವಿಷಯವೆಂದರೆ, ಮಾಧ್ಯಮಗಳ ಪ್ರಕಾರ ಅವಳು ಆಟಿಸಂ ವ್ಯಾಪ್ತಿಯಲ್ಲಿ ಬರುತ್ತಾಳೆ.

ಇತರರಿಗಿಂತ ಭಿನ್ನವಾಗಿರುವುದು ಒಂದು ವರದಾನವಾಗಬಹುದು

> ಥನ್‌ಬರ್ಗ್‌ನ ಹೆತ್ತವರು, ತಮ್ಮ ಮಗಳು ಮೊದಲು ಮನ ನೋಯಿಯುವಷ್ಟು ಅಂತರ್ಮುಖಿಯಾಗಿದ್ದು ಯಾವಾಗಲೂ ಇತರ ಮಕ್ಕಳಿಂದ ಸ್ವಲ್ಪ ಬೇರೆಯೇ ಇರುತ್ತಿದ್ದಳು ಎಂದು ಹೇಳುತ್ತಾರೆ. ನಾಲ್ಕು ವರ್ಷಗಳ ಹಿಂದೆ, ಅವಳಿಗೆ ಆಟಿಸಂ ಗುಂಪಿನ ಆಸ್ಪರ್ಜರ್‌ನ ಆಟಿಸಂ (ಲಘು ಸ್ವರೂಪದ ಆಟಿಸಂ) ಇದೆಯೆಂದು ಗುರುತಿಸಲಾಯಿತು. ಇದು ಅವಳು ಖಿನ್ನತೆಯಿಂದ ಹೊರಬಂದ ನಂತರ ಹವಾಮಾನ ಬದಲಾವಣೆಯ ಪ್ರಮುಖ ವಿಷಯವನ್ನು ಕುರಿತು ಯಾವುದೇ ಅಳುಕಿಲ್ಲದೆ ಮಗ್ನವಾಗಿರುವುದನ್ನು ವಿವರಿಸಲು ಸಹಾಯ ಮಾಡಿತು. ರೇಡಿಯೋ 4ರ 'ಇಂದಿನ ಕಾರ್ಯಕ್ರಮ'ದಲ್ಲಿ 'ಇತರರಿಗಿಂತ ಭಿನ್ನವಾಗಿರುವುದು ಒಂದು ವರದಾನ'ಎಂಬ ವಿಷಯವನ್ನು ಕುರಿತು ಅವಳು ಸಂದರ್ಶನ ನೀಡಿದಾಗ ನಿಕ್‌ರಾಬಿನ್ಸನ್‌ಗೆ ಅವಳು ಹೀಗೆ ಹೇಳಿದಳು– 'ಇದರಿಂದಾಗಿ ನಾನು ವಿಷಯಗಳನ್ನು ಅವುಗಳ ಚೌಕಟ್ಟಿನಾಚೆ ಇರಿಸಿ ನೋಡಲು ನನಗೆ ಸಾಧ್ಯವಾಗಿದೆ. ನಾನು ಸುಲಭವಾಗಿ ಸುಳ್ಳಿಗೆ ಬಲಿಯಾಗುವುದಿಲ್ಲ. ನಾನು ವಿಷಯಗಳ ಒಳ ಆಳವನ್ನು ಅರಿಯಬಲ್ಲೆ. ನಾನು ಎಲ್ಲರಂತೆಯೇ ಇದ್ದಿದ್ದರೆ (ಉದಾಹರಣೆಗೆ) ಈ ಶಾಲಾ ಮುಷ್ಕರವನ್ನು ಪ್ರಾರಂಭಿಸುತ್ತಿರಲಿಲ್ಲ.'
>
> ಮೂಲ: (ಬಿರೆಲ್ ಆಯ್ದ ಭಾಗ, ಇಯಾನ್, ಏಪ್ರಿಲ್ 23, 2019).-------

ಆದ್ದರಿಂದ, ವೈಕಲ್ಯವುಳ್ಳ ವ್ಯಕ್ತಿಗಳನ್ನು ಮುಖ್ಯ ವಾಹಿನಿಯಲ್ಲಿ ಸಮನ್ವಯ ಮಾಡಿಕೊಳ್ಳಬೇಕಾದ ಅಗತ್ಯವನ್ನು ಕುರಿತು ವಾದಮಾಡುವುದನ್ನೂ ಮೀರಿ ಕೆಲಸ ಮಾಡಬೇಕಾದ ಅಗತ್ಯವಿದೆ ಮತ್ತು ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಅದರಲ್ಲೂ ಶಾಲಾ ಮಟ್ಟದಲ್ಲಿ ಚಿಕ್ಕ ಮಕ್ಕಳ ಶಿಕ್ಷಣದಿಂದ ಹಿಡಿದು ಪ್ರೌಢಾವಸ್ಥೆಯವರೆಗಿನ ನಮ್ಮ ಶಿಕ್ಷಣ ಸಂಸ್ಥೆಗಳಲ್ಲಿ ಸಬಲೀಕರಣದ ಪರಿಸರವುಂಟಾಗುವಂತೆ ನೋಡಿಕೊಳ್ಳಲು ನಾವು ಉತ್ತರದಾಯಿಗಳಾಗಿ ಮತ್ತು ಕ್ರಿಯಾಶೀಲರಾಗಿ ಕೆಲಸ ಮಾಡಬೇಕಾಗಿದೆ. ನಾವು ನಮ್ಮ ಸಮುದಾಯಗಳಲ್ಲಿ ಮತ್ತು ಪ್ರಪಂಚದಾದ್ಯಂತ, ಅನೇಕ ಮಕ್ಕಳ ಮತ್ತು ಚಿಕ್ಕ ವಯಸ್ಸಿನ ವೈಕಲ್ಯವುಳ್ಳ ಮಕ್ಕಳ ಅನುಭವಗಳನ್ನು ಗಮನಿಸಿದರೆ ಸಮನ್ವಯವು ಕೇವಲ ಅವರಿಗೆ ಮಾತ್ರವಲ್ಲ, ನಮ್ಮಲ್ಲಿ ಪ್ರತಿಯೊಬ್ಬರಿಗೂಬಲವರ್ಧನೆ ಮಾಡುತ್ತದೆ ಎಂಬ ಸಂದೇಶವು ಬಲವಾಗಿ ಮತ್ತು ಸ್ಪಷ್ಟವಾಗಿ ದೊರಕುತ್ತದೆ. ನಾವು ಇಲ್ಲಿ ಸಾಮರ್ಥ್ಯಗಳನ್ನು ಗುರುತಿಸಿ ಅವುಗಳ ಮೇಲೆ ನಿರ್ಮಾಣ ಮಾಡಬೇಕೇ ಹೊರತು ಸಮನ್ವಯದ ಮಾರ್ಗಕ್ಕೈಗೊಳ್ಳಲು ಸೂಕ್ತವಲ್ಲದ ದೃಷ್ಟಿಕೋನಗಳ ಬಲೆಯಲ್ಲಿ ಸಿಲುಕಬಾರದು. ಈ ಹಿನ್ನೆಲೆಯಲ್ಲಿ ನಾವು ಶಿಕ್ಷಣದ ಪರಿಕಲ್ಪನೆಯನ್ನು ಅರ್ಥ-ಮಾಡಿಕೊಳ್ಳೋಣ ಮತ್ತು ಒಟ್ಟಿಗೆ ಸಬಲೀಕರಣದ ಹಾದಿಯನ್ನು ಕಂಡುಕೊಳ್ಳೋಣ.

**ಶಿಕ್ಷಣ**

ಶಿಕ್ಷಣವನ್ನು ಗ್ರೀಕ್‌ನಲ್ಲಿ 'ಎಡುಕೇರ್' ಅಂದರೆ ಸಾಮರ್ಥ್ಯವನ್ನು ಹೊರತರುವುದು ಅಥವಾ ಸುಪ್ತ ಸಾಮರ್ಥ್ಯವನ್ನು ಬೆಳೆಸುವುದು ಎಂಬ ಪರಿಕಲ್ಪನೆ ಆಧಾರದಲ್ಲಿ ವ್ಯಾಖ್ಯಾನಿಸಲಾಗಿದೆ.

ಹೀಗಾಗಿ ಶಿಕ್ಷಣವು: ಉದ್ದೇಶ ಪೂರ್ವಕವಾದದ್ದು ಮತ್ತು ಭರವಸೆಯನ್ನುಳ್ಳದ್ದು ಜನರು ಅವರಿರುವುದಕ್ಕಿಂತ ಹೆಚ್ಚು ಆಗಬಲ್ಲರು (ಪ್ರಗತಿ ಸಾಧಿಸಬಲ್ಲರು) ಎಂಬ ನಂಬಿಕೆಯಿಂದ ಕಲಿಕೆಯು ಆಗುವಂತೆ ಮಾಡುವುದು. ಮಾಹಿತಿಯುಕ್ತ, ಗೌರವಯುತ ಮತ್ತು ವಿವೇಕಪೂರ್ಣವಾದದ್ದು ಸತ್ಯ ಮತ್ತು ಸಾಧ್ಯತೆಯನ್ನು ಆಹ್ವಾನಿಸುವ ಒಂದು ಪ್ರಕ್ರಿಯೆ.

ಜೀವನದಲ್ಲಿ ಎಲ್ಲರೂ ಮುಂದುವರೆಯಲಿ ಮತ್ತು ಹಂಚಿಕೊಳ್ಳಲಿ ಎಂಬ ಬಯಕೆಯಲ್ಲಿ ಬೇರೂರಿದ್ದು. ಇದು ತಾವೂ ಹಾಗೂ ಇತರ ಜನರು ತಮ್ಮ ಬದುಕನ್ನು ಎಷ್ಟು ಚೆನ್ನಾಗಿ ಬಾಳಲು ಸಾಧ್ಯವೋ ಅಷ್ಟು ಚೆನ್ನಾಗಿ ಬಾಳಲು ನೆರವು ನೀಡುವ ಒಂದು ಸಹಕಾರಿ ಮತ್ತು ಸಮನ್ವಯ ಚಟುವಟಿಕೆ (ಸ್ಮಿತ್, 2015)

ವಿಶೇಷ ಅಗತ್ಯವುಳ್ಳ ಮಕ್ಕಳ ಶಿಕ್ಷಣವನ್ನು ಅಲ್ಲಿಗೆ ಸೂಕ್ತವಾದ ಉಪಬಂಧಗಳು ಒಟ್ಟಾರೆ ಶಿಕ್ಷಣದ, ವಿಶೇಷವಾಗಿ ವೈಕಲ್ಯವುಳ್ಳ ಮಕ್ಕಳ ಶಿಕ್ಷಣದ ಇತಿಹಾಸದ ಬೆಳವಣಿಗೆಯೊಂದಿಗೆ ಬದಲಾಗುತ್ತಾ ಬಂದರೂ ಹಲವಾರು ಮಾರ್ಗಗಳ ಮೂಲಕ ಅದನ್ನು ಪರಿಹರಿಸಲಾಗುತ್ತಿದೆ. ಈ ವಿವಿಧ ವಿಧಾನಗಳು ಆರ್ಥಿಕ ಸ್ಥಿತಿಯಿಂದ ಮತ್ತು ಮೌಲ್ಯ ವ್ಯವಸ್ಥೆಗಳಿಂದಲೂ ಪ್ರಭಾವಿತವಾಗುತ್ತವೆ. ಕೆಲವು ದೇಶಗಳಲ್ಲಿ ಸಮನ್ವಯ ಶಿಕ್ಷಣವೇ ಹೆಚ್ಚು ಪ್ರಚಲಿತ ವಿಧಾನವಾಗಿದೆ ಮತ್ತು ಬೇರೆಡೆ ವಿಶೇಷ ಶಾಲಾ ಶಿಕ್ಷಣವೇ ಪ್ರಾಶಸ್ತ್ಯ ಪಡೆದ ವಿಧಾನವಾಗಿದೆ. ಇನ್ನೂ ಅನೇಕ ದೇಶಗಳಲ್ಲಿ ತೀವ್ರ ಹಾಗೂ ಹಲವಾರು ವಿಕಲತೆಗಳುಳ್ಳ ಮಕ್ಕಳಿಗೆ ಮನೆ ಸೇವೆ ವಿಧಾನ ಹಾಗೂ ಔಪಚಾರಿಕ ಸಂಸ್ಥೆಗಳಲ್ಲದ ಕಡೆಗಳಲ್ಲಿ ಸೇವೆಗಳನ್ನು ನೀಡುವ ವ್ಯವಸ್ಥೆಗಳೂ ಒಳಗೊಂಡಂತೆ ಮಿಶ್ರ ವಿಧಾನಗಳಿಗೆ ಪ್ರಾಧಾನ್ಯತೆ ನೀಡಲಾಗಿದೆ.ಇಂದು, ಸಮನ್ವಯ ಶಿಕ್ಷಣವು ಎಲ್ಲ ಮಕ್ಕಳು ತಮ್ಮ ಮನೆ ಹತ್ತಿರವಿರುವ ಸಾಮಾನ್ಯ ಶಾಲೆಯಲ್ಲಿ ಕಲಿಯಬಲ್ಲರು ಎಂಬ ತತ್ವದ ಆಧಾರದ ಮೇಲೆ ನಿಂತಿದೆ. ಕಲಿಯುವವರ ವೈವಿಧ್ಯತೆಗೆ ಅನುಗುಣವಾಗಿ ವ್ಯವಸ್ಥೆ ಬದಲಾಗಬೇಕೇ ಹೊರತು ವ್ಯವಸ್ಥೆಗೆ ತಕ್ಕಂತೆ ಕಲಿಯುವವರು ಬದಲಾಗತಕ್ಕದ್ದಲ್ಲ ಎಂಬುದನ್ನು ವಿಶ್ವಸಂಸ್ಥೆಯ ವೈಕಲ್ಯವುಳ್ಳ ವ್ಯಕ್ತಿಗಳ ಹಕ್ಕುಗಳನ್ನು ಕುರಿತ

**ಪಂಚವಾರ್ಷಿಕ ಯೋಜನೆಗಳ ಅಡಿಯಲ್ಲಿ ಸಮನ್ವಯ ಶಿಕ್ಷಣದ ಏರ್ಪಾಟುಗಳು**

| ಪಂಚವಾರ್ಷಿಕ ಯೋಜನೆಗಳು | ಪ್ರಮುಖ ಬೆಳವಣಿಗೆಗಳು |
|---|---|
| ಮೊದಲ ಯೋಜನೆ 1951–56 | ಸಮಾಜ ಕಲ್ಯಾಣದಡಿಯಲ್ಲಿ |
| ಮೂರನೇ ಯೋಜನೆ 1961–66 | ಹೆಚ್ಚಿದ ಸೌಲಭ್ಯಗಳು MOE: ರಾಷ್ಟ್ರೀಯ ಸಲಹಾ ಗುಂಪು (National Advisory Group), ಸಮೀಕ್ಷೆಗಳು, ಎನ್‌ಜಿಒಗಳ ಒಳಗೊಳ್ಳುವಿಕೆ |
| ವಿರಾಮ ಅವಧಿ | ಶಿಕ್ಷಣ ಆಯೋಗ, ರಾಷ್ಟ್ರೀಯ ನೀತಿ, ಐಇಡಿ |
| ನಾಲ್ಕನೇ ಯೋಜನೆ 1968–74 ಮತ್ತು ಐದನೇ ಯೋಜನೆ 1974–79 | ಎಂಎಸ್‌ಡಬ್ಲ್ಯೂನಲ್ಲಿ ಐಇಡಿ ಯೋಜನೆ, ಆಯ್ದ ಅನ್ವಯ |
| ಆರನೇ ಯೋಜನೆ 1980–85 | ಎಂ/ಎಚ್‌ಆರ್‌ಡಿಯಲ್ಲಿ ಐಇಡಿಸಿ ಯೋಜನೆ, ತಡೆಗಟ್ಟುವಿಕೆ ಏಕೀಕರಣ, ಮಾದರಿ ಸಮೀಕ್ಷೆಗಳು |
| ಏಳನೇ ಯೋಜನೆ 1985–90 | ಎನ್‌ಜಿಒಗಳು, ಮಹಿಳೆಯರು ಮತ್ತು ವೈಕಲ್ಯವುಳ್ಳವರು ಸಮಾನವಾಗಿ ಅನ್ವಯ |
| ರಾಷ್ಟ್ರೀಯ ನೀತಿ 1986, ಪಿಒಎ | ವೈಕಲ್ಯವುಳ್ಳವರಿಗೆ ಶಿಕ್ಷಣದ ಒಂದು ಅಧ್ಯಾಯ |
| ಎಂಟನೇ ಯೋಜನೆ 1992–97 | ಪಿಡಬ್ಲ್ಯೂಡಿ ಕಾಯ್ದೆ, ಆರ್‌ಸಿಐ, ಡಿಪಿಇಪಿ, ಮಾದರಿ ಸಮೀಕ್ಷೆ |
| ಒಂಬತ್ತನೇ ಯೋಜನೆ 1997–2002 | ಎಸ್‌ಎಸ್‌ಎ, ರಾಷ್ಟ್ರೀಯ ಟ್ರಸ್ಟ್, ಜನಗಣತಿ ಸಮೀಕ್ಷೆ, 86ನೇ ತಿದ್ದುಪಡಿ. ಎನ್‌ಎಸ್‌ಎಸ್‌ಒ 2002 |
| ಹತ್ತನೇ ಯೋಜನೆ 2002–2007 | ಮಾನಿಟರಿಂಗ್, ವಿಸ್ತರಣೆ, ಕಾನೂನು ಚೌಕಟ್ಟು, ಮೀಸಲಾತಿ, ಸಚಿವರ ಹೇಳಿಕೆ, ರಾಷ್ಟ್ರೀಯ ಕ್ರಿಯಾ ಯೋಜನೆಗಳು. ಅಸಮರ್ಥತೆ ಕುರಿತು ಸಮಗ್ರ ಯೋಜನೆ ತಯಾರಿಕೆಯಲ್ಲಿ (ಐಇಸಿವೈಡಿ) |

| | |
|---|---|
| ಹನ್ನೊಂದನೇ ಯೋಜನೆ 2008– 2012 | ಐಇಡಿಎಸ್ಎಸ್, ಆರ್ಎಂಎಸ್ಎ, ಆರ್ ಟಿ ಇ, ಪಿಡಬ್ಲ್ಯೂಡಿ ಕಾಯಿದೆ ಪರಿಷ್ಕರಣೆ, ಪರಿಷ್ಕೃತ ಎಸ್ಎಸ್ಎ ಫ್ರೇಮ್‌ವರ್ಕ್, ಎನ್‌ಸಿಪಿಸಿಆರ್, ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಇಒಓಗಳು, ಅಸಮರ್ಥತೆಯ ಅಧ್ಯಯನಗಳು |
| ಹನ್ನೆರಡನೇ ಯೋಜನೆ 2012–17 | ಆರ್‌ಟಿಇ 2009ಕ್ಕೆ 2012ರ ತಿದ್ದುಪಡಿ, ಆರ್ ಪಿಡಬ್ಲ್ಯೂಡಿ ಕಾಯ್ದೆ, 2016 ಮತ್ತು ಅನುಸರಣಾ ಅಧಿಸೂಚನೆಗಳು |
| 2017ರ ತರುವಾಯ | ನೀತಿ ಅಯೋಗ, ಮೂರು ವರ್ಷದ ಕ್ರಿಯಾ ಕಾರ್ಯಸೂಚಿ (2017–18 ರಿಂದ 2019–20) ಎಸ್ಎಸ್ಎ ಮತ್ತು ಆರ್ಎಂಎಸ್ಎ ಸೇರಿಸಿ ಸಮಗ್ರ ಶಿಕ್ಷಣ ಯೋಜನೆ, ಆರ್‌ಟಿಇ ಮತ್ತು ವಿಶೇಷ ಶಾಲೆಗಳ ಆಯ್ಕೆ (ಆರ್‌ಪಿಡಬ್ಲ್ಯುಡಿ, 2018) |
| ರಾಷ್ಟ್ರೀಯ ಕರಡು ಶಿಕ್ಷಣ ನೀತಿ, 2019 | 2019 ರ ಸೆಪ್ಟಂಬರ್20 ರಂದು CABEನಲ್ಲಿ ಮಂಡಿಸಲಾಯಿತು. 5 + 3 + 3 + 4ರ ಮೇಲೆ ಒತ್ತು (12 ವರ್ಷಗಳ ಶಾಲಾ ಶಿಕ್ಷಣದ ಬದಲಾಗಿ ಮತ್ತು ಪ್ರಾಥಮಿಕ ಪೂರ್ವ ಹಾಗು 1 ಮತ್ತು 2 ಗ್ರೇಡುಗಳನ್ನು 5 ವರ್ಷಗಳ ಫೌಂಡೇಶನಲ್ ಲರ್ನಿಂಗ್ ಆಗಿ ಒಳಗೊಂಡಿದೆ) ಮತ್ತು ಯುಆರ್‌ಜಿಯ ಭಾಗವಾಗಿ ಅಸಮರ್ಥತೆ;<br>ಮಂಡಳಿಯ ಆದ್ಯಂತ ಸಮನ್ವಯ; MCI, AICTE, NCTE, RCI ಮತ್ತಿತರ ನಿಯಂತ್ರಕ ಮಂಡಳಿಗಳ ಬದಲಾಗುವ ಸ್ವರೂಪ. |

ಮೂಲ: ತಮ್ಮ ಅಧ್ಯಾಯಗಳನ್ನು ಆಧರಿಸಿ ಸುದೇಶ್ ಮುಖೋಪಾಧ್ಯಾಯ, 2018 ಅವರು ಅಭಿವೃದ್ಧಿ ಪಡಿಸಿದ್ದಾರೆ.
ಗಮನಿಸಿ: ಸಮನ್ವಯ ಶಿಕ್ಷಣದ ಬಗ್ಗೆ ಕೆಲವು ಮೈಲುಗಲ್ಲುಗಳನ್ನು ಉಲ್ಲೇಖಿಸಲಾಗಿದೆ; ಅನೇಕ ಇತರ ಕಾಯಿದೆಗಳು ತಮ್ಮ ಕಾರ್ಯಕ್ರಮ ಮತ್ತು ಯೋಜನೆಗಳಲ್ಲಿ ವ್ಯಕ್ತವಾಗಿ ಹೇಳರದೇ ಇದ್ದರೂ ವೈಕಲ್ಯತೆಯ ಬಗ್ಗೆ ಗಮನ ಹರಿಸಿರುವುದರಿಂದ ಕೆಲವು ಬಿಟ್ಟು ಹೋಗಿರಬಹುದು.

ಒಡಂಬಡಿಕೆಯಲ್ಲಿ (UN Convention on the Rights of Persons with Disabilities-UNCRPD, 2006)) ಎತ್ತಿಹಿಡಿಯಲಾಗಿದೆ. ಸಮನ್ವಯ ಮತ್ತು ವಿಶೇಷ ಶಿಕ್ಷಣಗಳೆರಡರ ವ್ಯವಸ್ಥೆಗಳಲ್ಲಿ ಶಿಕ್ಷಣದ ಗುಣಮಟ್ಟ ಇನ್ನೂ ಸುಧಾರಣೆ ಆಗಬೇಕಾಗಿದೆ ಎಂಬ ನಿರ್ಧಾರಣೆಯನ್ನು ಪ್ರಸಂಗಗಳ ಆಧಾರದ ಮೇಲೆ ಹೇಳಲಾಗಿದೆಯೇ ಹೊರತು ವ್ಯಾಪಕ ಸಂಶೋಧನೆಯ ಮೇಲೆ ಅದು ಆಧಾರಿತವಾಗಿಲ್ಲ ಮತ್ತು ಪರ್ಯಾಯ ವಿಧಾನಗಳ ಪರಿಣಾಮಕಾರಿತ್ವದ ಮೇಲೆ ಇನ್ನೂ ಸಂಶೋಧನೆಗಳು ಗಮನಹರಿಸಿಲ್ಲ.

ಈಗಾಗಲೇ ಸಿಬಿಎಸ್ಇ 'ಜೀವನ ಕೌಶಲ್ಯವನ್ನು' ಕುರಿತು ಮಾತನಾಡಲು ಪ್ರಾರಂಭಿಸಿದೆ ಮತ್ತು ಎನ್ಇಪಿ (2019)ನ ಇತ್ತೀಚಿನ ಆವೃತ್ತಿಯು ಕೂಡ ಇದರ ಬಗ್ಗೆ ಉಲ್ಲೇಖಿಸುತ್ತದೆ. ವಿಶೇಷ ಶಾಲೆಗಳ ವಿಕಲತೆಯುಳ್ಳ ಮಕ್ಕಳ 'ಹೆಚ್ಚುವರಿ / ಪುಷ್ಟೀಕರಣ ಪಠ್ಯಕ್ರಮ' ('Plus/Enrichment Curriculum') ಕೂಡ ಜೀವನ ಕೌಶಲ್ಯಗಳನ್ನು ಕುರಿತದ್ದಾಗಿದೆ ಎಂಬುದನ್ನು ಗಮನಿಸಬೇಕು. ಕೌಶಲ್ಯ ಮಂಡಳಿಯು ಸಹ ತನ್ನ ಕಾರ್ಯಸೂಚಿಯಲ್ಲಿ ಇದನ್ನು ಹೊಂದಿದೆ. ಎನ್‌ಸಿಇಆರ್‌ಟಿ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು–2020 (National Curriculum Framework 2020) ಅನ್ನು ರೂಪಿಸುವಾಗ ಇದರತ್ತ ಗಮನಹರಿಸಬೇಕಾಗಿದೆ.

**ಕಾನೂನು ನಿಬಂಧನೆಗಳಿಂದ ಕಲಿಕೆ**

ಇಂದು ವಿಶೇಷ ಅಗತ್ಯವುಳ್ಳ ಮಕ್ಕಳ ಶಿಕ್ಷಣವು ಸರ್ಕಾರದ ಪ್ರಮುಖ ಜವಾಬ್ದಾರಿಗಳಲ್ಲೊಂದು. ಭಾರತದಲ್ಲಿ ನಾವು 1974ರಿಂದ ಸಮಾಜ ಕಲ್ಯಾಣ ಸಚಿವಾಲಯದ (ಈಗ ಇದನ್ನು ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ ಎಂದು ಕರೆಯಲಾಗುತ್ತದೆ) ಮೂಲಕ ಈ ನಿಟ್ಟಿನಲ್ಲಿ ಕೆಲಸ ಮಾಡುತ್ತಿದ್ದೇವೆ. ಆಯೋಗಗಳ, ಪಂಚವಾರ್ಷಿಕ ಯೋಜನೆಗಳ ಮತ್ತು ತದನಂತರದ ಸಂಸತ್ತು ಜಾರಿಗೆತಂದ ಕಾಯಿದೆಗಳಲ್ಲಿ ಈ ಬೆಳವಣಿಗೆಗಳನ್ನು ಕುರಿತು ಒಂದು ಚಿತ್ರವನ್ನು ಒದಗಿಸುತ್ತವೆ. ಈ ಬೆಳವಣಿಗೆಗಳನ್ನು ಈ ಕೆಳಗಿನಂತೆ ಸಂಕ್ಷಿಪ್ತಗೊಳಿಸಬಹುದು:

ಸ್ವಾತಂತ್ರ್ಯದ ನಂತರ ಭಾರತದಲ್ಲಿ ಸಮನ್ವಯ ಶಿಕ್ಷಣದತ್ತ ನಡೆದ ಪ್ರಯತ್ನಗಳ ಬಗ್ಗೆ ಈ ಕೋಷ್ಟಕವು ತೋರಿಸುತ್ತದೆ. ಸಮನ್ವಯ ಶಿಕ್ಷಣವೆಂಬುದು ಭಾರತವೂ ಸೇರಿದಂತೆ ಎಲ್ಲಾ ದೇಶಗಳಲ್ಲಿ ವಿಕಾಸಗೊಳ್ಳುತ್ತಿರುವ ಒಂದು ಪ್ರಕ್ರಿಯೆಯಾದರೂ ಈಗ ಒಂದು ಜನಪ್ರಿಯವಾದ ಪದವಾಗಿದೆ.

ಸಬಲೀಕರಣ ನೀತಿಗಳು ಮತ್ತು ಶಾಸನಗಳ ಪರಿಣಾಮವಾಗಿ, ಎಲ್ಲ ರಾಜ್ಯಗಳಲ್ಲಿ ನ್ಯಾಯಾಲಯದ ಪ್ರಕರಣಗಳು ಜಾಸ್ತಿಯಾಗಿ ಸುಪ್ರೀಂ ಕೋರ್ಟ್‌ನವರೆಗೆ ಹೋಗಿವೆ. ಇದು ಕಾರ್ಯನೀತಿ ರಚಿಸುವುದಕ್ಕೂ ಮತ್ತು ಅವನ್ನು ಅನುಷ್ಠಾನಕ್ಕೆ ತರುವವರೆಗೂ ಅಂದರೆ ಸದುದ್ದೇಶದ ಸಾಕಾರದವರೆಗೂ ನಡುವೆ ಇರುವ ಕೊರತೆಗಳು ಮತ್ತು ಸವಾಲುಗಳನ್ನು ಸೂಚಿಸುತ್ತದೆ.[3] ಮಕ್ಕಳನ್ನು ಅನುತ್ತೀರ್ಣ ಮಾಡಿ ಹಿಂದಿನ ತರಗತಿಯಲ್ಲಿಯೇ ಉಳಿಸಿಕೊಳ್ಳಬಾರದು ಎಂಬ ಆರ್‌ಟಿಇ ಕಾಯ್ದೆ (2009)ರ ಖಂಡ 16ನ್ನು 2017ರಲ್ಲಿ ತಿದ್ದುಪಡಿ ಮಾಡಲಾಗಿದೆ. ಈ ಕಾನೂನು ಉಪಬಂಧವನ್ನು ತೆಗೆದುಹಾಕಿದರೆ ಇದು ಎಲ್ಲಾ ದುರ್ಬಲ ಮಕ್ಕಳ ಮೇಲೆ ಗಂಭೀರ ಪರಿಣಾಮ ಬೀರಬಲ್ಲದು. ಏಕೆಂದರೆ ಶಾಲಾ ವ್ಯವಸ್ಥೆಯು ಸ್ವಯಂ ಮೇಲ್ವಿಚಾರಕವಲ್ಲ ಅಥವಾ ಈಗ ವಿಶೇಷ ಅಗತ್ಯವುಳ್ಳವರನ್ನೂ ಒಳಗೊಂಡ ಕಾರಣ ಆರ್‌ಟಿಇ ಕಾಯ್ದೆ (2009)ರ ಅಡಿಯಲ್ಲಿ ಕಲ್ಪಿಸಲಾದ ನೆರವು ನೀಡುವ ಬಗ್ಗೆ ಶಾಲೆಗಳೂ ಉತ್ತರದಾಯಿಗಳಾಗಿರುವುದಿಲ್ಲ.

ಕಾನೂನು ಉಪಬಂಧಗಳ ಹಿನ್ನೆಲೆಯಲ್ಲಿ ಮತ್ತು ಈಗ ರಾಷ್ಟ್ರೀಯ ಕರಡು ಶಿಕ್ಷಣ ನೀತಿ 2019ರಲ್ಲಿ ವ್ಯಕ್ತವಾಗಿರುವ ಉದ್ದೇಶದ ಅಡಿಯಲ್ಲಿ ಎಲ್ಲಾ ನೀತಿ–ನಿರೂಪಕರು, ಯೋಜಕರು, ಅನುಷ್ಠಾನಕಾರರು ಮತ್ತು ಹಿತಾಸಕ್ತಿದಾರರು, ವಿಕಲತೆವುಳ್ಳವರೂ ಸೇರಿದಂತೆ ಸಮಾಜದ ಎಲ್ಲ ವರ್ಗಗಳ ಜನರಿಗೂ ಅವಕಾಶಗಳ ಸಮಾನತೆ, ಆರ್ಥಿಕ ಮತ್ತು ಸಾಮಾಜಿಕ ಚಲನಶೀಲತೆ ಒಳಗೊಳ್ಳುವಂತೆ ಸಮನ್ವಯದ ದೃಷ್ಟಿಯನ್ನು ವಿಸ್ತರಿಸುವುದು ಬಹು ಮುಖ್ಯ. ಸೀನಿಯರ್ ಸೆಕೆಂಡರಿಯವರೆಗೆ ಶಾಲಾ ಶಿಕ್ಷಣವು ಮುಖ್ಯ ಹಾಗೂ ಶಿಫಾರಸ್ಸಾದ ವಿಷಯವಾಗಿದೆ.ಆದರೆ 14 ವರ್ಷದವರೆಗಿನ ಪ್ರಾರಂಭದ ವರ್ಷಗಳ ಶಾಲಾ ಶಿಕ್ಷಣದ ಪ್ರಾಮುಖ್ಯತೆಯನ್ನು

ಕಡೆಗಣಿಸಲಾಗುವುದಿಲ್ಲ ಅಥವಾ ಅದಕ್ಕೆ ಅತಿಯಾಗಿ ಒತ್ತು ನೀಡಲೂ ಆಗುವುದಿಲ್ಲ. ಶಿಕ್ಷಣವು ಸಂವಿಧಾನದ ಸಹವರ್ತಿ ಪಟ್ಟಿಯಲ್ಲಿದ್ದು, ವಿಕಲತೆಯು ರಾಜ್ಯಗಳ ಪಟ್ಟಿಯ ವಿಷಯವಾಗಿದೆ. ಹೀಗಾಗಿ ನಾವು ರಾಷ್ಟ್ರೀಯ ನೀತಿಯನ್ನು ಕ್ರಮಕೈಗೊಳ್ಳಬಹುದಾದ ಅನುಷ್ಠಾನ-ಗೊಳಿಸುವ ಉಪಬಂಧವಾಗಿ ಪರಿವರ್ತಿಸುವುದರ ಪರಿಣಾಮವನ್ನು ಅರ್ಥಮಾಡಿಕೊಳ್ಳಬೇಕು. ಸಂಬಂಧಿತ ಆದೇಶಗಳು ಮತ್ತು ಆಡಳಿತ ಕ್ರಮಗಳು ಯಾವಾಗಲೂ ರಾಜ್ಯಗಳ ಅಧೀನದಲ್ಲಿರುತ್ತವೆ. ಸಿಎಸ್‌ಆರ್ ಮತ್ತು ಸಾರ್ವಜನಿಕ-ಖಾಸಗಿ ಸಹಭಾಗಿತ್ವವನ್ನು ಎಚ್ಚರಿಕೆಯಿಂದ ಮತ್ತು ಜಾಗರೂಕತೆಯಿಂದ ಅರ್ಥಮಾಡಿ-ಕೊಳ್ಳಬೇಕಾಗಿದೆ. ಏಕೆಂದರೆ ಮಾರುಕಟ್ಟೆ ಆರ್ಥಿಕತೆಯು ಅಂತಾರಾಷ್ಟ್ರೀಯ ಏಜೆನ್ಸಿಗಳಾದ ಯುನೆಸ್ಕೋ ಮತ್ತು ಯುನಿಸೆಫ್‌ಗಳಿಂದ ಬರುವ ಹಣದ ಹರಿವಿನ ಮೇಲೆ ಪ್ರಭಾವ ಬೀರಿದೆ.

**ಮಾನವ ಸಂಪನ್ಮೂಲಗಳ ಸವಾಲು**

ವಿಶೇಷ ಮತ್ತು ಸಮನ್ವಯ ಶಿಕ್ಷಣಗಳೆರಡರ ಪ್ರಾರಂಭದಿಂದಲೂ ವಿಶೇಷ ಅಗತ್ಯವುಳ್ಳ ಮಕ್ಕಳನ್ನು ಸಶಕ್ತಗೊಳಿಸುವುದಕ್ಕಾಗಿ ಮಾನವ ಸಂಪನ್ಮೂಲಗಳ ಲಭ್ಯತೆ ಮತ್ತು ನಿರಂತರವಾಗಿ ಅವರ ಸಾಮರ್ಥ್ಯ ವರ್ಧನೆ ಮಾಡುವುದು ನಿರ್ಣಾಯಕ ವಿಷಯವಾಗಿದೆ. ಶಿಕ್ಷಣದ ಗುಣಮಟ್ಟವನ್ನು ಯೋಜಿತ ಪ್ರಯತ್ನ, ಸಾಕಷ್ಟು ಸಂಖ್ಯೆಯ ವೃತ್ತಿಪರವಾಗಿ ಸಮರ್ಥರಾದ ಸಿಬ್ಬಂದಿ ಅಥವಾ ಮಾನವ ಸಂಪನ್ಮೂಲದ ಮೂಲಕ ಮಾತ್ರ ಒದಗಿಸಬಹುದು ಅಥವಾ ಹೆಚ್ಚಿಸಬಹುದು. ಶಾಲೆಗಳಲ್ಲಿ ಸಿಬ್ಬಂದಿಗಳ ಸಂಖ್ಯೆಯನ್ನು ಕನಿಷ್ಠ ಅಗತ್ಯದ ಆಧಾರದ ಮೇಲೆ ನಿರ್ಧರಿಸದೆವಾಸ್ತವ ಅಗತ್ಯದ ಆಧಾರದ ಮೇಲೆ ನಿರ್ಧರಿಸಬೇಕಾಗಿದೆ. ಆರ್‌ಟಿಇ ಕಾಯ್ದೆ ಈ ವಾಸ್ತವವನ್ನು ಗುರುತಿಸಬೇಕು ಮತ್ತು ಶಿಕ್ಷಕರು, ವಿಶೇಷ ಶಿಕ್ಷಕರು ಮತ್ತು ಇತರ ವೃತ್ತಿಪರರ ನೇಮಕಾತಿಯು ಹಠಾತ್ ನಿರ್ಧಾರಗಳ ಅಥವಾ ತಾತ್ಕಾಲಿಕ ನಿರ್ಧಾರದ ಕೈವಶವಾಗುವಂತೆ ಮಾಡಬಾರದು ಎಂಬುದನ್ನು ಗುರುತಿಸಬೇಕು.

**ಈಗಿನ ಸವಾಲೆಂದರೆ :**

**ನಮ್ಮಲ್ಲಿ ಸಾಕಷ್ಟು ಸೇವಾ ಪೂರೈಕೆದಾರರು ಇದ್ದಾರೆಯೇ?**

ನಾವು ಬಳಸುವ ಹೆಸರನ್ನು ಕೂಡ ನೋಡಬೇಕೇ? ಉದಾಹರಣೆಗೆ ವಿಶೇಷ ಶಾಲೆಗಳನ್ನು ವಿಶೇಷ ಸೇವೆಗಳನ್ನು ನೀಡುವ ಶಾಲೆಗಳೆಂದು ನಾವು ನೋಡಿದರೆ ಇವು ವಿಶೇಷ ಉದ್ದೇಶಕ್ಕಾಗಿ ಸ್ಥಾಪಿಸಲಾದ ವಿಶೇಷ ಶಾಲೆಗಳಾಗುತ್ತವೆ. ಅಂದರೆ, ನವೋದಯ ವಿದ್ಯಾಲಯಗಳು, ಕೇಂದ್ರೀಯ ವಿದ್ಯಾಲಯಗಳು ಮತ್ತು ಸೈನಿಕ ಶಾಲೆಗಳ ಮಾದರಿಯ ಶಾಲೆಗಳು.

ಹಾಗೆಯೇ ನಾವು ಕೆಲವು ಮಕ್ಕಳಿಗೆ ಅಗತ್ಯವಿರುವ ವಿಶೇಷ ಬೆಂಬಲವನ್ನು ಒದಗಿಸಲು ಹೇಗೆ ಯೋಜಿಸುತ್ತೇವೆ? ನಾವು ಸ್ಥಳ, ಸಾಮಾಜಿಕ ಪರಿಸರ, ಆರೋಗ್ಯ, ಹುಟ್ಟಿದಾಗಿನಿಂದ ಇರುವಂತಹ ವಿಕಲತೆಯ ಪರಿಸ್ಥಿತಿಗಳು, ಅಪಘಾತಗಳು ಮತ್ತು ವ್ಯಕ್ತಿಯ ಜೀವನದಲ್ಲಿ ಅಂತಹ ಇತರ ಬೆಳವಣಿಗೆಗಳಿಂದಾದ ಅಸಮರ್ಥ ಸ್ಥಿತಿಯಿಂದ ಉಂಟಾದ ಸಂದರ್ಭಗಳನ್ನು ಅಧ್ಯಯನ ಮಾಡುವ, ವಿಶ್ಲೇಷಣೆ ಮಾಡುವ, ಸಂಶೋಧನೆ ಮಾಡುವ ಮತ್ತು ದಾಖಲಿಸುವ ಅಗತ್ಯವಿದೆ.[4]

ವರದಿ ಮಾಡುವ ಏಜೆನ್ಸಿಗಳು ಬಿಡುಗಡೆ ಮಾಡಿದ ವಿಕಲತೆ ಆಧಾರದ ಮಾಹಿತಿಯು ಸೇವೆಗಳು ಮತ್ತು ಸಂಪನ್ಮೂಲಗಳಿಗಾಗಿ ಯೋಜನೆ ರೂಪಿಸಲು ಪರಿಗಣಿಸಬೇಕಾದ ಪ್ರಶ್ನೆಗಳನ್ನು ಒದಗಿಸುತ್ತವೆ. ನರವ್ಯೂಹ ಮತ್ತು ಸಂವೇದನಾ ಕ್ರಿಯೆಗಳ ವಿಕಲತೆಯಿರುವ (Neurological and sensory disabilities) ಮಕ್ಕಳು ಶಾಲಾ ಸೌಲಭ್ಯಗಳು ಮತ್ತು ಸೇವೆಗಳಿಗೆ ದಾಖಲಾತಿ ಹೊಂದಲು ಸೂಕ್ತ ಆರೋಗ್ಯ ಸ್ಥಿತಿನಿರ್ಧರಣೆ ಮತ್ತು ಕಲಿಕೆಗಾಗಿ ಅವರನ್ನು ಸಶಕ್ತಗೊಳಿಸುವ ಚಿಕಿತ್ಸೆ ಪಡೆಯುವ ಕೆಲವು ಗಮನಾರ್ಹ ಸಮಸ್ಯೆಯನ್ನು ಎದುರಿಸುತ್ತಾರೆ, ಈಗಿರುವಂತೆ ಅವರ ಕಲಿಕಾ ಫಲಿತಾಂಶಗಳ ಬಗ್ಗೆ ಯಾವ ಮಾಹಿತಿಯೂ ಇಲ್ಲ. ಬೇರೆಬೇರೆ ಮಕ್ಕಳಿಗೆ ಬೇರೆಬೇರೆ ಅಗತ್ಯಗಳಿವೆ. ಉದಾಹರಣೆಗೆ, ಮೂಳೆ ಸಮಸ್ಯೆಗಳು, ಸಿಪಿ ಮತ್ತು ಬಹು ವಿಕಲತೆಗಳು. ಹಾಗೂ ಪ್ರತಿಯೊಬ್ಬ ಮಗುವಿಗೂ ಭಿನ್ನವಾದ ಕಲಿಕಾ ವಿಧಾನಗಳಿರುತ್ತವೆ. ನಾವು ಒಂದೇ ಫಲಿತಾಂಶವನ್ನು ಕಂಡುಕೊಳ್ಳಲು ಪ್ರಯತ್ನಿಸುವುದು ಮುಖ್ಯವಾದರೂ ಕಲಿಕಾ ವೇಗ, ಬೋಧನಾ ವಿಧಾನ, ನೆರವು, ಪರಿಹಾರವಲ್ಲದ ಸಂವರ್ಧನಾ ಪ್ರಯತ್ನಗಳು ಬೇರೆ ಬೇರೆಯಾಗಿರುತ್ತವೆ ಎಂಬುದನ್ನು ಮರೆಯಬಾರದು. ಇದು ಕಲಿಕೆಯ ಮೇಲೆ ಪರಿಣಾಮ ಬೀರುತ್ತದೆ ಮತ್ತು ತನ್ಮೂಲಕ, ನಿರ್ಧಾರಣೆ ಕಾರ್ಯವಿಧಾನಗಳು ಮತ್ತು ಪಠ್ಯಕ್ರಮ ರಚನೆಯನ್ನು ಮಾಡಬೇಕಾಗುತ್ತದೆ.

**ವಿಶೇಷ ಶಿಕ್ಷಣ ಶಾಲೆಗಳು – ಸಮನ್ವಯದ ಮುಂದುವರಿಕೆಗಳು**

ಸಮನ್ವಯ ಶಿಕ್ಷಣವು ಈ ಹಿಂದೆ ಇದ್ದ ವಿಲೀನ ಮತ್ತು ಮುಖ್ಯವಾಹಿನಿಗೆ ಸೇರಿಸಿಕೊಳ್ಳುವ ವಿಚಾರಗಳಿಗಿಂತ ಬೇರೆಯಾಗಿದೆ. ಈ ಹಿಂದಿನ ವಿಚಾರಧಾರೆಯು ಪ್ರಾಥಮಿಕವಾಗಿ ವಿಕಲತೆ ಮತ್ತು ವಿಶೇಷ ಶಿಕ್ಷಣದ ಅಗತ್ಯತೆಗಳಿಗೆ ಸಂಬಂಧಿಸಿರುತ್ತದೆ ಮತ್ತು ಕಲಿಯುವ ಮಕ್ಕಳು ಮುಖ್ಯವಾಹಿನಿ ಶಾಲೆಗಳಿಗೆ ಸೇರುವುದಕ್ಕೆ ತಕ್ಕಂತೆ ಮಾರ್ಪಾಡಾಗುವ ಅಥವಾ ಸಿದ್ಧರಾಗುವುದನ್ನು (ಅಥವಾ ಅರ್ಹರಾಗುವುದನ್ನು) ಇದು ಸೂಚಿಸುತ್ತದೆ. ಇದಕ್ಕೆ ತದ್ವಿರುದ್ಧವಾಗಿ, ಸಮನ್ವಯ ಶಿಕ್ಷಣವು ಎಲ್ಲರೊಡನೆ ಸೇರಿ ಕಲಿಯುವ ಮಗುವಿನ ಹಕ್ಕು ಮತ್ತು ಮಗುವನ್ನು ಅಂಗೀಕರಿಸಿ ಸ್ಪಂದಿಸಬೇಕಾದ ಶಾಲೆಯ ಕರ್ತವ್ಯವನ್ನು ಕುರಿತದ್ದಾಗಿದೆ.

ಸಮನ್ವಯ ಶಿಕ್ಷಣದ ಪರಿಕಲ್ಪನೆಯು ವಿಶೇಷ ಶಾಲೆಗಳ ಅಥವಾ ವಿಶೇಷ ಅಗತ್ಯವುಳ್ಳ ವಿದ್ಯಾರ್ಥಿಗಳನ್ನು ಇತರೆ ಸಾಮಾನ್ಯ ವಿದ್ಯಾರ್ಥಿಗಳಿಂದ ಪ್ರತ್ಯೇಕಿಸಲು ಬೇರೆತರಗತಿ ನಡೆಸುವುದನ್ನು ತಿರಸ್ಕರಿಸುತ್ತದೆ. ಹಕ್ಕು ಆಧಾರಿತ ಧೋರಣೆಯು ವಿಶೇಷ ಅಗತ್ಯವುಳ್ಳ ವಿದ್ಯಾರ್ಥಿಗಳ ಪೂರ್ಣ ಭಾಗವಹಿಸುವಿಕೆಗೆ ಮತ್ತು ಅವರ ಸಾಮಾಜಿಕ, ನಾಗರಿಕ ಮತ್ತು ಶಿಕ್ಷಣ ಹಕ್ಕುಗಳನ್ನು ಗೌರವಿಸುವುದಕ್ಕೆ ಒತ್ತು ನೀಡುತ್ತದೆ. ಈ ಎರಡೂ ಅಂಶಗಳನ್ನು ತೆಗೆದುಕೊಳ್ಳುತ್ತಾ RPWD ಕಾಯ್ದೆ 2016ರಲ್ಲಿನ ಉದ್ದೇಶ ಮತ್ತು ನಿಬಂಧನೆಗಳ ಪ್ರಕಾರ, ಶಾಲೆಗಳು ಅಂಗೀಕರಿಸಲ್ಪಟ್ಟ 'ಸಾಮಾನ್ಯ ಶಿಕ್ಷಣ ಮತ್ತು ವಿಶೇಷ ಶಿಕ್ಷಣ ಕಾರ್ಯಕ್ರಮಗಳು' ಎಂಬ ಪದಗಳ ನಡುವೆ ವ್ಯತ್ಯಾಸವನ್ನು ಮಾಡಬಾರದು. ಬದಲಾಗಿ, ಶಾಲೆಯ ಪ್ರಕ್ರಿಯೆಗಳು ವಿಶೇಷ ಶಾಲೆಗಳಾಗಲು ಅವಕಾಶದೊಂದಿಗೆ ಎಲ್ಲಾ ವಿದ್ಯಾರ್ಥಿಗಳು ಒಟ್ಟಿಗೆ ಕಲಿಯುವಂತೆ ರಚಿತವಾಗಿರಬೇಕು5.

ನಾವು ಹಕ್ಕುಗಳನ್ನು ತಡೆಯುವವರಲ್ಲ, ಸುಗಮಗೊಳಿಸುವವರು! ನಾವು ಕೇಂದ್ರ ಮತ್ತು ರಾಜ್ಯ ಸರ್ಕಾರಗಳಾಗಿ ಆಯ್ಕೆಗಳನ್ನು ನಿರ್ವಹಿಸುವ ಹಕ್ಕನ್ನು ಗೌರವಿಸುತ್ತಿದ್ದೇವೆ ಎಂದು ಹೇಳಬಹುದೇ? ಭರವಸೆಯಿಂದ ನಾವು ಎಲ್ಲಾ ಶಾಲೆಗಳು ಸಮನ್ವಯ ಶಿಕ್ಷಣ ನೀಡುತ್ತವೆ ಮತ್ತು ಎಲ್ಲಾ ವಿಶೇಷ ಶಾಲೆಗಳು ಆರ್‌ಟಿಇ ಕಾಯ್ದೆಯ ಮಾನದಂಡಗಳನ್ನು ಪೂರೈಸುತ್ತವೆ ಎಂದು ಹೇಳಬಹುದೇ? ಇದು ವ್ಯವಸ್ಥೆಯು ಪರಿಗಣಿಸಲೇಬೇಕಾದ ಪ್ರಮುಖ ಪ್ರಶ್ನೆಯಾಗಿದೆ. ಏಕೆಂದರೆ RPWD ಶಾಲಾ ಶಿಕ್ಷಣದ ಹಕ್ಕನ್ನು ಮಾತ್ರವಲ್ಲ, ವಿಶೇಷ ಶಾಲೆಗಳನ್ನು ಆಯ್ಕೆಮಾಡುವಹಕ್ಕನ್ನೂ ನೀಡುತ್ತದೆ. ಮಾನವ

ಸಂಪನ್ಮೂಲ ಸಚಿವಾಲಯವೂ ವಿಕಲತೆಯುಳ್ಳ ಮಕ್ಕಳ ಶಿಕ್ಷಣದ ಬಗ್ಗೆ ಕೂಡ ಗಮನಹರಿಸಬೇಕೆಂದು ನೀತಿ ಆಯೋಗವು ನಿರೀಕ್ಷಿಸುತ್ತದೆ.

ಆದ್ದರಿಂದ, ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಪ್ರತಿಕ್ರಿಯೆಯು ನಮ್ಮ ಸಮನ್ವಯ ಶಿಕ್ಷಣದ ಮಾರ್ಗದಲ್ಲಿ ಮತ್ತು ಸಮನ್ವಯ ಶಾಲೆಗಳು, ವಿಶೇಷ ಶಾಲೆಗಳು, ವಿಶೇಷ ಸೇವೆಗಳ ಶಾಲೆಗಳು ಎಂಬ ಹಣೆಪಟ್ಟಿ ಇಲ್ಲದೆಯೇ ಶಾಲೆ ನಡೆಸುವ ನಿಟ್ಟಿನಲ್ಲಿ ನಾವು ಎಷ್ಟು ಮುಂದುವರೆಯುತ್ತೇವೆಂಬುದನ್ನು ನಿರ್ಧರಿಸುತ್ತವೆ. ಸೆಪ್ಟೆಂಬರ್ 2019ರ CABEನ ಮತ್ತು ಎನ್‌ಪಿಎ 2019ಗಳ ಫಲಿತಾಂಶಗಳು ಈ ಎಲ್ಲದರ ಮೇಲೆ ಪರಿಣಾಮ ಬೀರಲಿವೆ.

**ಶಿಕ್ಷಕರ ಸಿದ್ಧತೆ ಮತ್ತು ನಿರ್ವಹಣೆ**

ಸೇವಾ ಪೂರ್ವ ಶಿಕ್ಷಕರ ಸಿದ್ಧತೆ ಬಹಳ ನಿರ್ಣಾಯಕವಾದದ್ದು. ಎನ್‌ಸಿಟಿಇ ಎಲ್ಲಾ ಶಿಕ್ಷಕರಿಗೆ ನಿಯಂತ್ರಕ ಸಂಸ್ಥೆಯಾಗಿದೆ, ಎನ್‌ಸಿಟಿಇಗೂ ಮೊದಲು ಸಂಸತ್ತಿನ ಕಾಯಿದೆಯಿಂದ ರೂಪಿಸಲಾದ ಪುನರ್ವಸತಿ ಕೌನ್ಸಿಲ್ ಆಫ್ ಇಂಡಿಯಾ (ಆರ್‌ಸಿಐ, RCI) ವಿಶೇಷ ಶಿಕ್ಷಕರ ತರಬೇತಿಯನ್ನು ನಿಯಂತ್ರಿಸುತ್ತದೆ. NCTE 2014ರ ಎರಡು ವರ್ಷದ ಬಿಎಡ್ ಮತ್ತು ಎಂಎಡ್ ಕೋರ್ಸ್‌ಗಳ ಅಧಿಸೂಚನೆಯ ತರುವಾಯ 2015ರಲ್ಲಿ, RCI ತನ್ನ ಪಠ್ಯಕ್ರಮವನ್ನು ಎರಡು ವರ್ಷಗಳ ಕೋರ್ಸ್ ಆಗಿ ನವೀಕರಿಸಿತು ಮತ್ತು ಆ ಮೂಲಕ ವಿಶೇಷ ಅಗತ್ಯವುಳ್ಳ ಮಕ್ಕಳಿಗಾಗಿ ಸಾಮಾನ್ಯ ಮತ್ತು ವಿಶೇಷ ಶಾಲೆಗಳಿಗೆ ಶಿಕ್ಷಕರನ್ನು ತಯಾರಿಸಲು ಸಜ್ಜಾಗಿದೆ. ಇಲ್ಲಿ ಸಾಮಾನ್ಯ ಶಾಲಾ ವಿಷಯಗಳ ಶಿಕ್ಷಣದ ಜೊತೆಗೆ ಇದು ಅನೇಕ ಅಸಮರ್ಥತೆಗಳ ಬಗ್ಗೆ ಕಲಿಸುತ್ತಾ ಎರಡು ಅಸಮರ್ಥತೆಗಳಲ್ಲಿ ಪರಿಣತಿಯನ್ನು ನೀಡುತ್ತದೆ.

ಹೀಗಿದ್ದರೂ, NCTE ವಿಶೇಷ ಶಿಕ್ಷಣದಲ್ಲಿ RCIನ ಡಿಪ್ಲೊಮಾ ಮತ್ತು ಪದವಿ ಇವೆರಡರ ಅರ್ಹತೆಯನ್ನು ಪ್ರಾಥಮಿಕ ಹಂತದವರೆಗೆ ಮಾತ್ರಸ್ವೀಕರಿಸುತ್ತದೆ. ಇದರಿಂದಾಗಿ, ಶಾಲೆಗಳಲ್ಲಿ ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಸೇವೆಸಲ್ಲಿಸಲು ಸೂಕ್ತ ಹಾಗೂ ಸಾಕಷ್ಟು ಸಂಖ್ಯೆಯ ವೃತ್ತಿಪರರು ಇಲ್ಲ, ಏಕೆಂದರೆ ಇವರು ವೃತ್ತಿಯಲ್ಲಿ ಯಾವುದೇ ಪ್ರಗತಿ ಕಾಣದ ಕಡಿಮೆ ಸಂಬಳದ ಗುತ್ತಿಗೆ ಶಿಕ್ಷಕರು.

**ಶಿಕ್ಷಕ ಶಿಕ್ಷಣವನ್ನು ಕುರಿತ ವಿಚಾರದೃಷ್ಟಿ ಮತ್ತು ಸವಾಲುಗಳು (ಡಿಎನ್‌ಇಪಿ 2019)**

ಮಕ್ಕಳ ರಾಷ್ಟ್ರೀಯ ನೀತಿಯು (2013) (National Policy on Children -2013) ಶಿಕ್ಷಣವೂ ಸೇರಿದಂತೆ ಸೇವಾ ಪೂರೈಕೆದಾರರು ಯಾವ ಪಾತ್ರವನ್ನುವಹಿಸಬೇಕೆಂಬ ನಿರೀಕ್ಷೆ ಇದೆ ಎಂಬ ವಿವರಗಳನ್ನು ನೀಡುತ್ತದೆ. 3–18 ವರ್ಷದ ವಯೋಮಾನದ ಗುಂಪಿನವರಿಗೆ ಸಂಬಂಧಿಸಿದಂತೆ ಮಾನವಶಕ್ತಿಯ ಅವಶ್ಯಕತೆಗಳು ಮತ್ತು ಶಾಸನಬದ್ಧ ಸಂಸ್ಥೆಗಳ ಸಂಬಂಧಿತ ಪಾತ್ರವನ್ನೂ ಕುರಿತು ನೋಡಬೇಕಾದ ಅವಶ್ಯಕತೆಯಿದೆ. ಆಯಾ ಸಚಿವಾಲಯಗಳು ತಾತ್ಕಾಲಿಕ ಮತ್ತು ಪ್ರತ್ಯೇಕಿತ ಅಧಿಸೂಚನೆಗಳನ್ನು ಹೊರಡಿಸಿದರೆ ಅದು ಅವ್ಯವಸ್ಥೆಗೆ ಮತ್ತು ನೀತಿಯ ಕಳಪೆ ಅನುಷ್ಠಾನಕ್ಕೆ ಕಾರಣವಾಗುತ್ತವೆ. ಸೇವಾಪೂರ್ವ, ಸೇವಾ ನಿರತ ಅವಧಿ ಮತ್ತು ನಿರಂತರ ವೃತ್ತಿಪರ ಬೆಳವಣಿಗೆಯನ್ನು ಒಂದು ನಿರಂತರ ಪ್ರಕ್ರಿಯೆಯಾಗಿ ನೋಡಬೇಕಾಗಿದೆ, ಈ ಸೇವೆಯನ್ನು ಉನ್ನತ ಶಿಕ್ಷಣದ ವಿಭಾಗದಲ್ಲಿ ನಿಗದಿಪಡಿಸಿದಂತೆ ವಿಶ್ವವಿದ್ಯಾಲಯಗಳು ಮತ್ತು ಇತರ ಉನ್ನತ ಶಿಕ್ಷಣ ಸಂಸ್ಥೆಗಳು (ಎಚ್‌ಇಐಗಳು) ಸಲ್ಲಿಸಬೇಕು. ಇದನ್ನು ಮುಖಾಮುಖಿ ಮತ್ತು ಮುಕ್ತ/ತೆರೆದ ಹಾಗು ದೂರ ಕಲಿಕೆ (Open and Distance Learning (ODL) ವಿಧಾನಗಳ ಮೂಲಕ ಮಾಡಬೇಕು. ಪ್ರಮಾಣಪತ್ರ ನೀಡಿಕೆ, ಅಂಕ ನಿಗದೀಕರಣ, ವಿಷಯ ಆಯ್ಕೆಗಳು, ಮಾನವಶಕ್ತಿ, ನೇಮಕಾತಿ ಮತ್ತು ಸೇವಾ ಷರತ್ತುಗಳು ಹಾಗೂ ವೃತ್ತಿ ಮಾರ್ಗಗಳು ಸೇರಿದಂತೆ, ಎಲ್ಲವನ್ನೂ ಏಕಕಾಲದಲ್ಲಿ ನೋಡಿಕೊಳ್ಳಬೇಕು. ಈ ಹಲವು ಅಂಶಗಳುಒಟ್ಟಾರೆ ಮಕ್ಕಳ ಅದರಲ್ಲೂ ಇಲ್ಲಿಯವರೆಗೆ ನಿರ್ಲಕ್ಷ್ಯಕ್ಕೆ ಒಳಗಾದ ವೈಕಲ್ಯವುಳ್ಳ ಮಕ್ಕಳ ವಿಶಾಲ ಹಿತಾಸಕ್ತಿಯಿಂದ ಯಶಸ್ವಿ ಅನುಷ್ಠಾನಕ್ಕೆ ನಿರ್ಣಾಯಕ. ರಾಷ್ಟ್ರೀಯ ಶಿಕ್ಷಕರ ವೃತ್ತಿ ಗುಣಮಟ್ಟ (National Professional Standards for Teachers -NPST)ದಲ್ಲಿ ನಿಗದಿಪಡಿಸಿದ ಹೊಸ ಮಾರ್ಗಸೂಚಿಗಳ ಅಡಿಯಲ್ಲಿ ಶಿಕ್ಷಕರನ್ನು ಬಿಎಡ್ ಕಾರ್ಯಕ್ರಮದ ವಿವಿಧ ವಿಭಾಗಗಳಲ್ಲಿ ತಯಾರಿ ಮಾಡಲಾಗುತ್ತದೆ, ಇದರಲ್ಲಿ ವಿಶೇಷ ಶಿಕ್ಷಣ ಬೋಧನೆ ಕೂಡ ಸೇರಿದೆ.

**ತಜ್ಞ ಶಿಕ್ಷಕರು**

ಶಾಲಾ ಶಿಕ್ಷಣದ ಕೆಲವು ವಿಭಾಗಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ವಿಶೇಷ ಶಿಕ್ಷಕರ ತುರ್ತು ಅವಶ್ಯಕತೆಯಿದೆ. ಕೆಲವು ಉದಾಹರಣೆಗಳೆಂದರೆ, ಮಾಧ್ಯಮಿಕ ಮತ್ತು ಸೆಕೆಂಡರಿ ಹಂತಗಳಲ್ಲಿ ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಬೋಧನೆ ಮಾಡಲು ಒಂದು ವಿಷಯದಲ್ಲಿ ಹೆಚ್ಚುಆಸಕ್ತಿ ಮತ್ತು ಪ್ರತಿಭೆಹೊಂದಿರುವ ವೈಕಲ್ಯವುಳ್ಳಮಕ್ಕಳ ಶಿಕ್ಷಣ ಮತ್ತು ನಿರ್ದಿಷ್ಟ ಕಲಿಕಾ ತೊಂದರೆಕುರಿತ ಶಿಕ್ಷಣದ ವಿಷಯದಲ್ಲಿ ತಜ್ಞರ ಅವಶ್ಯಕತೆ ಇದೆ.

ಅಂಥ ಶಿಕ್ಷಕರಿಗೆ ವಿಷಯ–ಬೋಧನೆ ಜ್ಞಾನ ಮತ್ತು ವಿಷಯಕ್ಕೆ ಸಂಬಂಧಪಟ್ಟ ಶಿಕ್ಷಣ ಗುರಿಗಳ ತಿಳುವಳಿಕೆ ಇದ್ದರಷ್ಟೆ ಸಾಲದು, ವೈಕಲ್ಯವುಳ್ಳ ಮಕ್ಕಳ ವಿಶೇಷ ಅವಶ್ಯಕತೆಗಳ ತಿಳುವಳಿಕೆ ಮತ್ತು ಅವರಿಗೆ ಬೋಧಿಸಲು ಅಗತ್ಯವಾದ ಕೌಶಲ್ಯಗಳನ್ನು ಅವರು ಹೊಂದಿರಬೇಕು.

ಸಾಮಾನ್ಯವಾಗಿ ವಿಶೇಷಶಿಕ್ಷಕರು ಪ್ರಾಥಮಿಕ ಶಾಲೆಯಲ್ಲಿ ಬೋಧಿಸುವ ವಿಷಯಗಳೆಲ್ಲದರಲ್ಲಿ ಕೆಲಸಮಾಡುವ ಸಾಕಷ್ಟು ಸಾಮರ್ಥ್ಯವನ್ನು ಹೊಂದಿರುತ್ತಾರೆ ಮತ್ತು ಮಾಧ್ಯಮಿಕ ಅಥವಾ ಸೆಕೆಂಡರಿ ಹಂತದಲ್ಲಿ ಒಬ್ಬ ವಿಷಯ ಶಿಕ್ಷಕರಿಗೆ ಪೂರಕವಾಗಿ ನೆರವು ನೀಡಬಲ್ಲರು.ಆದರೆ ವಿಶೇಷ ಶಿಕ್ಷಕರಿಗೆ ಶಾಲೆಯ ಉನ್ನತ ಹಂತಗಳಲ್ಲಿ ಒಂದು ವಿಷಯವನ್ನು ಬೋಧನೆ ಮಾಡಲು ಸಾಕಷ್ಟು ಜ್ಞಾನವಿಲ್ಲದಿರಬಹುದು. ಅಂತೆಯೇ, ಅಗತ್ಯವಿರುವ ಅನುಭವವನ್ನುಗಳಿಸಿದ ಬಳಿಕವೇ ನಿರ್ದಿಷ್ಟ ವಿಷಯದಲ್ಲಿ ಅಪ್ರತಿಮ ಆಸಕ್ತಿಗಳುಳ್ಳ ಮತ್ತು ಪ್ರತಿಭೆಗಳಿರುವ ಮಕ್ಕಳ ಬೋಧನೆಗೆ ಶಿಕ್ಷಕರು ಸೂಕ್ತವಾಗಿ ಹಾಗೂ ಉತ್ತಮವಾಗಿ ತಯಾರಾಗುತ್ತಾರೆ. ಸೇವಾ ಪೂರ್ವ ಶಿಕ್ಷಕ ತರಬೇತಿ ಮುಗಿದ ನಂತರ ಅಂತಹ ಕ್ಷೇತ್ರಗಳನ್ನು ಸಾಮಾನ್ಯ ಶಿಕ್ಷಕರಿಗೆ ದ್ವಿತೀಯ ಮಟ್ಟದ ತಜ್ಞತೆಯಾಗಿ ಅಭಿವೃದ್ಧಿ ಪಡಿಸಬಹುದು. ಇವುಗಳನ್ನು ಕೆಲಸದ ಅವಧಿಯಲ್ಲಿ ನೀಡುವ ತರಬೇತಿಯಾಗಿ ಪೂರ್ಣಾವಧಿ ಅಥವಾ ಅರೆಕಾಲಿಕ ಅವಧಿ ಅಥವಾ ಸಮ್ಮಿಶ್ರ ಬೋಧನಾ ಕೋರ್ಸಿನಲ್ಲಿ ಹೇಳಿಕೊಡಬೇಕು.

**ಕೊನೆಯ ಮಾತು**

ಆಯ್ಕೆ–ಆಧಾರಿತ ಕ್ರೆಡಿಟ್ ವ್ಯವಸ್ಥೆ, ಬದಲಾವಣೆ ಮಾಡಿಕೊಳ್ಳಲು ಆಯ್ಕೆಯ ಅವಕಾಶ ಮತ್ತು ಹೊಸ ವಿಷಯ ಸಂಯೋಜನೆಗಳಿಗೆ ಅವಕಾಶವಿರುವ ಬಹು ವಿದ್ಯಾ ವಿಭಾಗಗಳನ್ನುಳ್ಳ ವಿಶ್ವವಿದ್ಯಾಲಯಗಳ ಭವಿಷ್ಯದ ವಿಭಾಗಗಳನ್ನು ನಾವು ಹೇಗೆ ನೋಡುತ್ತೇವೆ? ಎಂಬುದು ಸವಾಲು. ಕುರುಕ್ಷೇತ್ರ ವಿಶ್ವವಿದ್ಯಾಲಯ ಮತ್ತು ಎನ್‌ಸಿಇಆರ್‌ಟಿಯ ಆರ್‌ಸಿಇ/

ಆರ್‌ಐಎಸ್‌ಗಳು ಭಾಷೆಗಳು, ಮಾನವಿಕಗಳು, ವಿಜ್ಞಾನಗಳು ಮತ್ತು ವಾಣಿಜ್ಯ ವಿಷಯಗಳಲ್ಲಿ ಪರಿಣಿತಿ ಜೊತೆಗೆ ನಾಲ್ಕು ವರ್ಷಗಳಸಮಗ್ರ ವಿಶೇಷಶಿಕ್ಷಕ ಶಿಕ್ಷಣ ಕಾರ್ಯಕ್ರಮವನ್ನು ನಡೆಸಿವೆ. ಒಂದು ಹಂತದಲ್ಲಿ, ಬೇಸಾಯ ಮತ್ತು ಇತರ ವೃತ್ತಿ ವಿಷಯ ಆಯ್ಕೆಗಳನ್ನು ಸಹಬಿ.ಎಡ್ ಮತ್ತು ಪ್ರಾಥಮಿಕ ಎಂ.ಎಡ್‌ನಲ್ಲಿ ಒದಗಿಸಲಾಗಿತ್ತು. ದುರದೃಷ್ಟವಶಾತ್, ಈ ಸಂಸ್ಥೆಗಳಿಗೆ ಪದವಿಗಳನ್ನು ನೀಡುವ ಮತ್ತು ತಮ್ಮ ರಾಜ್ಯಗಳ ವಿಶ್ವವಿದ್ಯಾಲಯುಗಳಿಗೆ ಸಂಯೋಜಿತ ಕಾಲೇಜುಗಳಾಗಿ ಮುಂದುವರಿಯುವ ಅವಕಾಶ ಎಂದೂ ಸಿಗಲಿಲ್ಲ. ನಾವು ಈ ಅನುಭವಗಳಿಂದ ಕಲಿಯಬೇಕು. ಏಕೆಂದರೆ ಇದು ನಮ್ಮ ಇಂದಿನ ನಿರ್ಧಾರಗಳು ಯಾರ ಮೇಲೆ ಪ್ರಭಾವ ಬೀರುತ್ತದೆಯೋ ಆ ನಮ್ಮ ಮುಂದಿನ ಪೀಳಿಗೆಗೆ ನಾವು ಉತ್ತರದಾಯಿಗಳಾಗಿದ್ದೇವೆ.

ನೀತಿ–ನಿರೂಪಕರು ಮತ್ತು ಆಡಳಿತಗಾರರು ಈ ಸಮಸ್ಯೆಗಳ ಬಗ್ಗೆ ಹಿಡಿತ ಸಾಧಿಸಬೇಕೆಂದುನಿರಂತರ ಪ್ರಯತ್ನಿಸುತ್ತಿರುವಾಗ ಈ ಕ್ಷಣದಲ್ಲೂ ವಿಶೇಷ ಅಗತ್ಯವುಳ್ಳ ಮಕ್ಕಳ ಪರವಾಗಿ ನಾವು ಮುಂದುವರೆಯ ಬೇಕಾಗಿರುವುದು ನಮ್ಮ ಅಗತ್ಯವಾಗಿದೆ. ಈ ಕೆಳಕಂಡ ಆದರ್ಶಗಳನ್ನು ಪಾಲಿಸೋಣ ಮತ್ತು ವಿಶೇಷ ಅಗತ್ಯವುಳ್ಳ ಮಕ್ಕಳ ಉದ್ದೇಶದ ಪರವಾಗಿ ಶ್ರಮಿಸೋಣ:4

1. ಜೀವನಪರ್ಯಂತ ಕಲಿಯುವವರಾಗಿರಿ ಮತ್ತು ನಮ್ಮ ವಿದ್ಯಾರ್ಥಿಗಳಿಗೂ ಇದೇ ರೀತಿ ಕಲಿಯಲು ಸ್ಫೂರ್ತಿ ನೀಡಿ.
2. ಕಲಿಕೆ ಮತ್ತು ಬೋಧನೆಯು ನಿರಂತರ ಮತ್ತು ಸಮೃದ್ಧ–ಗೊಳಿಸುವ ಪ್ರಕ್ರಿಯೆಯಾಗಿದ್ದು, ತಪಾಸಣಾ ಸಾಮಗ್ರಿಗಳಾಗಿ, ನಿರಂತರ ಮತ್ತು ಸಮಗ್ರ ಮೌಲ್ಯ–ಮಾಪನ ಮತ್ತು ಪರೀಕ್ಷೆಗಳನ್ನಿಟ್ಟುಕೊಂಡು ಕಲಿಕೆಯ ಫಲಿತಾಂಶಗಳಂತಹ ಇತ್ತೀಚಿನ ಬೆಳವಣಿಗೆಗಳೊಂದಿಗೆ ಸಂಪರ್ಕದಲ್ಲಿರಿ,
3. ಎಲ್ಲಾ ಮಕ್ಕಳಿಗೆ ಸಬಲೀಕರಣ ಪ್ರಕ್ರಿಯೆಯಾಗಿ ಸಾರ್ವತ್ರಿಕ ಕಲಿಕಾ ವಿನ್ಯಾಸ / ಯೂನಿವರ್ಸಲ್ ಡಿಸೈನ್ ಫಾರ್ ಲರ್ನಿಂಗ್ (ಯುಡಿಎಲ್) ಅನ್ನು ರಚಿಸುವ ಬಗ್ಗೆ ಪರಿಗಣಿಸಿ.
4. ಪ್ರತಿಯೊಬ್ಬರೂ ಜವಾಬ್ದಾರಿಯುತ ನಾಗರಿಕರೆಂದು ನಂಬಿ, ಗುರುತಿಸಿ ಮತ್ತು ಗೌರವಿಸಿ ಹಾಗು ವಿಶೇಷ ಅಗತ್ಯವುಳ್ಳ ಮಕ್ಕಳು ಸಹ ನಮ್ಮಲ್ಲಿ ಒಬ್ಬರೆಂದು ಭಾವಿಸಿ.
5. ನಿಮ್ಮ ಸಾಮರ್ಥ್ಯಗಳು ಮತ್ತು ದೌರ್ಬಲ್ಯಗಳನ್ನು ಅರಿತು ಬದಲಾವಣೆಯ ಪ್ರೇರಕರಾಗಿ, ಅವಕಾಶಗಳನ್ನು ಹುಡುಕುವವರಾಗಿ, ಸ್ಪಂದಿಸುವವರಾಗಿ. ಆದರೆ ಕಟ್ಟುಕಟ್ಟಳೆ ಹೇರುವವರಾಗದಿರಿ.

[i] Birrell, Ian. (23 April 2019). *Greta Thunberg teaches us about autism as much as climate change*.
https://www.theguardian.com/commentisfree/2019/apr/23/greta-thunberg-autism/
accessed on 21 September 2019.

[ii] Smith, M. K. (2015). What is education? A definition and discussion. *The encyclopaedia of informal education*. [http://infed.org/mobi/what-is-education-a-definition-and-discussion/. Retrieved 20 September 2019.

[iii] Portions of this writing are also from Author's chapter on Education of Persons with Disabilities in Indian Education: A developmental Discourse by Mukhopadhyay Marmar and Parhar Madhu (Eds), Shipra Publications, 2015.

[iv] Will advise all readers to read books by Shivani Gupta, No Looking Back, Rupa Publications Pvt. Ltd and Malini Chib, One Little Finger, Sage India.

[v] http://seshagun.gov.in/sites/default/files/2019-05/disabilitiesAct2016.pdf/accessed 22 September 2019.

[vi] Adapted from Mukhopadhyay, Sudesh, Making the Difference: Our Roles and Responsibilities. In Verma Preeti et.al. (eds.) (2019); *Be the Difference: Equality and Equity in Education*, Mumbai; Department of Special Education, SNDT.PP332-333.




**ಡಾ. ಸುದೇಶ್ ಮುಖೋಪಾಧ್ಯಾಯರವರು** ಆರ್‌ಸಿಐನ ಮಾಜಿ ಅಧ್ಯಕ್ಷರು ಮತ್ತು ಈಗ ಎನ್‌ಸಿಟಿಇನ ಸ್ಥಾಯಿ ಸಮಿತಿಯ ಸದಸ್ಯರಾಗಿದ್ದಾರೆ. ಅವರು ವಿಶೇಷ ಶಿಕ್ಷಣದಲ್ಲಿ ಲಂಡನ್ ಯೂನಿವರ್ಸಿಟಿ ಇನ್ಸ್‌ಟಿಟ್ಯೂಟ್ ಆಫ್ ಎಜುಕೇಷನ್‌ನ ಅಸೋಸಿಯೇಟ್ ಆಗಿದ್ದಾರೆ ಮತ್ತು ಕೆನಡಾದ ಮ್ಯಾನಿಟೋಬಾ ವಿಶ್ವವಿದ್ಯಾಲಯ ಮತ್ತು ಆಸ್ಟ್ರೇಲಿಯಾದ ಸಿಡ್ನಿಯ ಮೊನಾಶ್ ವಿಶ್ವವಿದ್ಯಾಲಯದ ವಿಸಿಟ್‌ಂಗ್ ಫೆಲೊ ಆಗಿದ್ದಾರೆ. ಅವರನ್ನು drsudesh.mukhopadhyay@gamil.com ಮೂಲಕ ಸಂಪರ್ಕಿಸಬಹುದು.

ಅನುವಾದ: **ಹೇಮಾದೇವಿ ಬಿ ಎನ್** । ಪರಿಶೀಲನೆ: **ಜೈಕುಮಾರ್ ಮರಿಯಪ್ಪ**

# ಸವಾಲುಗಳ ನಡುವೆಯೂ ಘನತೆ

## ಒಡಹುಟ್ಟಿದವಳ ಮಾತುಗಳು

ಪ್ರೇಮಾ ರಘುನಾಥ್

ಹಲವು ವರ್ಷಗಳ ಕಾಲ ಮನೆಯಲ್ಲಿ ನಾನೇ ಚಿಕ್ಕ ಮಗಳಾಗಿದ್ದವಳು ಅಕ್ಕ ಎಂದು ಆದಾಗ ನನ್ನ ಮೊದಲ ಪ್ರತಿಕ್ರಿಯೆ ಸಂಭ್ರಮ ಮತ್ತು ಹೆಮ್ಮೆಯಿಂದ ಕೂಡಿತ್ತು. ಯಾರಿಗಾದರೂ ಆದೇಶಗಳನ್ನು ನೀಡುವ ಮತ್ತು ಅವುಗಳನ್ನು ಯಾರಾದರೂ ಪಾಲಿಸುವಂತೆ ಮಾಡುವ ಅವಕಾಶ ಕಟ್ಟಕಡೆಗೂ ಸಿಕ್ಕಿತಲ್ಲ ಎಂಬ ತೃಪ್ತ ಭಾವನೆ ಅದಾಗಿತ್ತು ಎಂಬುದನ್ನು ಒಪ್ಪಿಕೊಳ್ಳಲೇಬೇಕು.

ಆದರೆ ಸಮಯ ಕಳೆದಂತೆ ಅದು ನಾನು ಅಂದುಕೊಂಡಂತೆ ಆಗಲಿಲ್ಲ. ನನ್ನ ತಂಗಿಗೆ ಸೆರೆಬ್ರಲ್ ಪಾಲ್ಸಿ (Cerebral Palsy -CP) ಇದೆಎಂದು ವೈದ್ಯರು ಪತ್ತೆ ಮಾಡಿದರು. ಇದರ ಪರಿಣಾಮವಾಗಿ ಕುಟುಂಬದಲ್ಲಿ ಉಂಟಾದ ದಿಗ್ಭ್ರಾಂತಿ, ಗೊಂದಲ ಮತ್ತು ತಲ್ಲಣಗಳು ತಗ್ಗಲು ಕೆಲವು ತಿಂಗಳುಗಳೇ ಬೇಕಾದವು. ಸಹಜವಾಗಿ ನನ್ನ ಅಪ್ಪ–ಅಮ್ಮ ಬಹಳ ಚಿಂತಿತರಾಗಿದ್ದರು. ಏನು ಮಾಡಬೇಕು ಎಂದು ದಾರಿಕಾಣದಾಗಿದ್ದರು; ಏಕೆಂದರೆ ಅದು ಇಂತಹುದೊಂದು ಸ್ಥಿತಿಯ ಬಗ್ಗೆ ಹೆಚ್ಚೇನೂ ಗೊತ್ತಿರದಿದ್ದ ಕಾಲ; ಸೆರೆಬ್ರಲ್‌ಪಾಲ್ಸಿ ಬರುಬರುತ್ತಾ ಚಲನೆ, ಮಾತು ಮತ್ತು ಬೆಳವಣಿಗೆ ಸೇರಿದಂತೆ ಅನೇಕ ವಿಷಯಗಳಲ್ಲಿ ಅಶಕ್ತತೆಗಳು ಉಂಟಾಗುವಂತೆ ಮಾಡುತ್ತಿತ್ತು. ದೈಹಿಕವಾಗಿ ಸಮರ್ಥವಲ್ಲದ ಮಗುವನ್ನು ಹೊಂದಿರುವುದು ಎಂದರೆ ಒಂದು ಸುಸಂಸ್ಕೃತ ರೀತಿಯ ಸಾಮಾಜಿಕ ಬಹಿಷ್ಕಾರಕ್ಕೆ ಒಳಗಾದಂತೆ. ಎಲ್ಲರೂ ನಿಮಗೆ ಸಹಾನುಭೂತಿ ವ್ಯಕ್ತಪಡಿಸುತ್ತಾರೆ ಮತ್ತು ಎಲ್ಲರೂ ಅರ್ಥ ಮಾಡಿಕೊಂಡಂತೆ ಕಾಣಿಸುತ್ತಾರೆ. ಆದರೆ, ವಾಸ್ತವವಾಗಿ ಯಾರೂ ಅರ್ಥ ಮಾಡಿಕೊಂಡಿರುವುದಿಲ್ಲ! ಸಾಮಾಜಿಕ ಕಾರ್ಯಕ್ರಮಗಳಿಗೆ ಬರುವ ಆಹ್ವಾನಗಳೂ ಕಡಿಮೆಯಾಗುತ್ತಾ ಹೋದವು. ನಾವು ಮಾತ್ರ ಗೀತಾಳನ್ನು (ನನ್ನ ತಂಗಿ) ಯಾರಕಣ್ಣಿಗೂ ಕಾಣದಂತೆ ಮುಚ್ಚಿಡಲು ಹೋಗದೆ, ಕುಟುಂಬದ ಅತ್ಯಂತ ಸಕ್ರಿಯ ಸದಸ್ಯಳಾಗಿ ಇರುವಂತೆ ನೋಡಿಕೊಳ್ಳಲು ನಿರ್ಧರಿಸಿದ್ದೆವು. ಆದರೆ, ನಮ್ಮನ್ನು ಕಂಡರೆ ಮುಜುಗುರಪಡುತ್ತಿದ್ದ ಪರಿಸ್ಥಿತಿ ನಿರ್ಮಾಣವಾಯಿತು. ನಾನು ಇದರಿಂದ ಉಂಟಾದ ಸಮಸ್ಯೆಗಳನ್ನು ಸ್ಥೂಲವಾಗಿ ಚಿತ್ರಿಸಲು ಪ್ರಯತ್ನಿಸುತ್ತೇನೆ. ಅಂದಿನ ದಿನಕ್ಕೂ ಇಂದಿಗೂ ಎಲ್ಲದರಲ್ಲೂ ಅಗಾಧ ಬದಲಾವಣೆಗಳು ಆಗಿವೆ. ಆದರೆ, ಮನುಷ್ಯರ ಪ್ರತಿಕ್ರಿಯೆ ಮಾತ್ರ ಕಿಂಚಿತ್ತೂ ಬದಲಾಗಿಲ್ಲ. ಈ ಲೇಖನವನ್ನು ಓದುತ್ತಿರುವರಲ್ಲಿ ಬಹಳಷ್ಟು ಜನರು ಇಲ್ಲಿ ಹೇಳಿರುವ ಕೆಲವು ಅಂಶಗಳು ಈಗಲೂ ಪ್ರಸ್ತುತ ಎಂಬುದನ್ನು ಗುರುತಿಸುತ್ತಾರೆ ಎಂದು ನಾನು ಭಾವಿಸುತ್ತೇನೆ.

**ಕಳೆದುಹೋದ ಬಾಲ್ಯ**

ಇಂಥ ಕುಟುಂಬದ ಇತರ ಮಕ್ಕಳು ರಾತ್ರಿ ಬೆಳಗಾಗುವುದರೊಳಗೆ ಕಡೆ ಪಕ್ಷ ಹೊರನೋಟಕ್ಕಾದರೂ ಪ್ರಬುದ್ಧರಾಗಬೇಕಾಗುತ್ತದೆ. ದೈಹಿಕವಾಗಿ ಅಸಮರ್ಥವಾಗಿರುವ ಮಗುವನ್ನು ಹೊಂದಿದಾಗ ಅನಿವಾರ್ಯವಾಗಿ ಮಾಡಿಕೊಳ್ಳಬೇಕಾದ ಅಗಾಧ ಬದಲಾವಣೆಯಲ್ಲಿ ನನ್ನ ಅಪ್ಪ–ಅಮ್ಮ ಕಳೆದುಹೋಗಿದ್ದರು. ಅನೇಕ ಅಗತ್ಯಗಳ ಸುತ್ತ ಎಲ್ಲವೂ ಸುತ್ತುತ್ತಿತ್ತು. ಸಾಮಾನ್ಯ ದಿನಚರಿಯು ಫಿಸಿಯೋಥೆರಪಿ, ಸ್ಪೀಚ್ ಥೆರಪಿ ಮತ್ತಿತರ ಅನೇಕ ಥೆರಪಿಗಳಿಗೆ ಅವಕಾಶ ಮಾಡಿಕೊಡಬೇಕಿತ್ತು. ಈ ಬಗ್ಗೆ ಹೆತ್ತವರು ಲವಲವಿಕೆಯಿಂದ ಭಾಗವಹಿಸದೇ ಹೋದರೆ ಒಡಹುಟ್ಟಿದವರು ಇಷ್ಟೊಂದು ಚಿಕ್ಕ ವಯಸ್ಸಿನಲ್ಲಿ ಹೊರಲಾಗದ ಜವಾಬ್ದಾರಿಗಳನ್ನು ಹೊರಬೇಕಾಗಿ ಬರುತ್ತದೆ. ಪರಿಣಾಮವಾಗಿ ಅವರು ತಮ್ಮ ಸ್ನೇಹಿತರ ಬಳಗದಿಂದ ಹೊರಬರಬೇಕಾಗುತ್ತದೆ.

ಎರಡನೆಯದಾಗಿ, ದೈಹಿಕ ವೈಕಲ್ಯವುಳ್ಳ ಮಗುವಿನ ರಕ್ಷಣೆಯ ಉದ್ದೇಶದಿಂದ ಒಡಹುಟ್ಟಿದವರ ಅನೇಕ ಸಾಧನೆಗಳನ್ನು ಅಷ್ಟೇನೂ ಮಹತ್ವವಲ್ಲ ಎಂಬಂತೆ ಪರಿಗಣಿಸಲಾಗುತ್ತಿತ್ತು. ಇಂದು ಅನೇಕ ಸಂಗತಿಗಳು ಉತ್ತಮವಾಗಿ ಬದಲಾವಣೆ ಹೊಂದಿದ್ದರೂ ಮತ್ತು ವ್ಯಾಖ್ಯಾನಗಳನ್ನು ಬದಲಾಯಿಸಿದ್ದರೂ, ಒಡಹುಟ್ಟಿದ ಕಿರಿಯ ಮತ್ತು ಹಿರಿಯ ಮಕ್ಕಳಿಗೆ ಅವರು ತಮ್ಮ ಪೂರ್ಣ ಸಾಮರ್ಥ್ಯಕ್ಕೆ ಬೆಳೆಯಲು ಬೇಕಾದಷ್ಟು ಗಮನವನ್ನು ಹೆತ್ತವರು ನೀಡಬೇಕಾದುದು ಅತ್ಯಗತ್ಯ ಎಂದು ನನಗೆ ಇಂದಿಗೂ ಅನಿಸುತ್ತದೆ.

ಮೂರನೆಯದಾಗಿ, ಈ ಕೊರತೆಗಳನ್ನು ಎಂದಿಗೂ ತುಂಬಿಕೊಡಲು ಸಾಧ್ಯವಿಲ್ಲ. ಒಮ್ಮಿಂದೊಮ್ಮೆಲೇ ಈ ಪ್ರಬುದ್ಧತೆಯನ್ನು ನನ್ನ ಮೇಲೆ ಹೇರಿದ್ದರಿಂದಾಗಿ ಆದ ಪರಿಣಾಮಗಳನ್ನು ಆತಂಕ, ಇತರರು ಸತ್ತು ತಾನೊಬ್ಬಳೇ ಉಳಿದಾಗ ಆಗುವಂತಹ ಹಳಹಳಿಕೆಯ ಭಾವ ಮತ್ತು ಗೊಂದಲಗಳನ್ನು ನಾನು ಗುರುತಿಸಿದ್ದೇನೆ.

**ಹೆಚ್ಚಿದ ಪರಾನುಭೂತಿ**

ಇಂತಹ ಪರಿಸ್ಥಿತಿಯಲ್ಲಿ ಇದ್ದು ಕೊಂಡೇ ಬೆಳೆಯುವುದರಿಂದ ಸಿಗುವ ಉತ್ತಮ ಅನುಭವ ಇನ್ನೂ ಹೆಚ್ಚು ಸಹನ ಶೀಲವಾದುದು. ಜೀವನ ಅನೇಕ ಅಚ್ಚರಿಗಳನ್ನು ನಮ್ಮ ಮುಂದೆ ತಂದಿಡುತ್ತದೆ ಎಂಬ ಪಾಠವನ್ನು ಚಿಕ್ಕ ವಯಸ್ಸಿನಲ್ಲಿಯೇ ಕಲಿಯುವಂತಾಯಿತು. ಚಿಕ್ಕ ವಯಸ್ಸಿನಲ್ಲೇ ಮೈಗೂಡಿದ ಜವಾಬ್ದಾರಿ ಪ್ರಜ್ಞೆ, ನಮ್ಮಲ್ಲಿ ನಾಯಕತ್ವ ಸ್ವೀಕರಿಸುವ ಗುಣ ಹಾಗು ಸ್ವಾವಲಂಬನೆಯ ಪ್ರಜ್ಞೆಯಾಗಿ ಬೆಳೆಯಬಲ್ಲದು.

ನನ್ನ ಪ್ರಕರಣವನ್ನೇ ತೆಗೆದುಕೊಂಡರೆ ವ್ಯಕ್ತಿವ್ಯಕ್ತಿಗಳ ನಡುವಿನ ಭಿನ್ನತೆಯನ್ನು ಮೊದಲಿಗಿಂತಲೂ ಹೆಚ್ಚಿಗೆ ಸಹಿಸಿಕೊಳ್ಳುವುದನ್ನು ಕಲಿಸಿತು ಎಂದು ಭಾವಿಸುತ್ತೇನೆ. ನಾವು ಇತರರೊಡನೆ ಚೆನ್ನಾಗಿ ಹೊಂದಿಕೊಂಡು ಹೋಗಬೇಕಾದರೆ ಎಲ್ಲರೂ ಒಂದೇ ರೀತಿಯಲ್ಲಿ ಇರಬೇಕು ಎಂದು ನನಗನಿಸುವುದಿಲ್ಲ. ಒಂದು ಹಂತದಲ್ಲಿ ಯೋಚಿಸುವುದಾದರೆ ಗೆಳೆಯರನ್ನು ಮಾಡಿಕೊಳ್ಳುವುದು ತೀರಾ ಸುಲಭ, ಇನ್ನೊಂದು ರೀತಿಯಲ್ಲಿ ಅತ್ಯಂತ ಕಷ್ಟ. ಒಂದು ಹಂತದಲ್ಲಿ, ಗೆಳೆತನದ ಅಗ್ನಿ ಪರೀಕ್ಷೆ ಹೇಗಿತ್ತೆಂದರೆ ಇನ್ನೊಬ್ಬ ವ್ಯಕ್ತಿ ಗೀತಾಳನ್ನು ಹೇಗೆ ಸ್ವೀಕರಿಸುತ್ತಾನೆಯೋ ಇಲ್ಲವೋ ಎಂಬುದನ್ನು ಅದು ಅವಲಂಭಿಸಿತ್ತು. ಅವರು ಆಕೆಯನ್ನು ತಮ್ಮಲ್ಲಿ ಒಬ್ಬಳಂತೆ ಸೇರಿಸಿಕೊಂಡರೆ ಅವರು ಸರಿ ಎಂದುಕೊಳ್ಳುತ್ತಿದ್ದೆ. ಇಲ್ಲದೇ ಹೋದರೆ ಅವರೊಡನೆ ಜಗಳ ಉಂಟಾಗಿ ಅದು ಕೆಲವೊಮ್ಮೆ ಕಣ್ಣೀರಿನಲ್ಲಿ ಕೊನೆಗೊಳ್ಳುತ್ತಿತ್ತು.

**ಅಪಾರ ಪ್ರೀತಿ**

ದೈಹಿಕ ವಿಕಲತೆಯುಳ್ಳ ವ್ಯಕ್ತಿಗೆ ಸಹೋದರಿಯಾಗಿರುವುದರ ಅನುಭವದ ಮುಖ್ಯಭಾಗವೊಂದರ ಬಗ್ಗೆ ನಾನಿಲ್ಲಿ ಹೇಳಲೇಬೇಕು. ಇಲ್ಲಿ ಅಪಾರ ಪ್ರೀತಿ, ಅಕ್ಕರೆ ಮತ್ತು ಆರೈಕೆಯ ಪ್ರಜ್ಞೆ ಬಹಳವಾಗಿ ಇರುತ್ತದೆ. ಈ ಅನುಭವ ತುಂಬಾ ಒಳ್ಳೆಯದೇ. ಸಾಮಾನ್ಯವಾಗಿ ಈ ಸುಂದರ ಅನುಭವಪಡೆಯುವುದಕ್ಕೆ ಜನರು ತಮ್ಮದೇ ಮಕ್ಕಳು ಹುಟ್ಟುವವರೆಗೂ ಕಾಯಬೇಕಾಗುತ್ತದೆ. ಆದರೆ ಒಂದು ವಿಶೇಷ ಜನವರ್ಗವಾದ ನಾವು ಅದನ್ನು ಇನ್ನೂ ಮುಂಚೆಯೇ ಅನುಭವಿಸುತ್ತೇವೆ. ನಾನು ಈ ಹಿಂದೆ ಹೇಳಿದಂತೆ ಬಾಲ್ಯ ಕಳೆದು ಹೋಗುವುದರ ಜೊತೆಗೆ ಈ ಅನುಭವವೂ ಕೂಡಿ ಬರುತ್ತದೆ, ಆದರೂ ಇದು ಪ್ರಯೋಜನಕಾರಿ.

**ಹೆತ್ತವರು ಏನು ಮಾಡಬಹುದು?**

ದೈಹಿಕ ವಿಕಲತೆಯುಳ್ಳ ಮಗುವನ್ನು ಹೊಂದಿರುವಲ್ಲಿ ಕಂಡುಬರುವ ಇನ್ನೊಂದು ದೊಡ್ಡ ಅಂಶ ಏನೆಂದರೆ ಅದು ತಂದೆತಾಯಿ, ಒಡಹುಟ್ಟಿದವರು, ಅಜ್ಜಿ–ತಾತ ಮತ್ತು ಸ್ವಲ್ಪಮಟ್ಟಿಗಾದರೂ ವಿಸ್ತೃತ ಕುಟುಂಬದ ಇತರ ಎಲ್ಲರ ಜೀವನದ ಮೇಲೂ ಪರಿಣಾಮ ಬೀರುತ್ತದೆ. ತಂದೆತಾಯಿಗಳಿಗಂತೂ ಅನೇಕ ವಿಷಯಗಳು ಅನುಭವಕ್ಕೆ ಬರುತ್ತವೆ; ವಿಷಾದ, ನಿರಾಕರಣೆ, ಜವಾಬ್ದಾರಿ ಹೊರದೇ ಇರುವುದು. ಇದು ಹೋಗುವಂತಹ ಪರಿಸ್ಥಿತಿಯಲ್ಲ ಎಂಬ ಅರಿವನ್ನು ಸದಾ ಇಟ್ಟುಕೊಂಡು ಇವನ್ನೆಲ್ಲಾ ಅನುಭವಿಸುವುದು. ಹೀಗಿದ್ದರೂ ದಿನನಿತ್ಯದ ಬದುಕನ್ನು ಬದುಕಲೇ ಬೇಕು–ಕೆಲಸಕ್ಕೆ ಹೋಗುವುದು, ಮನೆಯನ್ನು ನಿರ್ವಹಿಸುವುದು, ಸಾಮಾಜಿಕ ಸಂಪರ್ಕವನ್ನು ಕಾಯ್ದುಕೊಳ್ಳುವುದು, ಇತರ ಜವಾಬ್ದಾರಿಗಳನ್ನು ನಿಭಾಯಿಸುವುದು, ಇದರ ಜೊತೆಗೇ ಹಿರಿಯ ಅಥವಾ ಕಿರಿಯ ಇನ್ನೊಂದು ಮಗುವಿಗಾಗಿ ಸಮಯ ಮತ್ತು ಶಕ್ತಿಯನ್ನು ಕಂಡು ಕೊಳ್ಳುವುದು. ಹೀಗೆ ಪಟ್ಟಿಗಳು ಬೆಳೆಯುತ್ತವೆ. ಇವೆಲ್ಲವೂ ಸವಾಲಿನ ಕೆಲಸಗಳೇ ಆಗಿವೆ. ಇಲ್ಲಿ ಇನ್ನೊಂದು ವಿಷಯವಿದೆ ಅವರ ಇನ್ನೊಂದು ಮಗು (ಅಥವಾ ಮಕ್ಕಳು) ಸಹ ಹೊಸತೊಂದು ಬಗೆಯ ವಾಡಿಕೆಗೆ  ಹೊಂದಿಕೊಳ್ಳ ಬೇಕಾಗುತ್ತದೆ. ಶ್ರೇಯಾಂಕಗಳು ಕುಸಿಯಬಹುದು (ಅವರಿಂದ ನನಗೆ ಹೀಗಾಯಿತು), ರಂಪಾಟಗಳು ನಡೆಯಬಹುದು, ಹೊಸ ಹೊಸ ರೀತಿಯ ವರ್ತನೆಗಳು ಕಾಣಿಸಿಕೊಳ್ಳಬಹುದು.

ಹೆತ್ತವರು ಇಲ್ಲಿ ಸಹಾಯ ಪಡೆದುಕೊಂಡು ವೈಕಲ್ಯವಿರುವ ಮಗುವಿನ ಒಡಹುಟ್ಟಿದ ಮಕ್ಕಳು ತಮ್ಮೊಂದಿಗೆ ಗುಣಮಟ್ಟದ ಸಮಯ ಕಳೆಯುವಂತೆ ಹಾಗೂ ಅವಕಾಶವನ್ನು ಪಡೆದುಕೊಳ್ಳುವಂತೆ ನೋಡಿಕೊಳ್ಳಬೇಕು. ಇದನ್ನು ಹೇಳುವುದೇನೋ ಸುಲಭ, ಆದರೆ ಮಾಡುವುದು ಕಷ್ಟ. ಆದರೆ ಹಿಂದಿನ ಅನುಭವದಿಂದ ಪಡೆದ ಜ್ಞಾನದಿಂದ ಏನೇನು ಬದಲಾಗಬೇಕು ಎಂಬುದನ್ನು ನಾನು ಕಾಣಬಲ್ಲೆ. ಅಂತಿಮವಾಗಿ ದೈಹಿಕ ವೈಕಲ್ಯಗಳುಳ್ಳ ಮಕ್ಕಳಿರುವ ತಂದೆತಾಯಿ ಸ್ವಯಂ ವಿಶೇಷ ವ್ಯಕ್ತಿತ್ವದವರಾಗುತ್ತಾರೆ ಅವರೆಗೆ ತಮ್ಮಲ್ಲಿ ಅಂತಹುದೊಂದು ಶಕ್ತಿಯಿದೆ ಎಂಬ ಅರಿವೂ ಇಲ್ಲದ ಇಬ್ಬರು ತೀರಾಸಾಮಾನ್ಯ ಮನುಷ್ಯರು (ಅಪ್ಪ–ಅಮ್ಮ) ಅಂತಹ ವೀರೋಚಿತವಾದ ಶಕ್ತಿಯನ್ನೆಲ್ಲ ಬೆಳೆಸಿಕೊಳ್ಳಲು ಆರಂಭಿಸುತ್ತಾರೆ. ಒಡಹುಟ್ಟಿದ ಮಕ್ಕಳೂ ನಿಜಕ್ಕೂ ವಿಶೇಷ ವ್ಯಕ್ತಿಗಳಾಗುತ್ತಾರೆ. ಇತರರು ಕೈಗೊಂಡ ನಿರ್ಧಾರಗಳಿಗೆ, ಅದೆಲ್ಲ ಏಕೆ ಎಂಬರಿವಿಲ್ಲದೆಯೂ ದಿಟ್ಟಬೆಂಬಲ ನೀಡಿ ತನ್ನ ಸಹೋದರ ಅಥವಾ ಸಹೋದರಿಗಾಗಿ ಏನು ಬೇಕಾದರೂ ಮಾಡಲು ಸಿದ್ಧರಿದ್ದು  ಅವರು ವಿಶೇಷ ವ್ಯಕ್ತಿಗಳಾಗುತ್ತಾರೆ.

ಈ ಕೆಲವು ಅಂಶಗಳನ್ನು ನಾನು ಗೀತಾಳಿಂದ ಕಲಿತುಕೊಂಡಿದ್ದೇನೆ. ಆಕೆಯ ಘನತೆಯ ಮತ್ತು ಆಕರ್ಷಕ ಉದಾರಗುಣ ಈ ಎಲ್ಲ ಏಳು ಬೀಳುಗಳನ್ನೂ ಮೀರಿ ನಿಲ್ಲುತ್ತಿತ್ತು. ತನ್ನ ದೈಹಿಕ ಹಾಗೂ ಭಾವನಾತ್ಮಕವಾದ ಕಠಿಣಾತಿ ಕಠಿಣ ಸವಾಲುಗಳ ನಡುವೆಯೂ ಆಕೆ ಒಂದು ಘನತೆಯನ್ನು ತೋರುತ್ತಿದ್ದಳು. ಯಾವುದೇ ವ್ಯಕ್ತಿಯ ಬಾಹ್ಯವನ್ನು ಭೇದಿಸಿ ನೋಡಿ ಅವರ ಸ್ವಭಾವ ಏನೆಂದು ತಕ್ಷಣ ಗ್ರಹಿಸಬಲ್ಲವಳಾಗಿದ್ದಳು ಮತ್ತು ನನಗೂ ಅದನ್ನು ಹೇಳುತ್ತಿದ್ದಳು. ನಾವು ಅಚ್ಚುಮೆಚ್ಚಿನ ಸಹೋದರಿಯರಾಗಿದ್ದೆವು ಮತ್ತು ಶ್ರೇಷ್ಠ ಗೆಳತಿಯರಾಗಿದ್ದೆವು.



**ಪ್ರೇಮಾ ರಘುನಾಥ್** ಅವರು ಲರ್ನಿಂಗ್‌ಕರ್ವ್‌ನ ಮುಖ್ಯ ಸಂಪಾದಕರು. ಚೆನ್ನೈನಲ್ಲಿ ಬಹಳ ವರ್ಷಗಳ ಕಾಲ ಸಿಬಿಎಸ್‌ಇ ಮತ್ತು ತರುವಾಯ ಐಬಿ ಶಾಲೆಯಲ್ಲಿ ಬೋಧನೆ ಮಾಡುತ್ತಿದ್ದ ಅವರು ಈಗ ಚೆನ್ನೈನ ಕೆಲವು ಶಾಲೆಗಳ ಸಮಿತಿಗಳಲ್ಲಿ ಸದಸ್ಯರಾಗಿದ್ದಾರೆ. ಅವರನ್ನು ಈ ಇ–ಮೇಲ್ ಮೂಲಕ ಸಂಪರ್ಕಿಸಬಹುದು. prema.raghunath@azimpremjifoundation.org

ಅನುವಾದ: **ಮಂಜುನಾಥ್ ಚಾಂದ್** । ಪರಿಶೀಲನೆ: **ಜೈಕುಮಾರ್ ಮರಿಯಪ್ಪ**




ಇವು ಇಂಗ್ಲಿಷ್ ಭಾಷೆಯ ಧ್ವನಿ ಕಾಗುಣಿತ ಸ್ಥಾನಪಲ್ಲಟ ಮಾಡಿದ (ಅಕ್ಷರಗಳು ಮತ್ತು ಧ್ವನಿಗಳನ್ನು ಮಿಶ್ರಣ ಮಾಡುವುದು) ಮತ್ತು ಅದಕ್ಕೆ ಸಂಬಂಧಿಸಿದ ಕೆಲವು ಉದಾಹರಣೆಗಳು. ಡಿಸ್ಲೆಕ್ಸಿಯಾ ಸಮಸ್ಯೆ ಇರುವ ಮಕ್ಕಳು ಇಲ್ಲಿನ ಅಕ್ಷರಗಳನ್ನು ಅದಲು ಬದಲು ಮಾಡಿ ಅವುಗಳನ್ನು ಸರಿಯಾಗಿ ಧ್ವನಿಯನುಸಾರ ಹೇಳುವಂತೆ ಮಾಡಬೇಕು.
ಕೃಪೆ: ಮದ್ರಾಸ್ ಡಿಸ್ಲೆಕ್ಸಿಯಾ ಅಸೋಸಿಯೇಷನ್, ಚೆನ್ನೈ.



# ಪ್ರವಾಸದಿಂದ ಕಲಿಯುವುದು

## ದೀಪಿಕಾ ಶಾಲೆಯ ಅನುಭವಗಳು

ಸುಮತಿ ರಾಮ್‌ಜೀ

ದೀಪಿಕಾ ಶಾಲೆಯಲ್ಲಿ ಓದುವುದು ಮತ್ತು ಬರೆಯುವುದಕ್ಕೆ ಸಂಬಂಧಿಸಿದಂತೆ ತೊಂದರೆಗಳನ್ನುಳ್ಳ ವಿದ್ಯಾರ್ಥಿಗಳಿದ್ದಾರೆ. ಕೆಲವು ಮಕ್ಕಳಿಗೆ ಕಡಿಮೆ ಸಮಯವಷ್ಟೇ ಗಮನ ನೀಡಲು ಸಾಧ್ಯವಾಗುವಂತಹ ತೊಂದರೆಯಿದ್ದರೆ, ಇನ್ನು ಕೆಲವರು ಕಲಿಕೆಯಲ್ಲಿ ನಿಧಾನಗತಿಯನ್ನು ಹೊಂದಿದವರು. ಸಾಂಪ್ರದಾಯಿಕ ಬೋಧನಾ ವಿಧಾನಗಳು ಉತ್ತಮ ಪರಿಣಾಮವನ್ನು ಬೀರದ ಕಾರಣ 2007ರಲ್ಲಿ ನಾವು ಚಿಕ್ಕದೊಂದು ಪ್ರಯತ್ನವನ್ನು ಕೈಗೊಂಡೆವು. ನಮ್ಮ ವಿದ್ಯಾರ್ಥಿಗಳಿಗೆ ಸಮಾಜ ವಿಜ್ಞಾನದ ಕಲಿಕೆ ಸುಗಮಗೊಳಿಸಲೆಂದು ಆಂಧ್ರಪ್ರದೇಶಕ್ಕೆ ಶಾಲಾ ಪ್ರವಾಸಕ್ಕೆ ಕರೆದುಕೊಂಡು ಹೋದೆವು. ಅದು ಅವರ ಮೇಲೆ ಅತ್ಯದ್ಭುತ ಪರಿಣಾಮವನ್ನು ಬೀರಿದ್ದು ಕಂಡುಬಂದಿತು. ಅದು ಅವರ ವ್ಯಕ್ತಿತ್ವದಲ್ಲಿ ಸಂಪೂರ್ಣ ಪರಿವರ್ತನೆಯನ್ನು ತಂದಿತು. ವಿದ್ಯಾರ್ಥಿಗಳು ಸಂತುಲಿತ ದೃಷ್ಟಿಕೋನಕ್ಕೆ ಅತ್ಯಂತ ಅಗತ್ಯವಾದ ಜೀವನ ಕೌಶಲ್ಯಗಳನ್ನು ಕಲಿತರು. ತಮ್ಮ ಸುತ್ತಮುತ್ತಲಿನ ಜಗತ್ತಿನ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ತೋರಿಸಿದರು. ಹಿಂದಿನ ರಾಜರುಗಳು ಕಟ್ಟಿಸಿದ ಸ್ಮಾರಕ ಹಾಗೂ ಶಿಲ್ಪಕಲೆಗಳ ವೈಭವದಿಂದ ಪ್ರೇರಿತರಾದರು. ಪಠ್ಯಪುಸ್ತಕಗಳ ಮೂಲಕ ಕಲಿಯಲು ಹೊಸ ಉತ್ಸಾಹದೊಡನೆ ಮರಳಿದರು. ಆ ಪ್ರದೇಶದ ಹೊಲಗದ್ದೆಗಳಲ್ಲಿ ನಡೆದಾಡಿದ್ದು ಅವರಿಗೆ ದೇಶದ ಭೌಗೋಳಿಕ ಸ್ವರೂಪವನ್ನು ಕುರಿತು ಪ್ರತ್ಯಕ್ಷ ಅನುಭವವನ್ನು ನೀಡಿತು.

ಆಂಧ್ರಪ್ರದೇಶಕ್ಕೆ ನೀಡಿದ ಮೊದಲ ಪ್ರವಾಸದಲ್ಲಿ ನಾವು ಕೃಷ್ಣಾ ನದಿಯ ಜಲವಿದ್ಯುತ್ ಯೋಜನೆಗಳಿಗೆ (ಶ್ರೀಶೈಲಮ್ ಮತ್ತು ನಾಗಾರ್ಜುನಸಾಗರ) ಭೇಟಿ ನೀಡಿದೆವು. ಅಲ್ಲಿ ಮಕ್ಕಳು ಹರಿಯುವ ನೀರಿನ ಶಕ್ತಿಯು ವಿದ್ಯುತ್ ಆಗಿ ಪರಿವರ್ತನೆಯಾಗುವುದನ್ನು ನೋಡಿದರು. ಬೇಲಂ ಗುಹೆಗಳಲ್ಲಿನ ನೀರುಗೋಲುಗಳು (Stalactites) ಹಾಗೂ ನೆಲದಿಂದ ಬೆಳೆಯುವ ಶಿಲಾರಚನೆಗಳ (Stalagmites) ನಡುವೆ ತೆವಳಿ ಓಡಾಡುವುದರ ಮೂಲಕ ನಿಸರ್ಗದ ಅದ್ಭುತ, ವೈಚಿತ್ರ್ಯಗಳ ಅನುಭವ ಅವರಿಗಾಯಿತು. ಗೂಟಿ ನಿಲ್ದಾಣದಲ್ಲಿ ರೈಲಿಗೆ ಕಾಯುತ್ತಿದ್ದಾಗ, ಅಲ್ಲಿನ ರೈಲ್ವೇ ಅಧಿಕಾರಿಯ ಜೊತೆಗೆ ಡೀಸೆಲ್ ಎಂಜಿನ್ನುಗಳನ್ನು ಕುರಿತು ಏರ್ಪಡಿಸಿದ ಅನೌಪಚಾರಿಕ ಮಾತುಕತೆಯಲ್ಲಿ ನಮ್ಮ ವಿದ್ಯಾರ್ಥಿಗಳು ಎಂಜಿನ್ನುಗಳಿಗೆ ಸಂಬಂಧಿಸಿದಂತೆ ತಮಗಿದ್ದ ಎಲ್ಲ ಸಂದೇಹಗಳನ್ನು ಪರಿಹರಿಸಿಕೊಂಡರು. ಎಂಜಿನ್ನುಗಳ ಜೊತೆಗೆ ಪ್ರತಿನಿತ್ಯ ಕೆಲಸ ಮಾಡುವ ಎಂಜಿನಿಯರುಗಳಿಂದ ರೈಲ್ವೇ ನಿಲ್ದಾಣದಲ್ಲಿ ಡೀಸೆಲ್ ಎಂಜಿನ್ನುಗಳ ಬಗ್ಗೆ ಅಧ್ಯಯನ ಮಾಡುವುದು ನವೀನ ರೀತಿಯ ಕಲಿಕಾ ವಿಧಾನವಾಗಿತ್ತು. ಕೇರಳದ ರಬ್ಬರ್ ತೋಟಗಳಿಗೆ ಭೇಟಿ ನೀಡಿ, ರಬ್ಬರ್ ಮರಗಳಿಂದ ಹಾಲನ್ನು (Latex) ಹೇಗೆ ಸಂಗ್ರಹಿಸಲಾಗುತ್ತದೆ, ಅದನ್ನು ಒಂದೆಡೆ ಹೇಗೆ ಒಣಗಿಸಲು ಇಡಲಾಗುತ್ತದೆ, ನಂತರ ಅದರಿಂದ ಹೇಗೆ ನೀರನ್ನು ಹಿಂಡಿ ತೆಗೆದು ಸಂಸ್ಕರಿಸಲು ರಬ್ಬರ್ ಕಾರ್ಖಾನೆಗಳಿಗೆ ಕಳುಹಿಸಲಾಗುತ್ತದೆ ಎನ್ನುವುದನ್ನು ತಿಳಿದುಕೊಂಡರು. ಅವರು ಅಲ್ಲಿ ಎಸ್ಟೇಟ್ ಒಂದರಲ್ಲಿ ತಂಗಿದ್ದರು. ಸ್ಥಳೀಯ ಊಟ ತಿನಿಸುಗಳನ್ನು ತಿಂದರು. ಜೇನು ಸಾಕಾಣಿಕೆಯನ್ನು ವೀಕ್ಷಿಸಿದರು. ಮುರಕಲ್ಲು ಮಣ್ಣಿನಿಂದ ಇಟ್ಟಿಗೆಗಳನ್ನು ಹೇಗೆ ಕತ್ತರಿಸಿ ತೆಗೆಯಲಾಗುತ್ತದೆ ಎಂಬುದನ್ನು ಅರ್ಥಮಾಡಿಕೊಂಡರು. ಉತ್ತಮ ಗುಣಮಟ್ಟದ ಜಾಯಿ–ಕಾಯಿಗಳನ್ನು ಉತ್ಪಾದಿಸಲು ಜಾಯಿಕಾಯಿಯ ಮರಗಳಿಗೆ ಹೇಗೆ ಕಸಿಮಾಡಲಾಗುತ್ತದೆ ಎನ್ನುವುದರ ವಿವರಗಳನ್ನು ತಿಳಿದು–ಕೊಂಡರು. ಕೃಷಿ ವಿಜ್ಞಾನ ವಿಭಾಗಗಳಿಗೆ ತೆರಳಿ ಅಣಬೆ ಕೃಷಿ ಮತ್ತು ಎರೆಹುಳ ಗೊಬ್ಬರ ತಯಾರಿಕೆಯ ಕ್ರಮವನ್ನು ಕಲಿತರು. ನಿರ್ಜನ ಅರಣ್ಯದಲ್ಲಿನ ಜಲಪಾತದ ತುತ್ತ ತುದಿಯಲ್ಲಿದ್ದ ಕಡಿದಾದ ಕಲ್ಲುಬಂಡೆಯ ಮೇಲೆ ಅಂಗಾತ ಮಲಗಿ ಮೇಲಿನಿಂದ ಅದನ್ನು ನೋಡುವುದರ ಮೂಲಕ ಹಿಂದೆಂದೂ ಕಂಡರಿಯದ ಸಾಹಸದ ರೋಮಾಂಚನಕ್ಕೆ ಒಳಗಾದರು.

ಪೋರ್ಚುಗೀಸ್ ಅನ್ವೇಷಕ ವಾಸ್ಕೊಡಗಾಮ ಭಾರತಕ್ಕೆ ಕಾಲಿಟ್ಟ ಕಪ್ಪಡ್ ಕಡಲತೀರದಲ್ಲಿ, ಆಲಿವ್ ರಿಡ್ಲೇ ಕಡಲಾಮೆಗಳು




ಮರುತುವ ಮಲೈ, ಕನ್ಯಾಕುಮಾರಿ

ಮೊಟ್ಟೆಯಿಟ್ಟು ಮರಿಮಾಡಲು ಅನುಕೂಲವಾಗುವಂತೆ ನಿರ್ಮಿಸಿದ ಕಾವುದಾಣ, ಅರಕ್ಕಲ್ ವಸ್ತುಸಂಗ್ರಹಾಲಯದಲ್ಲಿರುವ ಪುರಾತನ ಪೀಠೋಪಕರಣ ಹಾಗೂ ಶಸ್ತ್ರಾಸ್ತ್ರಗಳು ಮಕ್ಕಳಿಗೆ ನಮ್ಮ ದೇಶವು ಹೊಂದಿರುವ ರಂಗುರಂಗಿನ ಅಸಂಖ್ಯಾತ ಮುಖಗಳನ್ನು ಪರಿಚಯಿಸಿದವು. ಈ ಪ್ರವಾಸವು ಮುಗಿಯುವಷ್ಟರಲ್ಲಿ ಅವರಲ್ಲಿ ಯಾರೊಬ್ಬರಿಗೂ ಮನೆಗೆ ಹೋಗುವ ಮನಸ್ಸಿರಲಿಲ್ಲ! ಅನಂತರದ

ಪ್ರವಾಸಗಳನ್ನು ವೆಲ್ಲೂರು ಮತ್ತು ಸೆಂಜಿ (ಜಿಂಜೀ) ಕೋಟೆಗಳಿಗೆ ಹಮ್ಮಿಕೊಳ್ಳಲಾಗಿತ್ತು. ಕೋಟೆಯ ಆವರಣದೊಳಗೇ ಎಲ್ಲ ತರಹದ ಪೂಜೆ–ಆರಾಧನೆಗಳು ನಡೆಯಲು ಅನುವು ಮಾಡಿಕೊಡುವ ಮೂಲಕ ಅಂದಿನ ರಾಜರುಗಳು ಎಷ್ಟು ಉದಾರ ಮನಸ್ಸಿನವರು ಮತ್ತು ಸರ್ವಧರ್ಮ ಸಮಭಾವದವರಾಗಿದ್ದರು ಎಂಬುದನ್ನು ವಿದ್ಯಾರ್ಥಿಗಳು ಅಲ್ಲಿ ನೋಡಿದರು. ಸೆಂಜಿ ಕೋಟೆಯ ತುದಿಗೆ ಏರುವ ಮಾರ್ಗವು ಕಷ್ಟಕರವಾಗಿದ್ದು, ನಮ್ಮ ಬದುಕು ಎಷ್ಟು ಸುಖಕರವಾಗಿದೆ ಎನ್ನುವುದು ಅದರಿಂದ ನಮಗೆ ಮನದಟ್ಟಾಯಿತು!

Spatial Orientation (ಪ್ರದೇಶಾಭಿಮುಖತೆ) ತೊಂದರೆಯಿಂದ ಬಳಲುತ್ತಿರುವ ವಿದ್ಯಾರ್ಥಿಗಳಿಗೆ ಭೂಗೋಳ ಪಾಠದಲ್ಲಿ ನಕಾಶೆಯನ್ನು ಓದುವುದೆಂದರೆ ಸಾಮಾನ್ಯವಾಗಿ ಜಟಿಲವಾದ ಕೆಲಸ. ಆದ್ದರಿಂದ. ಭಾರತದ ದಕ್ಷಿಣದ ತುತ್ತತುದಿಯಾದ ಕನ್ಯಾಕುಮಾರಿಗೆ ಪ್ರವಾಸ ಹೋದಾಗ ವಿದ್ಯಾರ್ಥಿಗಳು ದೇಶದ ತುದಿಭಾಗವನ್ನು ನೋಡಲು ಹತ್ತಿರದ ಮರುದುವಮಲೈ ಬೆಟ್ಟವನ್ನೇರಿ ಮೇಲ್ಮೈ ಲಕ್ಷಣವನ್ನು ಅರ್ಥಮಾಡಿಕೊಂಡರು. ಬಂಗಾಳಕೊಲ್ಲಿ, ಹಿಂದೂ ಮಹಾಸಾಗರ ಹಾಗೂ ಅರಬ್ಬೀ ಸಮುದ್ರಗಳ ಅಪಾರ ಜಲರಾಶಿ ಕೆಳಗೆ ಕಾಣುತ್ತಿತ್ತು. ಒಂದೊಂದನ್ನೂ ನಾವು ತೋರಿಸಿ ವಿವರಿಸಿದಾಗ ನಮ್ಮ ವಿದ್ಯಾರ್ಥಿಗಳು ಜೀವನ ಪರ್ಯಂತ ಮರೆಯಲಾಗದಂತೆ ಸಮಾಜ ವಿಜ್ಞಾನದ ಪಾಠವನ್ನು ಕಲಿತರು. ನಾಗರ ಕೋಯಿಲ್‌ನ ಸಮೀಪ ಇರುವ ವಟ್ಟಕೊಟ್ಟೈಯು ನಮ್ಮನ್ನು ಡಚ್ಚರ ವಿರುದ್ಧ ಹೋರಾಡಿ ಗೆದ್ದ ಮಾರ್ತಾಂಡ ವರ್ಮನ ಕಾಲಕ್ಕೆ ಕೊಂಡೊಯ್ದಿತು.

ಸೆಲೈಕಾಲ್, ಒಲೈಕಾಲ್ ಎಂದು ಕೂಗುತ್ತ ಅದರ ಅನುರಣನಕ್ಕೆ ತಕ್ಕಂತೆ ನಾವು ಹಾಕಿದ ಹೆಜ್ಜೆಗಳು ಶತಮಾನಗಳ ಹಿಂದೆ ನಡೆದುದರ ನೋಟವನ್ನು ಮರುಸೃಷ್ಟಿಸಿದವು–ಡಚ್ಚರು ಸೈನಿಕರ ಒಂದು ಕಾಲಿಗೆ ಸೀರೆಯ ತುಂಡೊಂದನ್ನು, ಮತ್ತೊಂದಕ್ಕೆ ತಾಳೆ ಎಲೆಯನ್ನೂ ಕಟ್ಟಿ ಅವರು ಸೆಲೈಕಾಲ್, (ಸೀರೆ ಕಾಲು) ಒಲೈಕಾಲ್ (ಓಲೆಗರಿ ಕಾಲು) ಎಂದು ಕೂಗುತ್ತ ನಡೆಯುವಂತೆ ಮಾಡುತ್ತಿದ್ದರು.



ಪಟಚಿತ್ರ ರಘುರಾಜಪುರ, ಒಡಿಶಾ

ಕರ್ನಾಟಕದ ಸ್ಥಳಗಳಿಗೆ ಕೈಗೊಂಡ ಶಾಲಾಪ್ರವಾಸವು ನಮ್ಮ ವಿದ್ಯಾರ್ಥಿಗಳನ್ನು ಚಿತ್ರದುರ್ಗ, ಹಂಪಿ ಮತ್ತು ದಾರೋಜಿ ಕರಡಿ ಅಭಯಾರಣ್ಯ, ಐಹೊಳೆ, ಪಟ್ಟದಕಲ್ಲು, ಬಾದಾಮಿ, ಕೂಡಲಸಂಗಮ ಮತ್ತು ವಿಜಯಪುರಗಳ ಪ್ರವಾಸವನ್ನೊಳಗೊಂಡಿತ್ತು. ಭಾರತದ ಮುಕುಟಪ್ರಾಯವಾಗಿರುವ ಅದರ ಸಮೃದ್ಧ ಪರಂಪರೆಯು ವಿದ್ಯಾರ್ಥಿಗಳ ಮುಖಭಾವದಲ್ಲಿ ಎದ್ದು ತೋರುತ್ತಿತ್ತು. ತಂತ್ರಜ್ಞಾನದ ನೆರವಿಲ್ಲದೇ ಹಿಂದಿನವರು ಇವೆಲ್ಲವನ್ನೂ ಹೇಗೆ ನಿರ್ಮಿಸಿದರು ಎಂದು ಅವರಿಗೆ ಬೆರಗಾಯಿತು.

ಹಿಂದಿನ ಜನರು ನಮಗಿಂತಲೂ ಹೆಚ್ಚು ನಾವೀನ್ಯವನ್ನು ಕಂಡು–ಕೊಳ್ಳುವವರಾಗಿದ್ದರು ಎಂದು ವಿದ್ಯಾರ್ಥಿಗಳು ಎಲ್ಲೆಡೆ ಮತ್ತೆಮತ್ತೆ ಹೇಳುತ್ತಿದ್ದರು. ವಿದ್ಯಾರ್ಥಿಗಳು ಚಿತ್ರದುರ್ಗದಲ್ಲಿ ಒನಕೆ ಓಬವ್ವಳ ಸಾಹಸವನ್ನು ಪುನಃ ಅಭಿನಯಿಸಿದರು. ಬಾದಾಮಿ, ಪಟ್ಟದಕಲ್ಲು




ಹುಮಾಯುನ್ ಗೋರಿ, ದೆಹಲಿ

ಮತ್ತು ಐಹೊಳೆಯ ಶಿಲ್ಪಕಲೆಯನ್ನು ಕಂಡು ಬೆರಗಾದರು. ಆ ಪ್ರಾಂತದ ಸರ್ವಧರ್ಮ–ಸಮಭಾವವನ್ನು ಮನಗಂಡರು. ವಿಜಯಪುರವು ಗೋಲ್‌ಗುಂಬಜ್ ಎಂಬ ಹೆಸರಿನ, ತಾಂತ್ರಿಕವಾಗಿ ಅದ್ಭುತವಾದ ಕಟ್ಟಡದ ಮೂಲಕ ಆದಿಲ್ ಶಾನ ವೈಭವವನ್ನು ತೆರೆದಿಟ್ಟಿತು. ಕೈಮಗ್ಗದಲ್ಲಿ ಬಟ್ಟೆಯನ್ನು ಹೇಗೆ ನೇಯುತ್ತಾರೆ ಎಂದು ನೋಡಲೆಂದು ಏರ್ಪಡಿಸಿದ ಪ್ರವಾಸವೂ ಸಂಸ್ಕೃತಿಯ ಈ ರಸದೌತಣಕ್ಕೆ ಸೇರ್ಪಡೆಯಾಯಿತು. ಅಲ್ಲಿ ನಾವು ಇಳಕಲ್ ಸೀರೆಯೊಂದನ್ನು ಹೇಗೆ ನೇಯಲಾಗುತ್ತದೆ ಎಂಬುದನ್ನು ನೋಡಿದೆವು. ಹೊಸಪೇಟೆಯ ಸ್ಥಳೀಯ ಉಣಿಸು ತಿನಿಸುಗಳ ರುಚಿ ನೋಡಿದೆವು. ಇನ್ನೂ ತಣಿಯದ ಜ್ಞಾನದಾಹದೊಂದಿಗೆ ಮರಳಿ ಬಂದೆವು. ನಮ್ಮನ್ನು ಸಾಂಸ್ಕೃತಿಕ ಸಮ್ಮಿಲನವೊಂದಕ್ಕೆ ಆಹ್ವಾನಿಸಲಾಗಿತ್ತು. ಅದು ಒಡಿಶಾ ಪ್ರವಾಸಕ್ಕೆ ಬಾಗಿಲನ್ನು ತೆರೆಯಿತು. ಅಲ್ಲಿ ನಮ್ಮ ವಿದ್ಯಾರ್ಥಿಗಳು ದೇಶದೆಲ್ಲೆಡೆಯಿಂದ ಬಂದಿದ್ದ ಮುಖ್ಯವಾಹಿನಿಯ ವಿದ್ಯಾರ್ಥಿಗಳೊಂದಿಗೆ ಸರಿಸಮನಾಗಿ ನಿಂತು ನೃತ್ಯ, ಸಂಗೀತ ಹಾಗೂ ಕರಕುಶಲತೆಯಂತಹ ವಿವಿಧ ಕಲಾಪ್ರಕಾರಗಳಲ್ಲಿ ಭಾಗವಹಿಸಿದರು.

ಈ ಪ್ರದೇಶದ ಕೊಡುಗೆಗಳನ್ನು ನೋಡುವುದು ಅವಿಸ್ಮರಣೀಯ–ವಾದುದಾಗಿತ್ತು. ನಮ್ಮ ವಿದ್ಯಾರ್ಥಿಗಳು ಜಗನ್ನಾಥ, ಮುಕ್ತೇಶ್ವರ ಹಾಗೂ ಲಿಂಗರಾಜ ದೇವಸ್ಥಾನಗಳ ಗೋಪುರ, ಶಿಖರ, ಗುಮ್ಮಟಗಳನ್ನು ನೋಡಿ, ವಿಶಾಲವಾದ ಚಿಲ್ಕಾ ಸರೋವರದಲ್ಲಿ ದೋಣಿಯಲ್ಲಿ ನಿಶ್ಚಲವಾಗಿ ಕುಳಿತು ಸವಾರಿ ನಡೆಸಿ, ಪಿಪ್ಪಲಿಯ ಕರಕುಶಲ ವಸ್ತುಗಳ ಮಾರುಕಟ್ಟೆಯಲ್ಲಿ ಬಣ್ಣಗಳ ಸೊಬಗನ್ನು ಕಣ್ತುಂಬಿಕೊಂಡು, ಕೋನಾರ್ಕ್‌ದಲ್ಲಿರುವ ಭವ್ಯ

ಸೂರ್ಯದೇವಾಲಯಕ್ಕೆ ಭೇಟಿಯಿತ್ತು ಹಾಗೂ ರಘುರಾಜಪುರದ ಅದಕ್ಕೆ ಸರಿಸಾಟಿಯೇ ಇರದ ಪಟಚಿತ್ರ ಕಲಾವಿದರ ಪ್ರತಿಭೆಯನ್ನು ಕಂಡು ಸಂತೋಷಪಟ್ಟರು.

ಒಂದೊಂದು ವಾರದ ಚಿಕ್ಕ ಪ್ರವಾಸಗಳ ಅನುಭವದಿಂದ ಬಲ ಪಡೆದ ನಾವು ಹದಿನೈದು ದಿನಗಳಷ್ಟು ದೀರ್ಘಕಾಲದ ಹಾಗೂ ದೇಶದುದ್ದಗಲಕ್ಕೂ ಸಂಚರಿಸಬೇಕಾದಂತಹ ಪ್ರವಾಸಗಳನ್ನು ಏರ್ಪಡಿಸಿದೆವು.

ನಾವು ಅದರ ವಸ್ತು ವಿಷಯವನ್ನು ಮೊದಲ ಸ್ವಾತಂತ್ರ್ಯ ಸಮರ ಎಂದು ಹೆಸರಿಸಿದೆವು. ಭಾರತದ ಸ್ವಾತಂತ್ರ್ಯ ಸಂಗ್ರಾಮದ ಕುರಿತಾಗಿ ಪ್ರವಾಸದ ಮೂಲಕವೇ ತಿಳಿದುಕೊಳ್ಳಲು ಅನುಕೂಲವಾಗುವಂತೆ 1757ರಲ್ಲಿ ಪಶ್ಚಿಮ ಬಂಗಾಳದಲ್ಲಿ ನಡೆದ ಪ್ಲಾಸೀ ಕದನದಿಂದ ಆರಂಭಿಸಿ, ಕೋಲ್ಕತ್ತಾ, ಬಕ್ಸಾರ್, ಕಾನ್ಪುರ, ಲಖ್ನೋ, ದೆಹಲಿ, ಝಾನ್ಸಿ ಹಾಗೂ ಅಮೃತಸರಗಳಿಗೆ ವಿದ್ಯಾರ್ಥಿಗಳನ್ನು ಕರೆದೊಯ್ದೆವು. ಬ್ರಹ್ಮಪುರ ಎಂಬ ಚಿಕ್ಕ ಹಳ್ಳಿಯಲ್ಲಿ ನಡೆದಾಡಿದ್ದು, ವಿಭಿನ್ನ



ಧೊಲಾವಿರ, ಗುಜರಾತ್

ಸಂಸ್ಕೃತಿಯೊಂದರ ಸೂಕ್ಷ್ಮತೆಗಳನ್ನು ಅರ್ಥಮಾಡಿಕೊಂಡಿದ್ದು, ಕೋಲ್ಕತ್ತಾದಲ್ಲಿ ರವೀಂದ್ರನಾಥ ಟಾಗೋರರ ಮನೆ ಠಾಕುರ್‌ಬಾಡಿಯನ್ನು ನೋಡಿದ್ದು, ಪ್ರಸಿದ್ಧ ಲುಚಿ-ಆಲೂ ದಮ್ ಹಾಗೂ ರಸಗುಲ್ಲವನ್ನು ತಿಂದಿದ್ದು ಇತ್ಯಾದಿಗಳೆಲ್ಲವೂ ಶಾಲಾಪ್ರವಾಸದ ಸೊಗಡಿಗೆ ಅನನ್ಯತೆಯನ್ನು ತಂದುಕೊಟ್ಟವು.

ಪಠ್ಯಪುಸ್ತಕಗಳ ಮೂಲಕ ಇತಿಹಾಸವನ್ನು ಕಲಿಸುವಾಗ ಅದು ಅಮೂರ್ತ ಮತ್ತು ಅವಾಸ್ತವಿಕ ಎಂದು ತೋರುತ್ತದೆ. ಆದರೆ, ಪಶ್ಚಿಮ ಬಂಗಾಳದಿಂದ ದೆಹಲಿಯವರೆಗೆ ವ್ಯಾಪಿಸಿದ್ದ ಪ್ಲಾಸೀ ಕದನ ಮತ್ತು ಮೊದಲ ಸ್ವಾತಂತ್ರ್ಯ ಸಮರದಂತಹ ಯುದ್ಧಗಳು ನಡೆದ ಪ್ರಸಿದ್ಧ ಸ್ಥಳಗಳಿಗೆ ಭೇಟಿ ನೀಡುವುದರ ಮೂಲಕ ವಿದ್ಯಾರ್ಥಿಗಳು ಯುದ್ಧವು ಲಖ್ನೋದಲ್ಲಿ ಉಂಟುಮಾಡಿದ ವಿನಾಶವನ್ನು, ಕಾನ್ಪುರದಲ್ಲಿ ಅಮಾಯಕರ ಜೀವಗಳನ್ನು ಬಲಿತೆಗೆದುಕೊಂಡದ್ದನ್ನು ಕಂಡು ಅರ್ಥಮಾಡಿಕೊಂಡರು. ಮೊದಲ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸಂಬಂಧಿಸಿದ ಈ ಎಲ್ಲ ಸ್ಥಳಗಳಿಗೂ ಅಂದರೆ ಪ್ಲಾಸೀ, ಕೋಲ್ಕತ್ತಾ, ಕಾನ್ಪುರ, ಲಖ್ನೋ, ಝಾನ್ಸಿ ಮತ್ತು ದೆಹಲಿಗಳಿಗೆ ಪ್ರವಾಸ ಹೋಗಿ ಬಂದ ನಂತರ ನಮ್ಮ ವಿದ್ಯಾರ್ಥಿಗಳು ಕಾರ್ಯಕ್ರಮವೊಂದನ್ನು ತಯಾರಿಸಿ, ವೇದಿಕೆಯ ಮೇಲೆ ಪ್ರದರ್ಶಿಸಿದರು. ಮಾನವ ರಚನೆಗಳ ಮೂಲಕ ಸ್ಮಾರಕಗಳನ್ನು ಸೃಷ್ಟಿಸಿದರು. ಯುದ್ಧದಲ್ಲಿ ಹೋರಾಡಿದ ರಾಜ-ರಾಣಿಯರ ಶೂರತ್ವವನ್ನು ಹಾಗೂ ದೇಶದ ಸ್ವಾತಂತ್ರ್ಯಕ್ಕಾಗಿ ತಮ್ಮ ಪ್ರಾಣವನ್ನು ಬಲಿದಾನಗೈದ ನಾಯಕರ ಜೀವನದ ದೃಶ್ಯಗಳನ್ನು ನಾಟಕದ ರೂಪದಲ್ಲಿ ಅಭಿನಯಿಸಿದರು. ಇದು ವಿದ್ಯಾರ್ಥಿಗಳಲ್ಲಿ ಸ್ವಾತಂತ್ರ್ಯ ಸಂಗ್ರಾಮದ ವೀರ ನಾಯಕರು ಎದುರಿಸಿದ್ದ ಕಷ್ಟನಷ್ಟಗಳನ್ನು ಕುರಿತು ಹಾಗೂ ಈ ಜಗತ್ತನ್ನು ಒಂದು ಉತ್ತಮ ತಾಣವನ್ನಾಗಿಸಲು ವಿದ್ಯಾರ್ಥಿಗಳಾಗಿ ತಾವು ಏನು ಮಾಡಬಹುದೆಂಬ ಅರಿವನ್ನು ಮೂಡಿಸಿತು.

ಪಶ್ಚಿಮ ಬಂಗಾಳದಲ್ಲಿ ಸೆಣಬಿನ ಕಾರ್ಖಾನೆಯೊಂದಕ್ಕೆ ನೀಡಿದ ಭೇಟಿಯಲ್ಲಿ ನಾರು ಗೋಣಿಚೀಲವಾಗಿ ಹೇಗೆ ಪರಿವರ್ತನೆ-ಯಾಗುತ್ತದೆ ಎನ್ನುವುದನ್ನು ಅವರು ತಿಳಿದುಕೊಂಡರು. ಇದೇ ವೇಳೆಗೆ, ಕಾರ್ಮಿಕರು ಹೇಗೆ ಕಷ್ಟಕರವಾದ ಪರಿಸರದಲ್ಲಿ ಕೆಲಸ ಮಾಡಲು ಹೆಣಗಬೇಕಾಗುತ್ತದೆ ಎಂಬುದು ಅವರಿಗೆ ಮನದಟ್ಟಾಯಿತು. ರೈಲಿನಲ್ಲಿ ದೇಶದುದ್ದಗಲಕ್ಕೂ ಪ್ರಯಾಣ ಮಾಡುವುದರಿಂದ, ಅವರು ವಿಭಿನ್ನ ಪರ್ವತಾವಳಿಗಳು, ಸಮುದ್ರ, ನದಿಗಳು, ಬೇರೆಬೇರೆ ರೀತಿಯ ಮಣ್ಣಿನಲ್ಲಿ ಬೆಳೆಯುವ ಬೆಳೆಗಳು, ಪ್ರತಿಯೊಂದು ರಾಜ್ಯದಲ್ಲಿಯೂ ಇರುವ ವೈವಿಧ್ಯಮಯ ಕೈಗಾರಿಕೋದ್ಯಮಗಳನ್ನು ನೋಡಿದರು.

ಗುಜರಾತ್ ಪ್ರವಾಸವು ಕಲಿಕೆಯ ಮತ್ತೊಂದು ಅನುಭವ. ಪ್ರವಾಸದ ಮುಖ್ಯ ಗಮನವು ಸಿಂಧೂಕಣಿವೆ ನಾಗರಿಕತೆಯ ತೊಟ್ಟಿಲಾದ ಲೋಥಲ್ ಮತ್ತು ಧೋಲಾವೀರಾಗಳ ಮೇಲಿತ್ತು. ಅಲ್ಲಿನ ಅವಶೇಷಗಳ ನಡುವೆ ಓಡಾಡುವಾಗ ನಾವು ಹಿಂದೆ ಅಲ್ಲಿದ್ದ ಆದರೆ ನಿಗೂಢವಾಗಿ ಕಣ್ಮರೆಯಾದ ಭವ್ಯ ಇತಿಹಾಸವನ್ನು ನಮ್ಮ ಮನಸ್ಸಿನಲ್ಲಿ ಮರುಸೃಷ್ಟಿಸಿಕೊಂಡೆವು. ಹತ್ತಿರವೇ ಇರುವ ಫಾಸಿಲ್ ಪಾರ್ಕ್ (ಪಳೆಯುಳಿಕೆಗಳ ಉದ್ಯಾನ) ಕೂಡ ಅಷ್ಟೇ ಆಸಕ್ತಿ-ಪೂರ್ಣವಾಗಿತ್ತು. ಅಲ್ಲಿದ್ದ ಪ್ರತಿಯೊಂದು ಪುಟ್ಟ ಕಲ್ಲೂ ತನ್ನೊಳಗೆ ಪಳೆಯುಳಿಕೆಯಾಗಿರುವ ಪುಟ್ಟಪುಟ್ಟ ಸಮುದ್ರಜೀವಿಗಳ ಕತೆಗಳನ್ನು ತುಂಬಿಕೊಂಡಿತ್ತು. ಕಚ್ಛ್‌ನ ರಾಣ್ ಮರುಭೂಮಿಯ ಬಂಜರು ಸೌಂದರ್ಯ, ಭುಜೋಡಿಯ ಕರಕುಶಲ ಕಲಾವಿದರು ತಮ್ಮ ಕೈಗಳಿಂದ ಮರದಲ್ಲಿ ಸೃಷ್ಟಿಸುವ ಅದ್ಭುತ ಕುಸುರಿ ಕೆತ್ತನೆ, ಮುದ್ರಿಸುವ ಒತ್ತುಚಿತ್ರಗಳು, ಕಚ್ಛ್ ಕಸೂತಿ ಮತ್ತು ನೇಯ್ಗೆಗಳು ಈ ನೆಲದ ಸಾಂಸ್ಕೃತಿಕ ವೈವಿಧ್ಯವನ್ನು ದೃಢಪಡಿಸಿದವು. ಈ ಪ್ರವಾಸದಿಂದ ಮರಳಿ ಬಂದ ಮೇಲೆ ನಾವು ಕೊಂಕಣದ ಕರಾವಳಿಯನ್ನು ಬಳಸಿ ಬಂದೆವು. ಅಲ್ಲಿನ ಸಸ್ಯ ಹಾಗೂ ಪ್ರಾಣಿಸಂಕುಲಗಳ ಸೌಂದರ್ಯದಲ್ಲಿ ಮಿಂದೆದ್ದೆವು. ದೂಧ್‌ಸಾಗರ ಜಲಪಾತವು ನಮ್ಮ ಮನಸ್ಸಿನ ಮೇಲೆ ಅಚ್ಚೊತ್ತಿದ ನೆನಪು ಎಂದೂ ಮಾಸದಂತದ್ದು. ಈ ನೈಸರ್ಗಿಕ ಅದ್ಭುತವನ್ನು ಮತ್ತೊಮ್ಮೆ ವೀಕ್ಷಿಸುವ ಭರವಸೆಯನ್ನು ನಮಗೆ ನಾವೇ ಮೌನವಾಗಿ ಕೊಟ್ಟುಕೊಂಡೆವು.

ಮಧ್ಯಪ್ರದೇಶದ ಭೀಂಭೆಟ್ಕಾ ನಮ್ಮನ್ನು ಇತಿಹಾಸದಲ್ಲಿ ಮತ್ತಷ್ಟು ಹಿಂದಕ್ಕೆ ಗುಹಾಮಾನವರ ಕಾಲಕ್ಕೆ ಕರೆದೊಯ್ದಿತು. ಅಲ್ಲಿನ ವರ್ಣಚಿತ್ರಗಳು ಯುಗಯುಗಗಳ ಹಿಂದಿನ ಬದುಕು ಹೇಗಿತ್ತು ಎಂಬುದನ್ನು ಕುರಿತು ನಮಗೆ ಒಳನೋಟವೊಂದನ್ನು ನೀಡಿದವು. ಎಲ್ಲೋರಾದ ಶಿಲ್ಪಕಲೆಗಳನ್ನು ಸೃಷ್ಟಿಸಿದ ಶಿಲ್ಪಿಗಳ ಮನಮೋಹಕ ಪ್ರತಿಭೆ, ದೌಲತಾಬಾದ್‌ನ ಚಮತ್ಕಾರೀ ಕೋಟೆ, ಔರಂಗಾಬಾದ್‌ನ ಬೀಬಿ ಕಾ ಮಖ್ಬರಾದಲ್ಲಿ ಔರಂಗ್‌ಜೇಬನು ನಿರ್ಮಿಸಲು ಪ್ರಯತ್ನಿಸಿದ ತಾಜ್‌ಮಹಲ್‌ನ ಪ್ರತಿರೂಪ, ಆ ಪ್ರಾಂತದ ಪೈಥಾನೀ ನೇಯ್ಗೆ ಹೀಗೆ ಎಲ್ಲೆಡೆಯಿಂದಲೂ ಅಪಾರವಾಗಿ ಕಲಿತು ಅಗಾಧ ನೆನಪು, ಮಾಹಿತಿಗಳೊಂದಿಗೆ ಮನೆಗೆ ಮರಳಿದೆವು. ಸಾಂಚಿ ಸ್ತೂಪದ ಅಥವಾ ಎಲ್ಲೋರಾದ ಶಿಲ್ಪಕಲೆಗಳ ಎದುರು ಕುಳಿತು ನಮ್ಮ ವಿದ್ಯಾರ್ಥಿಗಳು ತಮ್ಮೆದುರಿಗಿರುವುದನ್ನೆಲ್ಲ ದೃಶ್ಯ ಕಲೆಯ ಅಭ್ಯಾಸದ ರೀತಿಯಲ್ಲಿ ಬರೆಯುತ್ತ ಹೋದರು.

ಸಾಂಸ್ಕೃತಿಕವಾಗಿ ಇಷ್ಟೊಂದು ವೈವಿಧ್ಯಮಯವಾಗಿರುವ ನಾಡಿನಲ್ಲಿ ಎದುರಾಗುವ ಸನ್ನಿವೇಶಗಳು ಒತ್ತಡ ಹಾಗೂ ಭಾವನೆಗಳನ್ನು ಹೇಗೆ ನಿಭಾಯಿಸಬೇಕು ಎನ್ನುವುದನ್ನು ಕಲಿಸುತ್ತವೆ. ಮನೆಯ ಸುರಕ್ಷಿತ ಸುಖಕರ ವಾತಾವರಣದಿಂದ ದೂರ ಇರುವಾಗ ವಿದ್ಯಾರ್ಥಿಗಳು ಸ್ವತಂತ್ರವಾಗಿ ಕೆಲಸಕಾರ್ಯಗಳನ್ನು ನಿರ್ವಹಿಸಲು ಕಲಿಯುತ್ತಾರೆ. ತಮ್ಮ ಸಾಮಾನು ಸರಂಜಾಮುಗಳ ಬಗ್ಗೆ ನಿಗಾ ವಹಿಸುವುದನ್ನು ಕಲಿಯುವುದರ ಮೂಲಕ ಹೆಚ್ಚು ಜವಾಬ್ದಾರಿಯುತರಾಗುತ್ತಾರೆ. ಇತರರನ್ನು ಅದರಲ್ಲಿಯೂ ಭಾವನಾತ್ಮಕ ನೋವನ್ನು ಅನುಭವಿಸುತ್ತಿರುವವರನ್ನು ಪರಾನು-ಭೂತಿಯಿಂದ ನೋಡಲು ಕಲಿಯುತ್ತಾರೆ. ತಂದೆತಾಯಿಯರ ನೆರವಿಲ್ಲದೇ ಸ್ವತಂತ್ರವಾಗಿ ತೀರ್ಮಾನ ತೆಗೆದುಕೊಳ್ಳುವುದನ್ನು, ಸಣ್ಣಪುಟ್ಟ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವುದನ್ನು ಕಲಿಯುತ್ತಾರೆ. ಸಮಯದ ಸೂಕ್ತ ನಿರ್ವಹಣೆ, ಮುಂದಾಳತ್ವ ಹಾಗೂ ಗುಂಪಿನಲ್ಲಿ (ತಂಡವಾಗಿ) ಕೆಲಸ ಮಾಡುವುದು ಮುಂತಾದ ಸೌಜನ್ಯ ಕೌಶಲ್ಯಗಳನ್ನು (Soft skills) ಕಲಿಯುತ್ತಾರೆ. ವಿವಿಧ ಸಂಸ್ಕೃತಿಗಳನ್ನು ಒಪ್ಪಿಕೊಳ್ಳಲು ಹಾಗೂ ಸಮಯದ ಅಗತ್ಯದಂತೆ ಸನ್ನಿವೇಶಗಳಿಗೆ ಹೊಂದಿಕೊಳ್ಳಲು ಕಲಿಯುತ್ತಾರೆ.

ದಾರೋಜಿ ಕರಡಿ ಅಭಯಾರಣ್ಯಕ್ಕೆ ಹೋಗಿ, ಅಲ್ಲಿ ಸ್ಲಾತ್ ಕರಡಿಗಳನ್ನು ನೋಡಿದ ಮೇಲೆ, ವಿದ್ಯಾರ್ಥಿಗಳಿಗೆ ಅದರ ಸನಿಹದಲ್ಲಿಯೇ ಉಕ್ಕಿನ ಕಾರ್ಖಾನೆಯ ನಿರ್ಮಾಣಕ್ಕೆ ಅನುಮತಿ ನೀಡದಂತೆ ಕೋರಿ ಸರ್ಕಾರಕ್ಕೆ ಪತ್ರ ಬರೆಯುವ ಆಲೋಚನೆ ಬಂದಿತು. ಇದು ಪರಿಸರದ ಬಗ್ಗೆ ಕಾಳಜಿಯುಳ್ಳ ಹಾಗೂ ಯೋಗ್ಯ ಸಂಗತಿಗಳ ಬಗ್ಗೆ ಕ್ರಿಯಾಶೀಲರಾಗಿ ಕೆಲಸ ಮಾಡುವಂತಹ ಭಾವೀ ಪ್ರಜೆಗಳನ್ನು ತಯಾರು ಮಾಡಲು ದಾರಿ ಮಾಡಿಕೊಟ್ಟಿತು.

ವಿಭಿನ್ನ ರೀತಿಯಲ್ಲಿ ಕಲಿಯುವುದು ಕಲಿತಿರುವುದರ ಪ್ರಸ್ತುತತೆಯನ್ನು ಮನಗಾಣಿಸುತ್ತದೆ ಮತ್ತು ಸಾಮಾಜಿಕ ಬದಲಾವಣೆಗೆ ದಾರಿ ಮಾಡಿಕೊಡುತ್ತದೆ. ಇಂತಹ ಶಾಲಾ-ಪ್ರವಾಸಗಳಿಂದ ವಿದ್ಯಾರ್ಥಿಗಳು ದೇಶದ ಇತಿಹಾಸವನ್ನು ಕಲಿಯುತ್ತಾರೆ ಮತ್ತು ಆಲೋಚಿಸಿ ಮುನ್ನಡೆಯುವುದರಿಂದ ಇತಿಹಾಸದಲ್ಲಿ ಎಸಗಲಾದ ತಪ್ಪುಗಳು ಮರುಕಳಿಸದಂತೆ ನೋಡಿಕೊಳ್ಳಬಹುದು ಎಂಬುದು ಅವರಿಗೆ ಮನದಟ್ಟಾಗುತ್ತದೆ. ಪಶ್ಚಿಮ ಬಂಗಾಳದ ಒಂದು ಹಳ್ಳಿಗೆ ಇತ್ತ ಭೇಟಿಯ ಸಂದರ್ಭದಲ್ಲಿ, ಅಲ್ಲಿನ ಜನರು ಒಲೆಯುರಿಸಲು ಕಲ್ಲಿದ್ದಲು ಮತ್ತು ಬೆರಣಿಯನ್ನು ಇಂಧನವನ್ನಾಗಿ ಬಳಸುತ್ತಿದ್ದುದನ್ನು ಗಮನಿಸಿದಾಗ ಮತ್ತು ಸೌರಶಕ್ತಿ, ಪವನ ಶಕ್ತಿ, ಜೈವಿಕ ಅನಿಲಗಳಂತಹ ಶಕ್ತಿಯ ಪರ್ಯಾಯ ಮೂಲಗಳನ್ನು ನೋಡಿ ವಿದ್ಯಾರ್ಥಿಗಳ ಮನಸ್ಸಿನಲ್ಲಿ ಬದುಕಿನ ಪರ್ಯಾಯ ಜೀವನ ಮಾರ್ಗಗಳ ಸಾಧ್ಯತೆಯ ಅರಿವು ನಿಧಾನವಾಗಿ ಸ್ಪಷ್ಟವಾಯಿತು. ಪಶ್ಚಿಮ ಘಟ್ಟಗಳ ಜೀವವೈವಿಧ್ಯವು ವಿದ್ಯಾರ್ಥಿಗಳಿಗೆ 'ಜೀವ ವರ್ತುಲ'ದಲ್ಲಿ ಪ್ರಕೃತಿಯ ಒಂದೊಂದು ಅಂಶವೂ ಅತ್ಯಾವಶ್ಯಕವಾಗಿದ್ದು ನಿಸರ್ಗವು ಹೇಗೆ ಪರಿಪೂರ್ಣ ರೀತಿಯಲ್ಲಿ ಎಲ್ಲವನ್ನೂ ಒದಗಿಸುತ್ತದೆ ಎನ್ನುವುದನ್ನು ಕಲಿಸಿತು. ತಿನ್ನಲು ಸಾಕಷ್ಟು ಆಹಾರವಿಲ್ಲದ, ಉಡಲು ಬೇಕಾದಷ್ಟು ಬಟ್ಟೆಯಿಲ್ಲದ, ಶಾಲೆ ಹಾಗೂ ವಿದ್ಯಾಭ್ಯಾಸದಿಂದ ವಂಚಿತರಾದ ಮಕ್ಕಳೊಂದಿಗೆ ಬೆರೆತದ್ದರಿಂದ ವಿದ್ಯಾರ್ಥಿಗಳು ತಾವೆಷ್ಟು ಅದೃಷ್ಟಶಾಲಿಗಳೆಂದು ಎಣಿಸುವಂತಾಯಿತು. ರಕ್ಷಣಾ ನೆಲೆಯೊಂದರಲ್ಲಿ ಉಳಿದುಕೊಂಡಿದ್ದ ಕಾರಣ, ದೇಹದಾರ್ಢ್ಯವನ್ನೇ ಮುಖ್ಯ ಉದ್ದೇಶವಾಗಿಟ್ಟುಕೊಂಡು ನಡೆಸುವ ಶಿಸ್ತುಬದ್ಧ, ಆರೋಗ್ಯಕರ ಜೀವನಕ್ರಮ ಹೇಗಿರುತ್ತದೆ ಎಂಬುದನ್ನು ವಿದ್ಯಾರ್ಥಿಗಳು ಪ್ರತ್ಯಕ್ಷವಾಗಿ ನೋಡುವ ಅವಕಾಶ ಒದಗಿತು. ಬೇರೆಬೇರೆ ಭಾಷೆಗಳನ್ನು ಆಲಿಸುವುದು, ರೈಲಿನಲ್ಲಿ ವಿವಿಧ ಜನರಿಂದ ಮಾಹಿತಿಯನ್ನು ಪಡೆದುಕೊಳ್ಳುವುದು, ಮನೆ ಊಟಕ್ಕಿಂತ ವಿಭಿನ್ನವಾದ ಆಹಾರವನ್ನು ಸೇವಿಸುವುದು ಇತ್ಯಾದಿಗಳೆಲ್ಲವೂ ಸಾಂಸ್ಕೃತಿಕ ಭಾರತದ ವೈವಿಧ್ಯವನ್ನು ಕಲಿಸುವ ಪಾಠಗಳಾಗಿದ್ದವು.

ಸಮಾಜ ವಿಜ್ಞಾನದ ಪ್ರಸಕ್ತ ಪಠ್ಯಕ್ರಮ ಮತ್ತು ಬೋಧನಾ ವಿಧಾನದಲ್ಲಿ ವಿದ್ಯಾರ್ಥಿಗಳಲ್ಲಿರುವ ಮಾಹಿತಿಗಳನ್ನು ವ್ಯಾಖ್ಯಾನಿಸುವ ಅನ್ವಯಿಸುವ ಅಥವಾ ಸಮಸ್ಯೆಯನ್ನು ಪರಿಹರಿಸುವ ಕೌಶಲ್ಯವನ್ನು ಅನ್ವೇಷಿಸದೇ, ವಾಸ್ತವಾಂಶಗಳನ್ನು ಕಲಿಯುವುದಕ್ಕೆ ಮಾತ್ರ ಒತ್ತು ನೀಡಲಾಗುತ್ತದೆ. ನಾವು ಆಯೋಜಿಸುವ ಶಾಲಾ ಪ್ರವಾಸಗಳಿಂದಾಗಿ ವಿದ್ಯಾರ್ಥಿಗಳಿಗೆ ಅಮೂರ್ತ ಸಿದ್ಧಾಂತಗಳು ಹಾಗೂ ವಾಸ್ತವಿಕ ಜಗತ್ತಿನ ನಡುವೆ ಇರುವ ಮುಖ್ಯವಾದ ಸಂಬಂಧವನ್ನು ಗುರುತಿಸಿ ಅರ್ಥ-ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಇದು ನನ್ನ ವಿದ್ಯಾರ್ಥಿಗಳು ಝೂನ್ಸಿ ಮುನ್ಸಿಪಾಲಿಟಿ (ನಗರಸಭೆ)ಎಂಬ ಪದವನ್ನು ಗಮನಿಸಿ, ಸ್ಥಳೀಯ ಆಡಳಿತವು ಮುನ್ಸಿಪಾಲಿಟಿಯೇ ಆಗಿರಬೇಕು, ಕಾರ್ಪೋರೇಷನ್ (ನಗರಪಾಲಿಕೆ) ಅಲ್ಲವೆಂಬ ತೀರ್ಮಾನಕ್ಕೆ ಬಂದಾಗ ತಿಳಿಯಿತು. ತಾವು ಪ್ರಯಾಣ ಕೈಗೊಂಡ ಪ್ರತಿಯೊಂದು ಪಟ್ಟಣ ಅಥವಾ ನಗರದಲ್ಲಿಯೂ ಅವರು ತಾವು ಸಿದ್ಧಾಂತಗಳ ರೂಪದಲ್ಲಿ ಅಭ್ಯಸಿಸಿದ ರಾಜ್ಯಶಾಸ್ತ್ರಕ್ಕೆ ಸಂಬಂಧಿಸಿದಂತೆ ಅವಲೋಕನವನ್ನು ಮಾಡಿದರು. ಉದಾಹರಣೆಗೆ, ಚುನಾವಣಾ ಭಿತ್ತಿಪತ್ರಗಳು, ಸರ್ಕಾರೀ ಕಟ್ಟಡಗಳು, ಸಚಿವರ ಬಂಗಲೆಗಳು ಇತ್ಯಾದಿ. ಪ್ರವಾಸದಲ್ಲಿ ಪ್ರತಿದಿನವೂ ವಿದ್ಯಾರ್ಥಿಗಳು ತಮ್ಮ ಕಲಿಕೆಯನ್ನು ದೃಢಪಡಿಸಲು ರಾತ್ರಿಯ ವೇಳೆ ತಾವು ಅಂದು ನೋಡಿದ ಎಲ್ಲಾ ಸ್ಥಳಗಳ ಬಗ್ಗೆ ಹಾಗೂ ಅವುಗಳ ಮಹತ್ವವನ್ನು ಕುರಿತು ಬರೆಯುತ್ತಿದ್ದರು.

ಪ್ರತೀ ಪ್ರವಾಸದ ಕೊನೆಯಲ್ಲಿಯೂ ವಿದ್ಯಾರ್ಥಿಗಳು ಅಮೂಲ್ಯವಾದ ಹಿಮ್ಮಾಹಿತಿಯನ್ನು ನೀಡುತ್ತಾರೆ. ಕೆಲವು ದಿನಗಳ ಕಾಲ ಒಟ್ಟಿಗೇ ಇರುವುದರಿಂದ ಸಂಭಾಷಣೆಗಳಿಗೆ ಅಡೆತಡೆಗಳು ಇಲ್ಲವಾಗುತ್ತವೆ. ಅಷ್ಟೇನೂ ಮಾತನಾಡದ ವಿದ್ಯಾರ್ಥಿ/ನಿ ಕೂಡ ಈ ಪ್ರವಾಸವು ತನ್ನ ಮೇಲೆ ಎಂತಹ ಪರಿಣಾಮ ಬೀರಿತು ಎನ್ನುವುದನ್ನು ವ್ಯಕ್ತಪಡಿಸುತ್ತಾನೆ/ಳೆ. ಯಾವ ಸಂಗತಿ ತಮ್ಮನ್ನು ಅತ್ಯಂತ ಆಳವಾಗಿ ಮುಟ್ಟಿತು, ಯಾವ ಸಂಗತಿಯಿಂದ ತಮಗೆ ಬೇಸರವಾಯಿತು, ಅದು ಎಲ್ಲಿ ವಿಭಿನ್ನವಾಗಿ ಇರಬಹುದಾಗಿತ್ತು ಎಂದೆಲ್ಲ ಅವರು ನಮಗೆ ಹೇಳುತ್ತಾರೆ.

ಪ್ರವಾಸದಲ್ಲಿ ವಿದ್ಯಾರ್ಥಿಗಳ ಜೊತೆಗಿರುವ ಶಿಕ್ಷಕರು ಖರ್ಚು-ವೆಚ್ಚಗಳೂ ಸೇರಿದಂತೆ ಇಡೀ ಪ್ರವಾಸವನ್ನು ಆಧರಿಸಿದ ವರದಿಯೊಂದನ್ನು ತಯಾರಿಸಿ ಶಾಲೆಗೆ ಸಲ್ಲಿಸುತ್ತಾರೆ. ಇದರಿಂದ ಮುಂದಿನ ಪ್ರವಾಸದ ಹಣಕಾಸು ಮತ್ತು ಯೋಜನೆಗೆ ಸಂಬಂಧಿಸಿದಂತೆ ಏನೇನು ಬದಲಾವಣೆಗಳನ್ನು ಮಾಡಬೇಕು ಎಂಬುದನ್ನು ಚರ್ಚಿಸಲಾಗುತ್ತದೆ. ಪೋಷಕರ ಸಭೆಯನ್ನು ಏರ್ಪಡಿಸಿ, ವಿದ್ಯಾರ್ಥಿಗಳು ಯಾವುದರಲ್ಲಿ ಬಲವನ್ನು ಹೊಂದಿದ್ದಾರೆ, ಅವರ ಸಾಮರ್ಥ್ಯ ಏನು ಎಂಬುದನ್ನು ಚರ್ಚಿಸಲಾಗುತ್ತದೆ. ಅತ್ಯುತ್ತಮ ನಡವಳಿಕೆಯ ಸಂದರ್ಭಗಳನ್ನು ಉದಾಹರಿಸಿ ಹೇಳುವುದರಿಂದ, ಪೋಷಕರ ಸದಭಿಪ್ರಾಯದ ಅನುಮೋದನೆ ಹಾಗೂ ಪ್ರಶಂಸೆ ಸಿಗಲು ಸಾಧ್ಯವಾಗುತ್ತದೆ. ಯಾವುದೇ ಆತಂಕದ ಸಂಗತಿಯು ಗಮನಕ್ಕೆ ಬಂದಿದ್ದಲ್ಲಿ ಶಾಲೆ ಮತ್ತು ಪೋಷಕರಿಬ್ಬರೂ ಉತ್ತಮ ಬದಲಾವಣೆಯನ್ನು ತರುವ ನಿಟ್ಟಿನಲ್ಲಿ ಆ ಬಗ್ಗೆ ಕೆಲಸ ಮಾಡಲು ಸಾಧ್ಯವಾಗುವಂತೆ ಅದಕ್ಕೆ ಹೆಚ್ಚಿನ ಒತ್ತು ನೀಡಿ ತಿಳಿಸಲಾಗುತ್ತದೆ. ವಿದ್ಯಾರ್ಥಿಗಳ ದೃಷ್ಟಿಕೋನದಲ್ಲಿ ಕಂಡು-ಬರುವ ಗಮನಾರ್ಹ ಬದಲಾವಣೆಗಳನ್ನು ಗುರುತಿಸುವಂತೆ ತರಗತಿಯ ಶಿಕ್ಷಕರಿಗೆ ಹೇಳಲಾಗುತ್ತದೆ.

ಖಂಡಿತವಾಗಿಯೂ ವಿದ್ಯಾರ್ಥಿಗಳ ಆತ್ಮವಿಶ್ವಾಸದ ಮಟ್ಟದಲ್ಲಿ ಏರಿಕೆ, ವ್ಯಾಖ್ಯಾನ, ವಿಶ್ಲೇಷಣೆ, ಅರ್ಥೈಸುವಿಕೆ, ವಿವೇಚನೆಯಂತಹ ಉತ್ತಮ ವಿಮರ್ಶಾ ಕೌಶಲ್ಯಗಳು ಕಂಡುಬಂದಿತ್ತು. ನಾವು ಬದುಕುವ ಸಮಾಜವನ್ನು ಸೂಕ್ಷ್ಮವಾಗಿ ಅರ್ಥ ಮಾಡಿಕೊಳ್ಳುವ ಶಕ್ತಿ ಸಾಮರ್ಥ್ಯವನ್ನು ಬೆಳೆಸಿಕೊಳ್ಳಲು ಇವುಗಳಲ್ಲಿ ಒಂದೊಂದೂ ಅತಿ ಮುಖ್ಯ. ಕೇವಲ ಭಾರತೀಯ ಸಂಸ್ಕೃತಿಯ ವೈವಿಧ್ಯವನ್ನೊಂದೇ ಅಲ್ಲ, ಅದರ ಭೌತಿಕ ಮೇಲ್ಮೈಲಕ್ಷಣದ ಭಿನ್ನತೆಯನ್ನೂ ಸಹ ಅನುಭವದ ಮೂಲಕ ಕಲಿಯಲು ಮತ್ತು ಅಳವಡಿಸಿಕೊಳ್ಳಲು ದೇಶದ ಉದ್ದಗಲಕ್ಕೂ ಪ್ರಯಾಣ ಮಾಡಿದುದು ಪ್ರತಿವರ್ಷವೂ ಶಾಲಾ ಪ್ರವಾಸವೊಂದನ್ನು ಎಲ್ಲ ಸೂಕ್ಷ್ಮವಿವರಗಳಿಗೆ ಗಮನಕೊಟ್ಟು ಯೋಜನಾಬದ್ಧವಾಗಿ ಆಯೋಜಿಸುವುದಕ್ಕೆ ಎಡೆಮಾಡಿಕೊಟ್ಟಿತು. ಕಲಿಕೆಯಲ್ಲಿ ತೊಂದರೆಯಿರುವ ವಿದ್ಯಾರ್ಥಿಗಳ ಸರ್ವತೋಮುಖ ಬೆಳವಣಿಗೆಗೆ ನಮ್ಮ ಈ ವಿಭಿನ್ನ ವಿಧಾನದಿಂದ ಲಾಭವಾಗಿದೆ.

ಕಲಿಕೆಗೆ ಸಂಬಂಧಿಸಿದಂತೆ ಈ ಯೋಜನೆಯಲ್ಲಿ ಭಾಗವಹಿಸಿದ ಪ್ರತಿ ವಿದ್ಯಾರ್ಥಿಯ ಉತ್ತಮ ಪ್ರಗತಿಯನ್ನು ನೋಡಿದರೆ, ಕಲಿಕೆಯನ್ನು ಸುಗಮಗೊಳಿಸುವ ಇದೇ ವಿಧಾನವನ್ನು ಮುಖ್ಯವಾಹಿನಿಯ ವಿದ್ಯಾರ್ಥಿಗಳಿಗೂ ಬಳಸಬಹುದು ಎಂಬುದು ಕಂಡುಬರುತ್ತದೆ. ಇತಿಹಾಸ ಮತ್ತು ಭೂಗೋಳದಿಂದ ಕಲಿಯುವುದು ಸಾಕಷ್ಟಿದ್ದು ಇದು ಅವರನ್ನು ಉತ್ತಮ ಜಾಗತಿಕ ಪ್ರಜೆಗಳನ್ನಾಗಿ ಮಾಡುತ್ತದೆ.



**ಸುಮತಿ ರಾಮ್‌ಜೀ** ಇವರು ಕಲೆ ಆಧಾರಿತ ಚಿಕಿತ್ಸಕರಾಗಿದ್ದು ದೀಪಿಕಾ ಶಾಲೆಯಲ್ಲಿರುವ, ವಿವಿಧ ರೀತಿಯ ಕಲಿಕೆಯ ಅಸಮರ್ಥತೆಯನ್ನು ಹೊಂದಿರುವ ಮಕ್ಕಳಲ್ಲಿ ಅದನ್ನು ಪರಿಹರಿಸಲು ಈ ವಿಧಾನವನ್ನು ಬಳಸುತ್ತಾರೆ. ಅವರು ಸಮಾಜ ವಿಜ್ಞಾನ, ಭಾರತೀಯ ಸಂಸ್ಕೃತಿ ಮತ್ತು ಪರಂಪರೆ, ಮೌಖಿಕ ಭಾಷಾ ಬೆಳವಣಿಗೆ, ಕ್ರಿಯಾತ್ಮಕ ಗಣಿತದಂತಹ (Functional Maths) ಹಲವಾರು ವಿಷಯಗಳನ್ನು ಅವರಿಗೆ ಬೋಧಿಸುತ್ತಿದ್ದಾರೆ. ಅವರಿಗೆ ವಿಭಿನ್ನ ತಾಣಗಳಿಗೆ ಪ್ರವಾಸ ಮಾಡುವುದು, ವಿಭಿನ್ನ ಸಂಸ್ಕೃತಿಗಳನ್ನು ತಿಳಿಯುವುದೆಂದರೆ ಅತ್ಯಂತ ಪ್ರೀತಿ. ಕಲಿಕೆಯನ್ನು ಇನ್ನಷ್ಟು ಹೆಚ್ಚಿಸಲು ಪ್ರವಾಸವು ಅತ್ಯಂತ ಪರಿಣಾಮಕಾರಿಯಾದ ವಿಧಾನ ಎಂದು ಅವರು ನಂಬುತ್ತಾರೆ. ಅವರನ್ನು sumathiramjee@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ಸಹನಾ ಹೆಗಡೆ** । ಪರಿಶೀಲನೆ: **ಜೈಕುಮಾರ್ ಮರಿಯಪ್ಪ**

# ಭಾರತದಲ್ಲಿ ಸಮನ್ವಯ ಶಿಕ್ಷಣ
## ಪರಿಕಲ್ಪನೆಯಿಂದ ವಾಸ್ತವದೆಡೆಗೆ

ಡಾ. ಉಮಾ ತುಲಿ

ಒಂದು ದೇಶದ ಅತ್ಯಮೂಲ್ಯ ಆಸ್ತಿ ಎಂದರೆ ಮಕ್ಕಳು. ಪ್ರತಿಯೊಂದು ಮಗುವೂ ಸಂತೋಷಭರಿತ ಹಾಗೂ ರಚನಾತ್ಮಕ ಜೀವನ ನಡೆಸುವಂತೆ ನೋಡಿಕೊಳ್ಳುವುದು ನಮ್ಮೆಲ್ಲರ ಜವಾಬ್ದಾರಿ. ಇದಕ್ಕಾಗಿ ಅವರ ಸಾಮರ್ಥ್ಯವನ್ನು ಗರಿಷ್ಠ ಮಟ್ಟಕ್ಕೆ ಬೆಳೆಸುವುದು ಅತ್ಯಗತ್ಯ. ಬದುಕಿನ ಸವಾಲುಗಳನ್ನು ಎದುರಿಸಲು ಮಕ್ಕಳನ್ನು ಸದೃಢರನ್ನಾಗಿಸಲು ಹಾಗೂ ಸಜ್ಜುಗೊಳಿಸಲು, ಆ ಮೂಲಕ ಅವರ ಆಮೂಲಾಗ್ರ ಬೆಳವಣಿಗೆಗೆ ನೆರವಾಗಲು ಶಿಕ್ಷಣ ಒಂದು ಮಹತ್ವದ ಹಾಗೂ ಅತ್ಯವಶ್ಯಕವಾದ ಪಾತ್ರ ವಹಿಸುತ್ತದೆ.

ಹೆಚ್ಚುವರಿ ಅಗತ್ಯ ಬೇಕಾದವರು ಸೇರಿದಂತೆ ಎಲ್ಲ ಮಕ್ಕಳ ಹಕ್ಕಿಗಾಗಿ, ಅದರಲ್ಲೂ ಸಮಾಜದ ದುರ್ಬಲ ಹಾಗೂ ಅಂಚಿನಲ್ಲಿರುವ ವರ್ಗದವರಿಗಾಗಿ, ಅನೇಕ ವರ್ಷಗಳಿಂದ ಜಾಗತಿಕವಾಗಿ ಹಲವಾರು ಕಾರ್ಯಕ್ರಮಗಳು ಹಾಗೂ ಯೋಜನೆಗಳನ್ನು ಜಾರಿಗೊಳಿಸಲಾಗುತ್ತಿದೆ. ವೈಕಲ್ಯಕ್ಕೆ ಸಂಬಂಧಿಸಿದ ಪೂರ್ವಾಗ್ರಹಗಳಿಂದ ಹೊರಬರಲು ಹಾಗೂ ತಮ್ಮೊಳಗಿರುವ ಘನತೆ, ಶಕ್ತಿ ಹಾಗೂ ಸಾಮರ್ಥ್ಯಗಳಿಂದ ಸಮಾಜದಲ್ಲಿ ಒಂದು ಯುಕ್ತ ಸ್ಥಾನದ ಹಕ್ಕಿನ ಅಗತ್ಯತೆಯನ್ನು ಎತ್ತಿಹಿಡಿಯುವ ಪ್ರಯತ್ನಗಳು ಹಲವಾರು ವರ್ಷಗಳಿಂದ ನಡೆಯುತ್ತಲೇ ಇದ್ದರೂ, ವೈಕಲ್ಯ ಹೊಂದಿರುವ ಬಹಳಷ್ಟು ಜನ ಇನ್ನೂ ಬಹಿಷ್ಕಾರ ಹಾಗೂ ತಾರತಮ್ಯವನ್ನು ಎದುರಿಸುತ್ತಲೇ ಇದ್ದಾರೆ. ಅವರಿಗೆ



ಪ್ರತ್ಯೇಕವಾಗಿಯೇ ಶಿಕ್ಷಣವನ್ನು ನೀಡಲಾಗುತ್ತಿದೆ ಅಥವಾ ಅವರ ಸಾಮರ್ಥ್ಯಗಳನ್ನು ಗುರುತಿಸದೆಯೇ ಬಹಳ ಕಳಪೆ ಹಾಗೂ ನಿಷ್ಪ್ರಯೋಜಕವಾದ ರೀತಿಯಲ್ಲಿ ಇತರರೊಂದಿಗೆ ಸೇರಿಸಲಾಗುತ್ತಿದೆ.

**ತಳಮಟ್ಟದ ವಾಸ್ತವಗಳು**

2011ರ ಜನಗಣತಿಯ ಪ್ರಕಾರ, ಭಾರತದ 120 ಕೋಟಿ ಜನರಲ್ಲಿ ಶೇಕಡಾ 2.21ರಷ್ಟು ಜನರು ಅಂದರೆ 2.68 ಕೋಟಿ ಜನರು ಒಂದಲ್ಲಾ ಒಂದು ನ್ಯೂನತೆಯನ್ನು ಹೊಂದಿದ್ದಾರೆ. ಅವರುಗಳಲ್ಲಿ 5ರಿಂದ 19 ವರ್ಷ ವಯಸ್ಸಿನೊಳಗಿನ 66 ಲಕ್ಷ ಮಕ್ಕಳಿದ್ದಾರೆ. 2011ರಲ್ಲಿ ವಿಶ್ವ ಆರೋಗ್ಯ ಸಂಸ್ಥೆ (World Health Organisation) ಹಾಗೂ ವಿಶ್ವಬ್ಯಾಂಕ್ (World Bank) ಸಹಯೋಗದಲ್ಲಿ ನ್ಯೂನತೆಯ ಕುರಿತ ವಿಶ್ವ ವರದಿಯು (World Report) ಅಂದಾಜಿಸಿದ ಪ್ರಕಾರ, ಜಾಗತಿಕ ಜನಸಂಖ್ಯೆಯ ಹದಿನೈದು ಪ್ರತಿಶತ ಜನರು ನ್ಯೂನತೆಯನ್ನು ಹೊಂದಿದ್ದಾರೆ.

ಶಿಕ್ಷಣ ಕ್ಷೇತ್ರದಲ್ಲಿ ಸಾಕಷ್ಟು ಪ್ರಗತಿ ಸಾಧಿಸಿದ್ದರೂ, 5ರಿಂದ 19 ವರ್ಷದೊಳಗಿನ ವಿಶೇಷ ಅಗತ್ಯ ಬೇಕಾದ ಮಕ್ಕಳ ಶಿಕ್ಷಣದ ಅಗತ್ಯಗಳನ್ನು ಒದಗಿಸುವಲ್ಲಿ ಭಾರತವು ಬಹಳಷ್ಟು ಸವಾಲುಗಳನ್ನು ಎದುರಿಸುತ್ತಿದೆ. ವಿಶೇಷ ಅಗತ್ಯ ಬೇಕಾದ ಹೆಣ್ಣುಮಕ್ಕಳಲ್ಲಿ ಇಪ್ಪತ್ತೆಂಟು ಪ್ರತಿ ಶತಮಕ್ಕಳು ಎಂದೂ ಯಾವುದೇ ಶೈಕ್ಷಣಿಕ ಸಂಸ್ಥೆಗಳಿಗೆ ಹೋಗಿಲ್ಲ. ಇಪ್ಪತ್ತಾರು ಪ್ರತಿಶತ ಹೊಂದಿರುವ ಗಂಡು ಮಕ್ಕಳ ಸಂಖ್ಯೆ ಸ್ವಲ್ಪಮಟ್ಟಿಗೆ ಉತ್ತಮವಾಗಿದೆ. ವಿಶೇಷ ಅಗತ್ಯವುಳ್ಳ ಪುರುಷರಲ್ಲಿ ಹದಿನಾರು ಪ್ರತಿಶತ ಹಾಗೂ ವಿಶೇಷ ಅಗತ್ಯವುಳ್ಳ ಮಹಿಳೆಯರಲ್ಲಿ ಒಂಭತ್ತು ಪ್ರತಿಶತದಷ್ಟು ಜನರಷ್ಟೇ ಮೆಟ್ರಿಕ್ಯುಲೇಷನ್/ಪ್ರೌಢ ಶಿಕ್ಷಣವನ್ನು ಪಡೆದಿದ್ದಾರೆ. ವಿಶೇಷ ಅಗತ್ಯವುಳ್ಳ ಪುರುಷರಲ್ಲಿ ಕೇವಲ ಒಂಭತ್ತು ಪ್ರತಿಶತ ಮತ್ತು ಮಹಿಳೆಯರು ಮೂರು ಪ್ರತಿಶತ ಪದವೀಧರರಾಗಿರುವುದು ಆಶ್ಚರ್ಯವೇನಲ್ಲ. ಭಾರತದಲ್ಲಿ ನೀತಿ ಹಾಗೂ ಶಾಸಕಾಂಗ ಚೌಕಟ್ಟುಶಿಕ್ಷಣ ಎಲ್ಲ ಮಕ್ಕಳ ಹಕ್ಕು ಎಂಬುದನ್ನು ಗಮನದಲ್ಲಿಟ್ಟು–ಕೊಂಡು ಭಾರತದಲ್ಲಿ ಅನೇಕ ವರ್ಷಗಳಿಂದ ಹಲವಾರು ಕಾರ್ಯಕ್ರಮಗಳು ಹಾಗೂ ಯೋಜನೆಗಳನ್ನು ರೂಪಿಸಲಾಗಿದೆ. ಕೆಲವು ಮುಖ್ಯ ಶಾಸನಬದ್ಧ ಉಪಬಂಧಗಳನ್ನು (Legislative provisions) ಕೆಳಗೆ ಕೊಡಲಾಗಿದೆ:

- ಸಾಂವಿಧಾನಿಕ ಉಪಬಂಧಗಳು: ವಿಧಿ 21ಎ, ವಿಧಿ 45 ಹಾಗೂ ವಿಧಿ 51ಎ(ಕೆ)
- ಮಾನಸಿಕ ಆರೋಗ್ಯ ಕಾಯ್ದೆ 1987, (The Mental Healthcare Act, 1987), 2017ರಲ್ಲಿ ಪರಿಷ್ಕೃತ 1995ರ ವಿಶೇಷ ಅಗತ್ಯವುಳ್ಳ ವ್ಯಕ್ತಿಗಳ (ಸಮಾನ ಅವಕಾಶಗಳು, ಹಕ್ಕುಗಳ ರಕ್ಷಣೆ ಮತ್ತು ಸಂಪೂರ್ಣ ಭಾಗೀದಾರಿಕೆ) ಕಾಯ್ದೆ, (Persons with Disabilities Act, 1995), 2016ರಲ್ಲಿ ಪರಿಷ್ಕೃತ (ವಿಶೇಷ ಸಾಮರ್ಥ್ಯದ ವ್ಯಕ್ತಿಗಳ ಹಕ್ಕುಗಳ ಕಾಯ್ದೆ– The Rights of Persons with Disabilities Act))
- 1992ರ ಪುನರ್ವಸತಿ ಕೌನ್ಸಿಲ್ ಆಫ್ ಇಂಡಿಯಾ ಕಾಯ್ದೆ, (Rehabilitation Council of India Act,1992) 2000ರಲ್ಲಿ ಕಾಯ್ದೆಗೆ ತಿದ್ದುಪಡಿ ತರಲಾಗಿದೆ.
- 2009ರಕಡ್ಡಾಯ ಶಿಕ್ಷಣ ಹಕ್ಕು ಕಾಯ್ದೆ, (Right to Education Act, 2009) 2019ರಲ್ಲಿ ಪರಿಷ್ಕೃತ
- 1999ರ ರಾಷ್ಟ್ರೀಯ ಟ್ರಸ್ಟ್ ಕಾಯ್ದೆ (National Trust Act, 1999)

ಅಗತ್ಯ ಮೂಲಸೌಕರ್ಯಗಳ ಕೊರತೆ, ಅಳವಡಿಸಿ–ಕೊಂಡಿರುವ ಬೋಧನಾ–ಕಲಿಕಾ ಸಾಮಗ್ರಿಗಳು ಹಾಗೂ ಇನ್ನಿತರ ಹಲವು

ಅಂಶಗಳಿಂದಾಗಿ ಕಡ್ಡಾಯ ಶಿಕ್ಷಣ ಹಕ್ಕು ಕಾಯ್ದೆ (ಆರ್‌ಟಿಇ)ಯ ನಿರೀಕ್ಷಿತ ಉದ್ದೇಶಗಳು ಸಂಪೂರ್ಣವಾಗಿ ಈಡೇರಿಲ್ಲ.

**ರಾಷ್ಟ್ರೀಯ ನೀತಿಗಳು**
ದೈಹಿಕ ಅಥವಾ ಬೌದ್ಧಿಕ ಸವಾಲುಗಳನ್ನು ಎದುರಿಸುತ್ತಿರುವ ಮಕ್ಕಳನ್ನು ಸಾಮಾನ್ಯ ವರ್ಗದವರೊಂದಿಗೆ ಸಮಾನರಾಗಿ ಕಂಡು ಅವರೊಡನೆ ಒಂದಾಗಿಸಿದಾಗ ಮಕ್ಕಳನ್ನು ಸಹಜ ಬೆಳವಣಿಗೆಗೆ ತಯಾರು ಮಾಡಿದಂತಾಗುತ್ತದೆ ಎಂಬ ಅನುಮೋದನೆಯನ್ನು ರಾಷ್ಟ್ರೀಯ ಶಿಕ್ಷಣ ನೀತಿ, 1986 (National Policy on Education -NPE) ಹಾಗೂ ಎನ್‌ಪಿಇಯಿಂದ ಹೊರಹೊಮ್ಮಿದ 1992ರ ಕ್ರಿಯಾ ಯೋಜನೆಯು (Programme of Action 1992) ಪುನರುಚ್ಛರಿಸುತ್ತದೆ. ಸಂಯೋಜಿತ ಶಿಕ್ಷಣ ಕಾರ್ಯಕ್ರಮಗಳ ವಿಸ್ತರಣೆಯ ಅಗತ್ಯದ ಕುರಿತು ಎನ್‌ಪಿಇ ಒತ್ತಿಹೇಳಿದೆ. ಇತ್ತೀಚೆಗೆ ಆರಂಭಿಸಲಾಗಿರುವ ನೀತಿಗಳು ಹೀಗಿವೆ:

- ವಿಶೇಷ ಅಗತ್ಯ ಬೇಕಾದ ಮಕ್ಕಳು ಮತ್ತು ಯುವ ಜನರ ಒಳಗೊಳ್ಳುವಿಕೆಗಾಗಿ ರಾಷ್ಟ್ರೀಯ ಕ್ರಿಯಾ ಯೋಜನೆ, 2005 (The National Action Plan for Inclusion of children and youth with disabilities, 2005)
- ವಿಶೇಷ ಅಗತ್ಯವುಳ್ಳ ವ್ಯಕ್ತಿಗಳ ರಾಷ್ಟ್ರೀಯ ನೀತಿ, 2006 (National Policy for Persons with Disabilities, 2006)
- ರಾಷ್ಟ್ರೀಯ ಮಕ್ಕಳ ಕ್ರಿಯಾ ಯೋಜನೆ, 2016 (The National Plan of Action for children, 2016)
- ರಾಷ್ಟ್ರೀಯ ಕರಡು ಶಿಕ್ಷಣ ನೀತಿ, 2019 (The Draft National Policy on Education, 2019)

> ಸಮನ್ವಯ ಶಿಕ್ಷಣದ ಸಮಗ್ರ ವಿಧಾನಗಳ ಅನುಷ್ಠಾನಕ್ಕೆ 2019ರ ರಾಷ್ಟ್ರೀಯ ಕರಡು ಶಿಕ್ಷಣ ನೀತಿಯು (Draft National Education Policy 2019) ಸಾಕಷ್ಟು ಪ್ರಾಮುಖ್ಯತೆಯನ್ನು ಕೊಟ್ಟಿಲ್ಲ.

**ಸಮನ್ವಯ ಶಿಕ್ಷಣ**
ವಿಶೇಷ ಅಗತ್ಯ ಬೇಕಾದ ಮಕ್ಕಳೆಡೆಗಿನ ಅನುಕಂಪ ಹಾಗೂ ಸಹಾನುಭೂತಿಯುಕ್ತ ದೃಷ್ಟಿಕೋನವು ಬದಲಾವಣೆಯಾಗಿ, ಬೆಂಬಲ ಮತ್ತು ಅವಕಾಶಗಳನ್ನು ಒದಗಿಸುವುದು ಹಾಗೂ ಹಕ್ಕು ಆಧಾರಿತ ಮಾರ್ಗ ಸೂಚಿಸುವುದು ಸಮನ್ವಯ ಶಿಕ್ಷಣದ ಪರಿಕಲ್ಪನೆಯ ಹುಟ್ಟಿಗೆ ಕಾರಣವಾಯಿತು. ಇದು ಒಂದು ಶಿಕ್ಷಣ ವ್ಯವಸ್ಥೆಯಾಗಿದ್ದು, ಇಲ್ಲಿ ವೈಕಲ್ಯ ಇರುವ ಹಾಗೂ ಇಲ್ಲದಿರುವ ವಿದ್ಯಾರ್ಥಿಗಳು ಒಟ್ಟಿಗೆ ಕಲಿಯುತ್ತಾರೆ. ಇದರಲ್ಲಿ ವಿಭಿನ್ನ ರೀತಿಯ ವಿದ್ಯಾರ್ಥಿಗಳ ಕಲಿಕೆಯ ಅಗತ್ಯಕ್ಕೆ ಅನುಗುಣವಾಗಿ ಬೋಧನೆಯ ವ್ಯವಸ್ಥೆಯನ್ನು ಅಳವಡಿಸಿಕೊಳ್ಳಲಾಗುತ್ತದೆ. ಇದು ಎಲ್ಲ ಮಕ್ಕಳಿಗೂ ಅಂದರೆ – ಹುಡುಗರು, ಹುಡುಗಿಯರು, ವೈಕಲ್ಯ ಉಳ್ಳವರು ಹಾಗೂ ಇಲ್ಲದೆ ಇರುವವರು ಸಮಾಜದ ಅಂಚಿನಲ್ಲಿರುವ ಹಾಗೂ ಕನಿಷ್ಠ ಸವಲತ್ತುಗಳನ್ನು ಹೊಂದಿರುವವರಿಗೂ ಶಾಲೆಗಳು ಮತ್ತು ಕಲಿಕಾ ಕೇಂದ್ರಗಳು ಲಭ್ಯವಾಗುವ ಒಂದು ಪ್ರಕ್ರಿಯೆಯಾಗಿದೆ.

**ಶಿಕ್ಷಣದ ಪ್ರಕಾರಗಳು**
ಮಗು–ಕೇಂದ್ರಿತ, ಅಗತ್ಯ ಆಧಾರಿತ ಶಿಕ್ಷಣ ಹಾಗೂ ನಿರಂತರ ಕಲಿಕೆ ಎಂಬ ಪರಿಕಲ್ಪನೆಗಳು ಹೆಚ್ಚುವರಿ ಅಗತ್ಯವಿರುವ ಮಕ್ಕಳಿಗೆ ವಿವಿಧ ರೀತಿಯ ಶಾಲೆಗಳನ್ನು ಆಯ್ಕೆ ಮಾಡಿಕೊಳ್ಳಲು ಕಾರಣವಾಗಿದೆ. ಇವುಗಳನ್ನು ಈ ರೀತಿಯ ಗುಂಪುಗಳಾಗಿ ವಿಂಗಡಿಸಬಹುದು:



ಮೊದಲ ನಾಲ್ಕು ಆಯ್ಕೆಗಳು ಔಪಚಾರಿಕವಾಗಿವೆ ಹಾಗೂ ಸೂಕ್ತ ಮೂಲಸೌಕರ್ಯ ಹಾಗೂ ಸಂಪನ್ಮೂಲಗಳುಳ್ಳ ಉತ್ತಮ ಸ್ಥಳಗಳನ್ನು ಹೊಂದಿವೆ. ಇಲ್ಲಿ ಮುಖಾಮುಖಿ ಪದ್ಧತಿಯಲ್ಲಿ ಶಿಕ್ಷಣವನ್ನು ಪಡೆಯಲಾಗುತ್ತದೆ. ಇದರೊಡನೆ ನಿಗದಿತ ಸಮಯದಲ್ಲಿ ಉತ್ತಮವಾಗಿ ರೂಪಿಸಿದ ಪಠ್ಯವನ್ನು ಪೂರ್ಣಗೊಳಿಸಲಾಗುತ್ತದೆ. ಸಮಗ್ರ ಮೌಲ್ಯಮಾಪನದ ಫಲಿತಾಂಶಗಳು ಮುಂದಿನ ತರಗತಿಗೆ ಬಡ್ತಿ ಹೊಂದುವುದರ ಸೂಚನೆಯಾಗಿ ಕಾರ್ಯನಿರ್ವಹಿಸುತ್ತವೆ. ಸಂಯೋಜಿತ ರಚನೆಯಲ್ಲಿ ಮಗು ತನ್ನನ್ನು ತಾನು ಈ ವ್ಯವಸ್ಥೆಯಲ್ಲಿ ಹೊಂದಿಸಿಕೊಳ್ಳುವ ಜವಾಬ್ದಾರಿಯನ್ನು ಹೊಂದಿರುತ್ತಾನೆ/ಳೆ. ಒಂದು ಹಂತದವರೆಗೂ ಸಾಮಾಜಿಕ, ಸಾಂಸ್ಕೃತಿಕ ಅಥವಾ ಕ್ರೀಡಾ ಚಟುವಟಿಕೆಗಳಲ್ಲಿ ಹಾಗೂ ಶೈಕ್ಷಣಿಕವಾಗಿ ನಿಯಮಿತ ಪಠ್ಯಕ್ರಮಗಳಲ್ಲಿರುವ ವಿಷಯಕ್ಕೆ ಸಂಬಂಧಿಸಿದಂತೆ ಮಾತ್ರ ಮಗು ಒಳಗೊಂಡಿರುತ್ತದೆ. ವೈದ್ಯಕೀಯ ನೆರವು ಅಥವಾ ವಿಶೇಷ ಶಿಕ್ಷಣ ಅಥವಾ ಪರಿಹಾರ ಶಿಕ್ಷಣದಂತಹ ಇನ್ನಿತರ ಬೆಂಬಲದ ಮೂಲಕ ನಿಯತವಾದ ವ್ಯವಸ್ಥೆಯಲ್ಲಿ ಹೊಂದಿಕೊಳ್ಳಬಲ್ಲ ಅಲ್ಪ ಪ್ರಮಾಣದ ವೈಕಲ್ಯವಿರುವ ಮಕ್ಕಳನ್ನು ಒಳಗೊಳ್ಳಲಾಗುತ್ತದೆ. ಈ ಒಳಗೊಳ್ಳುವಿಕೆಯು ದೌರ್ಬಲ್ಯದ ನಮೂನೆ ಹಾಗೂ ತೀವ್ರತೆಯ ಆಧಾರದ ಮೇಲೆ ಒಂದೋ ಸಾಮಾಜಿಕ ಚಟುವಟಿಕೆಗಳಲ್ಲಿ ಅಥವಾ ಪಠ್ಯಕ್ರಮದ ಕೆಲವು ಭಾಗಗಳಲ್ಲಿ ಮಾತ್ರ ಆಗುತ್ತದೆ. ಮುಕ್ತ ಶಾಲೆಗಳು (Open schooling) ಅಗತ್ಯ ಆಧಾರಿತ ಶಿಕ್ಷಣ, ಎಲ್ಲಾ ಹಂತಗಳಲ್ಲೂ ವಿಭಿನ್ನ ವಿಷಯಗಳ ಆಯ್ಕೆ, ಮಗುವಿನ ಸಾಮರ್ಥ್ಯದ ಅನುಸಾರ ಗತಿ ಆಧಾರಿತ ಕಲಿಕೆ ಹಾಗೂ ಅವರ ತರಗತಿಯ ಮೌಲ್ಯ-ಮಾಪನಗಳನ್ನು ಸಂಪೂರ್ಣಗೊಳಿಸುವುದಕ್ಕೆ ವಿವಿಧ ಆಯ್ಕೆಗಳನ್ನು ಒದಗಿಸುತ್ತದೆ. ವಿಶೇಷ ಅಗತ್ಯವುಳ್ಳ ವ್ಯಕ್ತಿಗಳ ಹಕ್ಕುಕಾಯ್ದೆ, 2016ರ ಅಡಿ (Rights of Persons with Disabilities Act, 2016) ಮಾನ್ಯತೆ ಪಡೆದಿರುವ ಗೃಹಾಧಾರಿತ ಶಿಕ್ಷಣವು (Home-based education-HBE) (ಎಚ್‌ಬಿಇ) ತೀವ್ರತರವಾದ ಬೌದ್ಧಿಕ/ದೈಹಿಕ ವೈಕಲ್ಯವನ್ನು ಹೊಂದಿರುವ ಮಕ್ಕಳಿಗೆ ಸ್ವತಂತ್ರವಾದ ಜೀವನ ಕೌಶಲ್ಯಗಳನ್ನು ಹೊಂದುವುದಕ್ಕೆ ಹಾಗೂ ಶಾಲಾ ವಿಚಾರ ಹಾಗೂ ಅವರ ಜೀವನ ನಿರ್ವಹಣೆಗೆ ಸಹಾಯ ಒದಗಿಸುವ ಗುರಿಯನ್ನು ಹೊಂದಿದೆ. ಎಚ್‌ಬಿಇಯನ್ನು ಆಯ್ಕೆ ಮಾಡಿಕೊಂಡಿರುವ ಹಲವು ಮಕ್ಕಳು ವಿವಿಧ ಬಗೆಯ ವೈಕಲ್ಯಗಳು, ತೀವ್ರತರವಾದ ಅರಿವಿನ ಸವಾಲುಗಳು (Cognitive challenges), ಸೆರೆಬ್ರಲ್ ಪಾಲ್ಸಿ (Cerebral palsy) ಹಾಗೂ ಆಟಿಸಂ ಸ್ಪೆಕ್ಟ್ರಮ್ ಡಿಸ್‌ಆರ್ಡರ್ (Autism Spectrum Disorder) ಅನ್ನು ಹೊಂದಿದವರಾಗಿದ್ದಾರೆ.

**ಸಮನ್ವಯ ಶಿಕ್ಷಣದ ಅಂಶಗಳು**

ನಿಜವಾದ ಅರ್ಥದಲ್ಲಿ ಸಮನ್ವಯ ಶಿಕ್ಷಣವನ್ನು ಅನುಷ್ಠಾನ-ಗೊಳಿಸಲು ಅಗತ್ಯವಾಗಿ ಬೇಕಾದ ಅಂಶಗಳು:



**ಶಿಕ್ಷಕರ ತರಬೇತಿ** | **ಬೋಧನಾ ಸಾಮಗ್ರಿ** | **ತಡೆ ರಹಿತ ವಾತಾವರಣ** | **ಸಮಾನ ಅವಕಾಶಗಳು** | **ಸಂಪೂರ್ಣ ಭಾಗವಹಿಸುವಿಕೆ** | **ಪೂರಕ ಪೋಷಕರ ಸೇವೆಗಳು** | **ತೊಡಗಿಸಿ ಕೊಳ್ಳುವಿಕೆ**

**ಗಮ್ಯವಿರದ ಒಂದು ಪಯಣ...**

ಬದಲಾವಣೆಯನ್ನು ತರುವಲ್ಲಿ ಪೋಷಕರ ಹಾಗೂ ಸಮುದಾಯದವರ ಒಳಗೊಳ್ಳುವಿಕೆ ಅಮೂಲ್ಯವಾದದ್ದು ಹಾಗೂ ಅದನ್ನು ಮುಂದುವರೆಸಿ-ಕೊಂಡು ಹೋಗಲು ಎಲ್ಲರನ್ನೂ ಒಟ್ಟುಗೂಡಿಸಿ ಪ್ರೋತ್ಸಾಹ ನೀಡುವುದು ಅವಶ್ಯಕ. ಪೋಷಕರು / ಸಮುದಾಯದ ಸದಸ್ಯರು ಮಗುವನ್ನು ಸ್ವೀಕರಿಸುವ ರೀತಿ ಮಗುವಿನ ವ್ಯಕ್ತಿತ್ವದ ಮೇಲೆ ಪ್ರಭಾವ ಬೀರುತ್ತದೆ ಹಾಗೂ ಅವನ/ಅವಳ ಬಗ್ಗೆ ಇತರೆ ಬಳಗದವರ / ಸಮುದಾಯದ ಸದಸ್ಯರ ಅಭಿಪ್ರಾಯ ಮತ್ತು ವರ್ತನೆಯನ್ನು ನಿರ್ಧರಿಸುತ್ತದೆ. ಇವೆಲ್ಲವೂ ಪ್ರತ್ಯೇಕ ಶಿಕ್ಷಣಕ್ಕಾಗಿ ಅಲ್ಪಾವಧಿ ಹಾಗೂ ದೀರ್ಘಾವಧಿ ಗುರಿಗಳನ್ನು ನಿರ್ಧರಿಸುವಲ್ಲಿಮಹತ್ವದ ಪಾತ್ರವನ್ನು ವಹಿಸುತ್ತವೆ.




ಸುಲಭವಾಗಿ ಏರಬಹುದಾದ ಬಸ್

**ಸಮಾನ ಅವಕಾಶಗಳು ಹಾಗೂ ಸಂಪೂರ್ಣ ಭಾಗವಹಿಸುವಿಕೆ**

ಹೆಚ್ಚಿನ ಅಗತ್ಯವಿರುವ ಮಕ್ಕಳಿಗೆ ಸಮಾನ ಅವಕಾಶಗಳು ಹಾಗೂ ಸಂಪೂರ್ಣ ಭಾಗವಹಿಸುವಿಕೆಯನ್ನು ಖಾತ್ರಿಪಡಿಸುವ ತತ್ತ್ವದ ಮೇಲೆ



ಸ್ಪರ್ಶಕ್ಕೆ ಸಿಗುವ ಮಾರ್ಗ

ಸಮನ್ವಯ ಶಿಕ್ಷಣವು ಆಧರಿಸಿದೆ. ವಿಭಿನ್ನ ಅಗತ್ಯಗಳನ್ನು ಹೊಂದಿರುವ ಮಕ್ಕಳಿಗೆ ಶೈಕ್ಷಣಿಕ ಹಾಗೂ ಶೈಕ್ಷಣಿಕವಲ್ಲದ ಚಟುವಟಿಕೆಗಳನ್ನು ಒದಗಿಸಲು ಶಾಲಾಸಂಸ್ಕೃತಿ, ನೀತಿ ಹಾಗೂ ವ್ಯವಹಾರಗಳನ್ನು ಬಹಳ ಬದ್ಧತೆಯಿಂದ ಪುನರ್‌ರಚಿಸುವುದು ಶಾಲಾ ಆಡಳಿತದ ಜವಾಬ್ದಾರಿಯಾಗಿರುತ್ತದೆ.

**ಅಡೆತಡೆರಹಿತ ಪರಿಸರ**

ಶಾಲಾ ಕಟ್ಟಡದಲ್ಲಿನ ಎಲ್ಲ ಜಾಗಗಳಿಗೆ ಹಾಗೂ ತರಗತಿಗಳಿಗೆ ಸುಲಭವಾಗಿ ಹೋಗಲು ಅನುವು ಮಾಡಿಕೊಡುವುದೇ ಸಮನ್ವಯದ ಕಡೆಗೆ ಮೊದಲ ಹೆಜ್ಜೆ. ಆನಂತರ ಬರುವುದೇ ಅನಿರ್ಬಂಧಿತ ಬೋಧನಾ-ಕಲಿಕಾ ವಾತಾವರಣ.

**ಪೂರಕ ಸೇವೆಗಳು**

ಮಕ್ಕಳ ಎಲ್ಲ ಶೈಕ್ಷಣಿಕ ಅಗತ್ಯಗಳನ್ನು ಪೂರೈಸಲು ಸಾಧ್ಯವಾದಷ್ಟು ಶಾಲೆಗಳಲ್ಲಿಯೇ ಸಮಗ್ರವಾದ ಪೂರಕ ಸೇವೆಗಳನ್ನು ಒದಗಿಸಬೇಕು. ಔದ್ಯೋಗಿಕ ಚಿಕಿತ್ಸೆ (Occupational therapy), ದೈಹಿಕಚಿಕಿತ್ಸೆ (Physiotherapy), ವಾಕ್ ಚಿಕಿತ್ಸೆ (Speech therapy), ಪ್ರಾಥಮಿಕ ಹಂತದಲ್ಲಿಯೇ ಮಧ್ಯವರ್ತಿ ತಂತ್ರ ಬಳಕೆ, (Early intervention), ಮನಶ್ಶಾಸ್ತ್ರೀಯ ಮೌಲ್ಯಮಾಪನ (Psychological assessment) ಹಾಗೂ ಆಪ್ತ ಸಮಾಲೋಚನೆ (Counseling) ಈ ತರಹದ ಸೇವೆಗಳು ಒಳಪಡುತ್ತವೆ. ವಿಶೇಷ ಶಿಕ್ಷಕರು ಒಂದು ತಂಡವಾಗಿ, ಮುಖ್ಯವಾಹಿನಿಯ ಶಿಕ್ಷಕರೊಂದಿಗೆ ಒಟ್ಟುಗೂಡಿ ಮಗುವಿನ ಪ್ರಗತಿಯ ಮೇಲ್ವಿಚಾರಣೆ ನಡೆಸುತ್ತಿರಬೇಕು.

**ಶಿಕ್ಷಕರ ತರಬೇತಿ**

ಪಾಠಮಾಡುವ ಹಾಗೂ ತರಗತಿಯನ್ನು ನಿರ್ವಹಿಸುವ ಶಿಕ್ಷಕರು ಸಮನ್ವಯ ಶಿಕ್ಷಣದ ಪರಿಕಲ್ಪನೆ ಹಾಗೂ ತತ್ತ್ವಗಳೆಡೆಗೆ ಸೂಕ್ಷ್ಮತೆಯನ್ನು ಬೆಳೆಸಿಕೊಳ್ಳುವಂತೆಯೂ, ಅದರತ್ತ ಗಮನಹರಿಸುವಂತೆಯೂ ಮಾಡುವುದು ಅತ್ಯಂತ ಅವಶ್ಯಕ. ಮೂಲಸೌಕರ್ಯಗಳು, ಪಠ್ಯಕ್ರಮವನ್ನು ಸುಲಭವಾಗಿ ಹೊಂದಿಸಿಕೊಳ್ಳುವುದು ಹಾಗೂ ಬೋಧನಾ ಕ್ರಮಗಳಲ್ಲಿ ಮಾಡಿಕೊಳ್ಳಬೇಕಾದ ಹೊಂದಾಣಿಕೆಗಳ ಬಗ್ಗೆ ಶಿಕ್ಷಕರು ತೆರೆದುಕೊಳ್ಳಬೇಕಾಗುತ್ತದೆ. ಸೇವಾ-ಪೂರ್ವ ಹಾಗೂ ಸೇವಾನಿರತ ಶಿಕ್ಷಕರಿಗೆ ಮರುಚೈತನ್ಯ ನೀಡುವಂತಹ ಶಿಕ್ಷಣ ಕಾರ್ಯಕ್ರಮಗಳು ಹಾಗೂ ಅಲ್ಪಾವಧಿ ತರಬೇತಿ ಕಾರ್ಯಕ್ರಮಗಳನ್ನು ಮುಂದುವರೆಸುವುದರಿಂದ ಅವರಿಗೊಂದು ಒಳನೋಟ ಸಿಕ್ಕಂತಾಗಿ ವಿವಿಧ ವೈಕಲ್ಯ ಹೊಂದಿರುವ ಮಕ್ಕಳ ವಿಭಿನ್ನತೆಗೆ ಪ್ರತಿಕ್ರಿಯಿಸಲು ಅವರನ್ನು ಸಿದ್ಧಗೊಳಿಸಿದಂತಾಗುತ್ತದೆ.

**ಸವಾಲುಗಳು**

ಸಮನ್ವಯ ಶಿಕ್ಷಣವನ್ನು ಅನುಷ್ಠಾನಗೊಳಿಸಲು ಇರುವ ಪ್ರಮುಖ ಸವಾಲುಗಳನ್ನು ಜಾಗತಿಕ ಅಧ್ಯಯನಗಳು ಪ್ರಕಟಿಸಿವೆ. ಕೆಳಗೆ ಕೊಟ್ಟಿರುವ ರೇಖಾಚಿತ್ರ ಅವನ್ನು ನಿರೂಪಿಸುತ್ತದೆ. ಮಾರ್ಪಡಿಸಿದ ಕಲಿಕಾ ಸಾಮಗ್ರಿಗಳ ಕೊರತೆ ಹಾಗೂ ಅನುದಾನದ ಅಭಾವ ಸಮಗ್ರ ವಿಧಾನದ ಬಗ್ಗೆ ಸೀಮಿತ ಮೆಚ್ಚುಗೆ ಹಾಗೂ ತಿಳುವಳಿಕೆ ಸುಲಭವಾಗಿ ನಿರ್ವಹಿಸಲಾಗದ ಮೂಲಸೌಕರ್ಯ ವಿಶೇಷ ತರಬೇತುದಾರರ ಹಾಗೂ ತರಬೇತಿ ಕಾರ್ಯಕ್ರಮಗಳ ಕೊರತೆ ವರ್ತನಾ ಅಡೆತಡೆಗಳು

| | | | | |
|---|---|---|---|---|
| **ವರ್ತನಾ ಅಡೆತಡೆಗಳು** | **ವಿಶೇಷ ತರಬೇತುದಾರರ ಹಾಗೂ ತರಬೇತಿ ಕಾರ್ಯಕ್ರಮಗಳ ಕೊರತೆ** | **ಸುಲಭವಾಗಿ ನಿರ್ವಹಿಸಲಾಗದ ಮೂಲ ಸೌಕರ್ಯ** | **ಸಮಗ್ರ ವಿಧಾನದ ಬಗ್ಗೆ ಸೀಮಿತ ಮೆಚ್ಚುಗೆ ಹಾಗೂ ತಿಳುವಳಿಕೆ** | **ಮಾರ್ಪಡಿಸಿದ ಕಲಿಕಾ ಸಾಮಗ್ರಿಗಳ ಕೊರತೆ ಹಾಗೂ ಅನುದಾನದ ಅಭಾವ** |

**ಸಮನ್ವಯ ಏಕೆ ಅವಶ್ಯಕ?**

ಸಮನ್ವಯದ ಅನೇಕ ಪ್ರಯೋಜನಗಳನ್ನು ಸಂಶೋಧನೆಯು ಸೂಚಿಸುತ್ತದೆ.

- ವಿದ್ಯಾರ್ಥಿಗಳು ಪರಸ್ಪರರ ವಿಶಿಷ್ಟವಾದ ಶಕ್ತಿಗಳನ್ನು ಹಾಗೂ ಸಾಮರ್ಥ್ಯಗಳನ್ನು ಮೆಚ್ಚಲು ಕಲಿಯುತ್ತಾರೆ.
- ಪರಸ್ಪರ ಸಹಾಯ ಮಾಡುವಂತೆ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸಿದಂತಾಗುತ್ತದೆ.
- ಹೆಚ್ಚುವರಿ ಅಗತ್ಯವಿರುವ ವಿದ್ಯಾರ್ಥಿಗಳು ನೈಸರ್ಗಿಕ ರೀತಿಯಲ್ಲಿ ಹಾಗೂ ನೈಸರ್ಗಿಕ ಪರಿಸರದಲ್ಲಿ ಸ್ನೇಹವನ್ನು ಬೆಳೆಸಿಕೊಳ್ಳುತ್ತಾರೆ.
- ವೈಕಲ್ಯ ಹೊಂದಿರುವ ಜನರೆಡೆಗೆ ಸಕಾರಾತ್ಮಕ ಭಾವನೆಗಳನ್ನು ಬೆಳೆಸಿಕೊಳ್ಳಲು ವೈಕಲ್ಯ ಇಲ್ಲದೇ ಇರುವ ವಿದ್ಯಾರ್ಥಿಗಳಿಗೆ ಒಂದು ಅವಕಾಶ ಸಿಗುತ್ತದೆ.
- ಸಮುದಾಯದೊಡನೆ ಅವಿನಾಭಾವ ಸಂಬಂಧ ಹೊಂದಿದ್ದೇವೆ ಎಂಬುವುದು ವಿಶೇಷ ಅಗತ್ಯ ಬೇಕಾದ ವಿದ್ಯಾರ್ಥಿಗಳಲ್ಲಿ ಒಂದು ಬಗೆಯ ಆತ್ಮಗೌರವವನ್ನು ಹಾಗೂ ಏನನ್ನೋ ಸಾಧಿಸಿದ್ದೇವೆ ಎಂಬ ಭಾವನೆಯನ್ನು ಹೊಂದುವಲ್ಲಿ ಸಹಾಯ ಮಾಡುತ್ತದೆ.
- ಸಾಮಾನ್ಯವಾಗಿ ವಿದ್ಯಾರ್ಥಿಗಳು ಕಲಿಯಲೇಬೇಕು ಎಂದು ಅಪೇಕ್ಷಿಸುವ ಸಾಮಾಜಿಕ ವರ್ತನೆಗಳನ್ನು ಪರಸ್ಪರರಿಂದ ಬಹಳ ಉತ್ತಮವಾಗಿ ಕಲಿಯುತ್ತಾರೆ.
- ಮಕ್ಕಳು ತಮ್ಮ ಬೆಳವಣಿಗೆಯ ಸಾಮರ್ಥ್ಯದ ಮಟ್ಟವನ್ನು ತಲುಪಿ ಎಲ್ಲ ಪರಿಸರದಲ್ಲೂ ಹೊಂದಿಕೊಳ್ಳಲು ಕಲಿಯುತ್ತಾರೆ.

**ಅಮರ ಜ್ಯೋತಿಯಲ್ಲಿ ವಿಶೇಷ–ಅಗತ್ಯ ಶಿಕ್ಷಣದ ಉತ್ತೇಜನ**

ಪುನರ್ವಸತಿಯ ಬಗೆಗೆ ಸಮಗ್ರ ವಿಧಾನ ಹೊಂದಿರುವ ದೆಹಲಿಯ ಅಮರ್ ಜ್ಯೋತಿ ಚಾರಿಟೇಬಲ್ ಟ್ರಸ್ಟ್ (ಎಜೆಸಿಟಿ), 1981ರಲ್ಲಿ ಸಂಯೋಜಿತ ಹಾಗೂ ಸಮನ್ವಯ ಶಿಕ್ಷಣವನ್ನು ಪ್ರಾರಂಭಿಸಿದ ಭಾರತದಲ್ಲಿನ ಸಂಸ್ಥೆಗಳಲ್ಲಿ ಅಗ್ರಸ್ಥಾನದಲ್ಲಿದೆ. ಒಂದು ಮರದ ಕೆಳಗೆ ಆರಂಭವಾದ ಈ ಶಾಲೆಯಲ್ಲಿ ಮಕ್ಕಳ ಸಮಗ್ರ ಅಭಿವೃದ್ಧಿಗಾಗಿ ಬಹುಶಿಸ್ತಿನ ವಿಧಾನಗಳನ್ನು ಅಳವಡಿಸಿಕೊಳ್ಳಲಾಗಿದೆ. ಒಂದು ತರಗತಿಯಲ್ಲಿ ಮೂವತ್ತು ಮಕ್ಕಳಿದ್ದು ಅದರಲ್ಲಿ ಹದಿನೈದು ಮಕ್ಕಳು ವಿಶೇಷ ಅಗತ್ಯವುಳ್ಳ ಮಕ್ಕಳು.

ಇಂದು ಶಾಲೆಯು ಪರಿಷ್ಕೃತ ಎನ್‌ಸಿಇಆರ್‌ಟಿ ಪಠ್ಯ–ಕ್ರಮವನ್ನು ಅನುಸರಿಸುತ್ತದೆ ಹಾಗೂ ಶಿಕ್ಷಣ ನಿರ್ದೇಶನಾಲಯದ ಮಾನ್ಯತೆಯನ್ನು ಪಡೆದಿದೆ. ಪ್ರಸ್ತುತ 510 ವಿದ್ಯಾರ್ಥಿಗಳಿದ್ದು ಅದರಲ್ಲಿ ವೈಕಲ್ಯ ಇರುವ ಹಾಗೂ ಇಲ್ಲದಿರುವವರು ಬಹುತೇಕ ಸಮಾನ ಸಂಖ್ಯೆಯಲ್ಲಿದ್ದಾರೆ. ಇತ್ತೀಚೆಗೆ, ಒಂದು ಹೊಸ ತರಗತಿಯನ್ನು ಆರಂಭಿಸಲಾಗಿದ್ದು, ಅದರಲ್ಲಿ ಅಂಧ ಮತ್ತು ಶ್ರವಣದೋಷವುಳ್ಳ ಹದಿನಾರು ಮಕ್ಕಳನ್ನು

**ಅಮರ ಜ್ಯೋತಿಯಲ್ಲಿ ವಿಶೇಷ–ಅಗತ್ಯ ಶಿಕ್ಷಣದ ಉತ್ತೇಜನ**

ಪುನರ್ವಸತಿಯ ಬಗೆಗೆ ಸಮಗ್ರ ವಿಧಾನ ಹೊಂದಿರುವ ದೆಹಲಿಯ ಅಮರ್ ಜ್ಯೋತಿ ಚಾರಿಟೇಬಲ್ ಟ್ರಸ್ಟ್ (ಎಜೆಸಿಟಿ), 1981ರಲ್ಲಿ ಸಂಯೋಜಿತ ಹಾಗೂ ಸಮನ್ವಯ ಶಿಕ್ಷಣವನ್ನು ಪ್ರಾರಂಭಿಸಿದ ಭಾರತದಲ್ಲಿನ ಸಂಸ್ಥೆಗಳಲ್ಲಿ ಅಗ್ರಸ್ಥಾನದಲ್ಲಿದೆ. ಒಂದು ಮರದ ಕೆಳಗೆ ಆರಂಭವಾದ ಈ ಶಾಲೆಯಲ್ಲಿ ಮಕ್ಕಳ ಸಮಗ್ರ ಅಭಿವೃದ್ಧಿಗಾಗಿ ಬಹುಶಿಸ್ತಿನ ವಿಧಾನಗಳನ್ನು ಅಳವಡಿಸಿಕೊಳ್ಳಲಾಗಿದೆ. ಒಂದು ತರಗತಿಯಲ್ಲಿ ಮೂವತ್ತು ಮಕ್ಕಳಿದ್ದು ಅದರಲ್ಲಿ ಹದಿನೈದು ಮಕ್ಕಳು ವಿಶೇಷ ಅಗತ್ಯವುಳ್ಳ ಮಕ್ಕಳು.

ಇಂದು ಶಾಲೆಯು ಪರಿಷ್ಕೃತ ಎನ್‌ಸಿಇಆರ್‌ಟಿ ಪಠ್ಯಕ್ರಮವನ್ನು ಅನುಸರಿಸುತ್ತದೆ ಹಾಗೂ ಶಿಕ್ಷಣ ನಿರ್ದೇಶನಾಲಯದ ಮಾನ್ಯತೆಯನ್ನು ಪಡೆದಿದೆ. ಪ್ರಸ್ತುತ 510 ವಿದ್ಯಾರ್ಥಿಗಳಿದ್ದು ಅದರಲ್ಲಿ ವೈಕಲ್ಯ ಇರುವ ಹಾಗೂ ಇಲ್ಲದಿರುವವರು ಬಹುತೇಕ ಸಮಾನ ಸಂಖ್ಯೆಯಲ್ಲಿದ್ದಾರೆ. ಇತ್ತೀಚೆಗೆ, ಒಂದು ಹೊಸ ತರಗತಿಯನ್ನು ಆರಂಭಿಸಲಾಗಿದ್ದು, ಅದರಲ್ಲಿ ಅಂಧ ಮತ್ತು ಶ್ರವಣದೋಷವುಳ್ಳ ಹದಿನಾರು ಮಕ್ಕಳನ್ನು ಸೇರಿಸಿಕೊಳ್ಳಲಾಗಿದ್ದು, ಅವರು ಗೃಹಾಧಾರಿತ (Home-based) ಹಾಗೂ ಕೇಂದ್ರ ಆಧಾರಿತ ತರಬೇತಿ (Centre-based training)ಯನ್ನು ಪಡೆಯುತ್ತಿದ್ದಾರೆ. ಶಿಶುವಿಹಾರ–ದಿಂದಲೇ ಆರಂಭವಾಗುವ ಶೈಕ್ಷಣಿಕ ಒಳಗೊಳ್ಳುವಿಕೆಯು ವಿದ್ಯಾರ್ಥಿಗಳಲ್ಲಿ ಸಾಮಾಜಿಕ ಒಳಗೊಳ್ಳುವಿಕೆಯ ಭಾವವನ್ನು ಪೋಷಿಸುವುದಕ್ಕೆ ಸಹಾಯ ಮಾಡುತ್ತದೆ. ಈ ಟ್ರಸ್ಟ್ ಗ್ವಾಲಿಯರ್‌ನಲ್ಲಿಯೂ (ಮಧ್ಯಪ್ರದೇಶ) ಒಂದು ಶಾಖೆಯನ್ನು ಹೊಂದಿದ್ದು, 1989ರಿಂದ ಇದೇ ರೀತಿಯ ಸೇವೆಗಳನ್ನು ಒದಗಿಸುತ್ತಿದೆ.

ಇಲ್ಲಿ ಸಂಯೋಜಿತ ಕ್ರೀಡೆಗಳು ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಂತಹ ವಿವಿಧ ಪಠ್ಯೇತರ ಚಟುವಟಿಕೆಗಳಲ್ಲಿ ಭಾಗವಹಿಸಲು ಮಕ್ಕಳನ್ನು ಪ್ರೋತ್ಸಾಹಿಸಲಾಗುತ್ತದೆ. ಕಂಪ್ಯೂಟರ್ ಅಪ್ಲಿಕೇಷನ್ಸ್, ಸೌಂದರ್ಯ, ಸಂಸ್ಕೃತಿ, ಕಲೆ ಮತ್ತು ಕರಕುಶಲತೆ, ಕಸೂತಿಕಲೆ, ಆಭರಣ ತಯಾರಿಕೆ ಹಾಗೂ ಹೊಲಿಗೆಯಂತಹ ಪೂರ್ವ ವೃತ್ತಿಪರ ತರಬೇತಿಯನ್ನು ವಿದ್ಯಾರ್ಥಿಗಳ ಸರ್ವಾಂಗೀಣ ಬೆಳವಣಿಗೆಗೆ ರೂಪಿಸಲಾಗುವ ಪಠ್ಯಕ್ರಮದ ಪ್ರಮುಖ ಭಾಗವಾಗಿ ಪರಿಗಣಿಸಲಾಗುತ್ತದೆ. 3ನೆಯ ಇಯತ್ತೆಯಿಂದ ಮೇಲ್ಪಟ್ಟು ಎಲ್ಲ ವಿದ್ಯಾರ್ಥಿಗಳು ತಮ್ಮ ಆಸಕ್ತಿಗೆ ಹೊಂದಿಕೆಯಾಗುವಂತಹ ಒಂದು ವೃತ್ತಿಯನ್ನು ಕಡ್ಡಾಯವಾಗಿ ಆರಿಸಿಕೊಳ್ಳಲೇಬೇಕು. ಇದರಲ್ಲಿನ ಕೆಲವು ಕೌಶಲ ಯೋಜನೆಗಳು ರಾಷ್ಟ್ರೀಯ ಮುಕ್ತ ಶಿಕ್ಷಣ ಸಂಸ್ಥೆ (National Institute of Open Schooling) ಹಾಗೂ ರಾಜ್ಯ ವೃತ್ತಿಪರ ತರಬೇತಿ ಮಂಡಳಿಯ (State Councilfor Vocational Training) ಮಾನ್ಯತೆಯನ್ನು ಪಡೆದಿವೆ. ಕ್ರೀಡೆಗಳು ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಒಳಗೊಳ್ಳುವಿಕೆ

ಮಕ್ಕಳು ಓದಲು ಹಾಗೂ ಬರೆಯಲು ಕಲಿಯುವುದಕ್ಕೂ ಮುಂಚೆ ಆಟವಾಡುತ್ತಾರೆ. ಮಗುವಿನ ಬೌದ್ಧಿಕ, ಸಾಮಾಜಿಕ, ದೈಹಿಕ ಹಾಗೂ ಮಾನಸಿಕ ಬೆಳವಣಿಗೆಗೆ ಸಹಾಯ–ವಾಗುವಂತೆ ಬಾಸ್ಕೆಟ್‌ಬಾಲ್, ಟೇಬಲ್ ಟೆನ್ನಿಸ್ ಮುಂತಾದ ಕ್ರೀಡೆಗಳು ಹಾಗೂ ಸಾಂಸ್ಕೃತಿಕ ಚಟುವಟಿಕೆಗಳನ್ನು ಉತ್ತೇಜಿಸಲಾಗುತ್ತದೆ. ಮಕ್ಕಳು ತಮ್ಮ ಸಾಮರ್ಥ್ಯವನ್ನು ಬೆಳೆಸಿಕೊಳ್ಳುತ್ತ ವಿವಿಧ ಪರಿಸರಗಳಿಗೆ ಹೊಂದಿಕೊಳ್ಳುತ್ತಾರೆ. ಅಮರ್ ಜ್ಯೋತಿಯ ವಿದ್ಯಾರ್ಥಿಗಳು ಹಲವಾರು ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಪಂದ್ಯಗಳಲ್ಲಿ ಭಾಗವಹಿಸುತ್ತಾರೆ.





**ಹೆಚ್ಚುವರಿ ಶೈಕ್ಷಣಿಕ ಪೂರಕ ಸೇವೆಗಳು**

ಆಂಗ್ಲ ಪ್ರಯೋಗಾಲಯದಲ್ಲಿ ಮಕ್ಕಳನ್ನು ಸಂವಹನ ಕೌಶಲ, ಚರ್ಚಾಸ್ಪರ್ಧೆ ಹಾಗೂ ಭಾಷಣಕಲೆಗಳಲ್ಲಿ ತರಬೇತು-ಗೊಳಸಲಾಗುತ್ತದೆ ಹಾಗೂ ವಿಜ್ಞಾನ ಪ್ರಯೋಗಾಲಯವು ಪರಿಕಲ್ಪನೆಗಳ ಪ್ರಾಯೋಗಿಕ ಕಲಿಕೆಗೆ ಅನುಕೂಲ ಒದಗಿಸುತ್ತದೆ. ಹಾಗೆಯೇ, ಕಂಪ್ಯೂಟರ್ ಪ್ರಯೋಗಾಲಯ ಹಾಗೂ ಸ್ಮಾರ್ಟ್ ತರಗತಿಗಳು (Smart class) ಕಲಿಕೆಯನ್ನು ಉತ್ತಮಗೊಳಸುತ್ತವೆ. ಅಮರ್ ಜ್ಯೋತಿಯು 3, 5, 8, 10 ಹಾಗೂ 12 ಇಯತ್ತೆಗಳಗೆ ರಾಷ್ಟ್ರೀಯ ಮುಕ್ತ ಶಿಕ್ಷಣ ಸಂಸ್ಥೆಯಿಂದ ಮಾನ್ಯತೆ ಪಡೆದಿರುವ ಕೇಂದ್ರವಾಗಿದೆ. ಅನನುಕೂಲ ಪರಿಸ್ಥಿತಿಯಲ್ಲಿರುವ ಹೆಚ್ಚುವರಿ ಸಹಾಯದ ಅಗತ್ಯವಿರುವವರಿಗೂ ಶಿಕ್ಷಣವನ್ನು ಒದಗಿಸಲು ಈ ಸಂಸ್ಥೆಯು ಮಾನ್ಯತೆಯನ್ನು ಪಡೆದಿದೆ.

**ಚಿಕಿತ್ಸಾತ್ಮಕ ಮಧ್ಯವರ್ತೀ ತಂತ್ರಗಳು**

ವೈದ್ಯಕೀಯ ವೃತ್ತಿಯವರು ಹಾಗೂ ಔಷಧಿ, ಶಸ್ತ್ರಚಿಕಿತ್ಸೆ, ಮೂಳೆಚಿಕಿತ್ಸೆ (Orthopaedics), ಇಎನ್‌ಟಿ ಹಾಗೂ ಶಿಶು ವೈದ್ಯಕೀಯದಂತಹ (Paediatrics) ಕ್ಷೇತ್ರಗಳಲ್ಲಿ ತಜ್ಞರಾದವರು ಉಚಿತ ಸಮಾಲೋಚನೆ ಹಾಗೂ ರೋಗವನ್ನು ಪತ್ತೆ ಮಾಡುವ ಸೇವೆಗಳನ್ನು (Diagnostic services) ಒದಗಿಸುತ್ತಾರೆ. ತಡವಾದ ಬೆಳವಣಿಗೆ ಇರುವ ಮಕ್ಕಳಗೆ ಔದ್ಯೋಗಿಕ ಚಿಕಿತ್ಸೆ (Occupational therapy), ದೈಹಿಕಚಿಕಿತ್ಸೆ (Physiotherapy), ವಾಕ್ ಶ್ರವಣ ಘಟಕ (Speech and audiological unit) ಹಾಗೂ ಪ್ರಾಥಮಿಕ ಹಂತದ ಮಧ್ಯಸ್ಥಿಕೆ ಘಟಕ (Early intervention unit)ಗಳಂತಹ ಹಲವಾರು ಘಟಕಗಳು ಅವರ ಬೆಳವಣಿಗೆಯಲ್ಲಿ ಬಹಳ ಪ್ರಮುಖವಾದ ಪಾತ್ರವನ್ನು ವಹಿಸುತ್ತವೆ. ಚಿಕಿತ್ಸಕ ಸೇವೆಗಳಲ್ಲದೆ ಚಲನಶೀಲತೆಗೆ ಬೇಕಾದ ಸಹಾಯಗಳನ್ನೂ ಒದಗಿಸಲಾಗುತ್ತದೆ. ಸ್ವಯಂ-ಪ್ರೇರಿತರಾಗಿ ಉಚಿತ ಸೇವೆಗಳನ್ನು ಒದಗಿಸಲು ಮುಂದೆ ಬರುವ ವೈದ್ಯರಿಂದ ದೋಷ ಸರಿಪಡಿಸುವ ಶಸ್ತ್ರಚಿಕಿತ್ಸೆಗಳೂ (Corrective surgeries) ನಡೆಯುತ್ತವೆ.

ಮನೋವೈಜ್ಞಾನಿಕ, ವರ್ತನೆ ಅಥವಾ ಶೈಕ್ಷಣಿಕ ವಿಷಯಗಳಗೆ ಸಂಬಂಧಿಸಿದಂತೆ ಮಕ್ಕಳು ಯಾವುದೇ ತೊಂದರೆಗಳನ್ನು ಎದುರಿಸುತ್ತಿದ್ದಲ್ಲಿ, 'ಮಕ್ಕಳ ಮಾರ್ಗದರ್ಶನ ಚಿಕಿತ್ಸಾಲಯ'ಗಳಲ್ಲಿ (Child guidance clinic) ಮೌಲ್ಯ-ಮಾಪನಕ್ಕೆ ಒಳಪಡಿಸಿ, ಅವರಿಗೆ ಆಪ್ತಸಮಾಲೋಚನೆಯನ್ನು ನೀಡಿ ಸೂಕ್ತ ಮಧ್ಯಸ್ಥಿಕೆಗಾಗಿ ತಜ್ಞರ ಬಳಗೆ ಕಳುಹಿಸಲಾಗುತ್ತದೆ. ಈ ಘಟಕವು ಹೆಚ್ಚುವರಿ ಅಗತ್ಯವಿರುವ ಮಕ್ಕಳಗೆ ಯಾವ ರೀತಿಯ ಶಿಕ್ಷಣದ ವಿಧಾನದಿಂದ ಪ್ರಯೋಜನವಾಗಬಹುದು ಎಂಬುದರ ಕುರಿತು ಪೋಷಕರಿಗೆ ಸಲಹೆಗಳನ್ನು ನೀಡುತ್ತದೆ. ಅಲ್ಲದೇ ಹೆಚ್ಚುವರಿ ಅಗತ್ಯವಿರುವ ಮಕ್ಕಳಪಾಲನೆಯಲ್ಲಿ ಎದುರಾಗುವ ವಿಭಿನ್ನ ಬಗೆಯ ಸಮಸ್ಯೆಗಳ ಕುರಿತು ಚರ್ಚಿಸಲು ಪೋಷಕರ ಬೆಂಬಲ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತದೆ.

**ಸಾಮರ್ಥ್ಯ ಅಭಿವೃದ್ಧಿ ಕಾರ್ಯಕ್ರಮಗಳು**

ಸಮನ್ವಯ ಶಿಕ್ಷಣವನ್ನು ಅನುಷ್ಠಾನಗೊಳಸಲು ಎದುರಾಗುತ್ತಿರುವ ಒಂದು ಮುಖ್ಯವಾದ ಸವಾಲೆಂದರೆ ತರಬೇತಿ ಹೊಂದಿರುವ ಮಾನವ ಸಂಪನ್ಮೂಲಗಳ ಕೊರತೆ. ಈ ಬೇಡಿಕೆಯನ್ನು ಪೂರೈಸಲು ಅಮರ್ ಜ್ಯೋತಿ ಹಲವಾರು ಮಾನವ ಸಂಪನ್ಮೂಲ ಅಭಿವೃದ್ಧಿ ಕಾರ್ಯಕ್ರಮಗಳನ್ನು ನಡೆಸುತ್ತಿದೆ. ದೆಹಲಿ ವಿಶ್ವವಿದ್ಯಾಲಯದೊಂದಿಗೆ ಸಂಯೋಜಿತವಾಗಿರುವ ದೈಹಿಕ ಚಿಕಿತ್ಸೆಯಲ್ಲಿ (Physiotherapy)ಸ್ನಾತಕ ಹಾಗೂ ಪದವಿ ಹಂತದ ಕಾರ್ಯಕ್ರಮಗಳು ದೈಹಿಕ ಚಿಕಿತ್ಸಕರ ಕೌಶಲ ಬೆಳವಣಿಗೆಗೆ ಸಹಕಾರಿಯಾಗಿದೆ. ಭಾರತೀಯ ಪುನರ್ವಸತಿ ಮಂಡಳ (Rehabilitation Council of India -RCI)ಯ ಮಾನ್ಯತೆ ಪಡೆದಿರುವ, ಮಾನಸಿಕ ಅಸ್ವಸ್ಥತೆ, ಶ್ರವಣ ಮತ್ತು ದೃಷ್ಟಿ ದೋಷಗಳ ವಿಷಯಗಳಗೆ ಸಂಬಂಧಿಸಿ ವಿಶೇಷ ಶಿಕ್ಷಣ ನೀಡುವ ಡಿಪ್ಲೊಮಾ ಕಾರ್ಯಕ್ರಮಗಳುಸಹ ನಡೆಸಲ್ಪಡುತ್ತಿವೆ. ಇದಲ್ಲದೆ, ಮುಖ್ಯವಾಹಿನಿಯ ಶಾಲೆಯ ಶಿಕ್ಷಕರನ್ನು ಸಜ್ಜುಗೊಳಸಲು ಹಲವಾರು ಅಲ್ಪಾವಧಿ ತರಬೇತಿ ಕಾರ್ಯಕ್ರಮಗಳನ್ನು ಅಗತ್ಯಕ್ಕೆ ತಕ್ಕಂತೆ ರೂಪಿಸಿ ನಡೆಸಲಾಗುತ್ತಿದೆ.

**ಮುಂದಿನ ದಾರಿ**

ಸಮನ್ವಯದ ಕನಸನ್ನು ನನಸಾಗಿಸುವುದಕ್ಕೆ, ಸಮಾಜದ ವಿವಿಧ ಕ್ಷೇತ್ರಗಳು ಒಂದಕ್ಕೊಂದು ಪೂರಕವಾಗಿದ್ದು ಜವಾಬ್ದಾರಿಗಳನ್ನು ಸಮಾನವಾಗಿ ಹಂಚಿಕೊಳ್ಳುವುದು ಅತ್ಯಗತ್ಯವಾಗಿದೆ. ಸಮನ್ವಯದ ಸಾರ್ವತ್ರೀಕರಣವನ್ನು ಪರಿಣಾಮಕಾರಿಯಾಗಿ ಒಮ್ಮುಖವಾಗಿಸುವುದಕ್ಕೆ ಸಂಪನ್ಮೂಲಗಳನ್ನು ಹಾಗೂ ಪರಿಣತಿಯನ್ನು ಸಜ್ಜುಗೊಳಸುವುದೂ ಒಂದು ಮಂತ್ರವಾಗಿದ್ದು (A mantra of convergence) ಈ ನಿಟ್ಟಿನಲ್ಲಿ 2018ರಲ್ಲಿ ಸಮನ್ವಯ

ಶಿಕ್ಷಣದ ಐದನೆಯ ಅಂತಾರಾಷ್ಟ್ರೀಯ ಸಮ್ಮೇಳನವು (International Conference on Inclusive Education) ನವದೆಹಲಿಯಲ್ಲಿ ನಡೆದಿದ್ದು ಈ ಕೆಳಗಿನ ಶಿಫಾರಸ್ಸುಗಳನ್ನು ಮಾಡಿದೆ.

**ರಾಷ್ಟ್ರೀಯ ಶಿಕ್ಷಣ ನೀತಿಗಳು ಸಮನ್ವಯ ಶಿಕ್ಷಣವನ್ನು ಸಾಮಾನ್ಯ ಶಿಕ್ಷಣ ವ್ಯವಸ್ಥೆಯಲ್ಲಿ ಪರಿಣಾಮಕಾರಿಯಾಗಿ ವಿಲೀನಗೊಳಿಸಬೇಕು** :

- ಶಿಕ್ಷಕರ ತರಬೇತಿಗಾಗಿ ಸಂಪನ್ಮೂಲಗಳನ್ನು ನಿಗದಿಪಡಿಸಬೇಕು ಹಾಗೂ ವಿಶೇಷವಾಗಿ ಗ್ರಾಮೀಣ ಪ್ರದೇಶದ ಮತ್ತು ಅಂಚಿನಲ್ಲಿರುವ ಸಮುದಾಯಗಳಿಗೆ ಸಮನ್ವಯ ಶಿಕ್ಷಣವನ್ನು ಪ್ರೋತ್ಸಾಹಿಸಬೇಕು.
- ಮಾದರಿ ಸಮನ್ವಯ ಶಾಲೆಗಳನ್ನು ಆರಂಭಿಸುವುದು.
- ಸಮನ್ವಯ ಶಿಕ್ಷಣದ ಸಾರ್ವತ್ರೀಕರಣವನ್ನು ಖಾತರಿ-ಪಡಿಸಿಕೊಳ್ಳಲು ನಿಗದಿತ ಗಡುವು ಹೊಂದಿದ ಒಂದು ಕಾರ್ಯಯೋಜನೆಯನ್ನು ಸೇರಿಸುವುದು.

ಕಾರ್ಯಗತಗೊಳಿಸುವವರು ಹಾಗೂ ಸಮುದಾಯದವರ ನಡುವೆ ಹೆಚ್ಚಿನ ಅರಿವನ್ನು ಮೂಡಿಸಲು ಬಹು-ವಲಯ ಹಾಗೂ ಅಂತರ-ವಲಯ ಸಂಪರ್ಕಗಳನ್ನು ಖಾತರಿಪಡಿಸುವ ಯೋಜನೆಗಳನ್ನು ಸೇರಿಸುವುದು. ಶಿಕ್ಷಕ ತರಬೇತಿ ಕಾರ್ಯಕ್ರಮಗಳು (ಪ್ರವೀಣ ತರಬೇತುದಾರರಿಗೂ ಸೇರಿದಂತೆ):

- ತರಬೇತಿಯಲ್ಲಿ ಪಾಲ್ಗೊಂಡಿರುವ ಶಿಕ್ಷಕರನ್ನೂ ಮೌಲ್ಯ-ಮಾಪನಕ್ಕೆ ಒಳಪಡಿಸುವಂತೆ ವಿನ್ಯಾಸಗೊಳಿಸಬೇಕು.
- ಸೂಕ್ಷ್ಮ ಕೌಶಲಗಳು, ಸಾಮಾಜಿಕ/ಮಾನಸಿಕ ಕಲಿಕೆಯನ್ನು ಸಮನ್ವಯ ಶಿಕ್ಷಣದಲ್ಲಿ ಅಳವಡಿಸಲು ಬೇಕಾದ ಸಾಮರ್ಥ್ಯ ಹೊಂದಬೇಕು.

**ಶಿಕ್ಷಣ ವ್ಯವಸ್ಥೆಯು:**

- ವಿದ್ಯಾರ್ಥಿಗಳು, ಪೋಷಕಳು, ಶಾಲಾ ವ್ಯವಸ್ಥಾಪಕರು, ಶಿಕ್ಷಕರು ಹಾಗೂ ಸಹಾಯಕ ಸಿಬ್ಬಂದಿಗಳನ್ನು ಶಿಕ್ಷಣ ವ್ಯವಸ್ಥೆಯಲ್ಲಿ ಸಮನ್ವಯದ ಅನಿವಾರ್ಯತೆಯ ಕುರಿತು ಸಂವೇದನಾ-ಶೀಲರನ್ನಾಗಿ ಮಾಡಬೇಕು.
- ಅಗತ್ಯವಿರುವಷ್ಟು ಬೆಂಬಲ ವ್ಯವಸ್ಥೆಗಳು ಇರುವಂತೆ ಖಚಿತಪಡಿಸಬೇಕು.
- ಸಂಚಾರಕ್ಕೆ ಅನುಕೂಲವಾಗುವಂತಹ ಹಾಗೂ ಸ್ವತಂತ್ರವಾಗಿ ಕಾರ್ಯನಿರ್ವಹಿಸಲು ಬೇಕಾದ ಸೇವೆಗಳನ್ನು ವಿಶೇಷ ಅಗತ್ಯ ಬೇಕಾದ ಕಲಿಕಾರ್ಥಿಗಳಿಗೆ ಒದಗಿಸಬೇಕು.
- ಶಿಕ್ಷಣಶಾಸ್ತ್ರ ಸುಧಾರಣೆಗಳು: ಕಲಿಕಾರ್ಥಿಗಳ ಅಗತ್ಯಕ್ಕೆ ಅನುಗುಣವಾಗಿ ಬದಲಾಯಿಸಲು ಅವಕಾಶವಿರುವ ಪಠ್ಯಕ್ರಮ ಹಾಗೂ ಮೌಲ್ಯಮಾಪನವನ್ನು ಒದಗಿಸಬೇಕು.
- ಉಪ ಶೈಕ್ಷಣಿಕ ಚಟುವಟಿಕೆಗಳಲ್ಲಿಯೂ ಎಲ್ಲ ಕಲಿಕಾರ್ಥಿಗಳು ಭಾಗವಹಿಸುವುದಕ್ಕೆ ಅವಕಾಶ ಒದಗಿಸಬೇಕು.
- ಚಾಲ್ತಿಯಲ್ಲಿರುವ ವಿಜ್ಞಾನ, ವಾಣಿಜ್ಯ ಹಾಗೂ ಮಾನವಿಕ ವಿಭಾಗಗಳೊಡನೆ ಸವಾಲು ಎದುರಿಸುತ್ತಿರುವ ಕಲಿಕಾರ್ಥಿ-ಗಳಿಗಾಗಿ 'ರಚನಾತ್ಮಕ ವಿಭಾಗ' (Creative stream) ಎಂಬಂತಹ ಪರ್ಯಾಯಗಳನ್ನೂ ಪರಿಗಣಿಸಬೇಕು.
- ಪಠ್ಯಕ್ರಮದ ಭಾಗವಾಗಿ ಉಪಬಂಧಗಳು/ಸಾಮರ್ಥ್ಯ ಬೆಳೆಸುವ ಕೌಶಲಗಳು/ ವೃತ್ತಿಪರ ತರಬೇತಿಗಳನ್ನು ಸೇರಿಸಬೇಕು. ರಾಷ್ಟ್ರೀಯ ಮುಕ್ತ ಶಾಲೆಗಳಲ್ಲಿ ಕೌಶಲಗಳು/ವೃತ್ತಿಪರ ತರಬೇತಿಗಳನ್ನು ಹೆಚ್ಚುವರಿ ಆಯ್ಕೆಗಳಾಗಿ ಒದಗಿಸಬೇಕು.
- ಕಲಿಕೆಯ ಸಾರ್ವಕಾಲಿಕ ವಿನ್ಯಾಸವು ರೂಢಿಗತ-ವಾಗುವುದನ್ನು ಖಚಿತಪಡಿಸಿಕೊಳ್ಳುವುದರತ್ತ ಕೆಲಸವಾಗಬೇಕು. ಮಾಹಿತಿ ಹಾಗೂ ಸಂಶೋಧನಾ ವ್ಯವಸ್ಥೆಗಳು :
- ನೀತಿಗಳು ಹಾಗೂ ಅವುಗಳನ್ನು ಕಾರ್ಯಗತಗೊಳಿಸುವುದರ ನಡುವೆ ಇರುವ ಅಂತರವನ್ನು ಪರಿಹರಿಸಲು ಬೇಕಾದ ಸಂಶೋಧನೆಗಳನ್ನು ಕಾರ್ಯರೂಪಕ್ಕೆ ತರಲು ವ್ಯವಸ್ಥೆಗಳನ್ನು ಸ್ಥಾಪಿಸಬೇಕು/ ಬಲಪಡಿಸಬೇಕು.
- ಸಾಕ್ಷ್ಯಾಧಾರಿತ ನೀತಿನಿರೂಪಣೆ/ಪರಿಷ್ಕರಣೆಗಳನ್ನು ತಿಳಿಸಲು ಬೇಕಾದ ಮಾಹಿತಿಗಳ ದತ್ತಾಂಶ ಸಂಗ್ರಹವನ್ನು ಸ್ಥಾಪಿಸಬೇಕು.
- ಎಲ್ಲ ಕಲಿಕಾರ್ಥಿಗಳಲ್ಲಿ ಹೊರಗುಳಿಯುವವರು ಪರಿವರ್ತನೆಗಳು ಹಾಗೂ ಶೈಕ್ಷಣಿಕ ಸಾಧನೆಗಳ ಮಾಹಿತಿಯನ್ನು ಆಗಿಂದಾಗ್ಗೆ ಕಲೆಹಾಕಬೇಕು. ಸಹಭಾಗಿತ್ವವನ್ನು ಬಲಪಡಿಸುವುದು :
- ಸಮನ್ವಯ ಶಿಕ್ಷಣದ ಪರಿಣಾಮಕಾರಿ ಅನುಷ್ಠಾನವನ್ನು ಖಚಿತಪಡಿಸಿಕೊಳ್ಳಲು ಶೈಕ್ಷಣಿಕ ಸಂಸ್ಥೆಗಳು, ಸಮುದಾಯಗಳು, ಕುಟುಂಬಗಳು ಹಾಗೂ ಸ್ಥಳೀಯ ಸರ್ಕಾರಗಳ ನಡುವಿನ ಸಹಭಾಗಿತ್ವವನ್ನು ಉತ್ತೇಜಿಸುವುದು.
- ಸಮನ್ವಯ ಶಿಕ್ಷಣವನ್ನು ಉತ್ತೇಜಿಸಲು ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಸಂಸ್ಥೆಗಳಂತಹ ವೃತ್ತಿಪರ ಸಂಸ್ಥೆಗಳನ್ನು ರೂಪಿಸುವುದು.
- ಸಮನ್ವಯ ಶಿಕ್ಷಣಕ್ಕಾಗಿ ಸಂಪನ್ಮೂಲಗಳನ್ನು ಒದಗಿಸಲು ಕಾರ್ಪೋರೇಟ್ ವಲಯಗಳನ್ನು ಸೇರಿಸಿಕೊಳ್ಳುವುದು.

ಸಮನ್ವಯ ಶಿಕ್ಷಣದ ನೀತಿ-ರಚನೆ ಹಾಗೂ ಅನುಷ್ಠಾನಕ್ಕಾಗಿ ಅಂತರ್-ವಲಯ ಸಹಭಾಗಿತ್ವವನ್ನು ಖಚಿತಪಡಿಸಿಕೊಳ್ಳಲು ಸೂಕ್ತವಾದ ಕಾರ್ಯತಂತ್ರ ಹಾಗೂ ವಿನ್ಯಾಸಗಳನ್ನು ರೂಪಿಸುವುದು.

**ಉಪಸಂಹಾರ**

ನ್ಯೂನತೆ ಇರುವ ಹಾಗೂ ಇಲ್ಲದಿರುವ ಎಲ್ಲಾ ಮಕ್ಕಳಿಗೆ ಶಿಕ್ಷಣವನ್ನು ಒದಗಿಸುವುದು ಎಲ್ಲರ ಜವಾಬ್ದಾರಿ. ಇತ್ತೀಚಿನ ವರ್ಷಗಳಲ್ಲಿ, ದಾನದಿಂದ ಸಬಲೀಕರಣದತ್ತ ಹಾಗೂ ವೈದ್ಯಕೀಯ ಮಾದರಿಯಿಂದ ಮನೋವೈಜ್ಞಾನಿಕ ಮಾದರಿಯತ್ತ ದೃಷ್ಟಿಕೋನ ಬದಲಾಗಿದೆ. ಸಮನ್ವಯ ಶಿಕ್ಷಣದ ಪಯಣವು ನಿರ್ಲಕ್ಷ್ಯಕ್ಕೆ ಒಳಗಾಗುವುದು, ಅಂಚಿಗೆ ತಳ್ಳಲ್ಪಡುವಿಕೆ ಹಾಗೂ ತಾರತಮ್ಯ ಎದುರಿಸುವಂತಹ ಹಲವು ಸವಾಲುಗಳನ್ನು ಎದುರಿಸಿ ಸಮನ್ವಯ, ಅಡ್ಡಿಗಳರದ ಹಾಗೂ ಹಕ್ಕು ಆಧಾರಿತ ಸಮಾಜದಂತಹ ಹಲವಾರು ಮಹತ್ವದ ಬದಲಾವಣೆಗಳನ್ನು ಹೊಂದಿದೆ. ವೈಕಲ್ಯ ಇರುವ ವಿದ್ಯಾರ್ಥಿಗಳು ವೈಕಲ್ಯ ಇಲ್ಲದೇ ಇರುವ ಅವರ ಗೆಳೆಯರೊಡನೆ ಒಂದೇ ವೇದಿಕೆಯಲ್ಲಿ ನಿಲ್ಲುವಂತೆ ಹಾಗೂ ತಮ್ಮ ಸಂಪೂರ್ಣ ಸಾಮರ್ಥ್ಯವನ್ನು ಸಾಧಿಸುವಂತೆ ಪ್ರೋತ್ಸಾಹಿಸಲು ಬೇಕಾದ ಸಂಪನ್ಮೂಲಗಳು ಹಾಗೂ ಸಂಪರ್ಕ ವ್ಯವಸ್ಥೆಗಳ ಒಮ್ಮುಖವಾಗುವಿಕೆಗೆ ಒತ್ತು ನೀಡುವ ಸಮಗ್ರ ವಿಧಾನವನ್ನು ಅಳವಡಿಸಿಕೊಳ್ಳಲು ಪ್ರಸ್ತುತ ಚರ್ಚೆಯ ಹಂತದಲ್ಲಿರುವ ರಾಷ್ಟ್ರೀಯ ಕರಡು ಶಿಕ್ಷಣ ನೀತಿ, 2019 (The Draft National Education Policy 2019) ಒಂದು ಅವಕಾಶವನ್ನು ಒದಗಿಸುತ್ತದೆ.



**ಡಾ. ಉಮಾ ತುಲಿ** ಅವರು ಅಮರ್ ಜ್ಯೋತಿ ಚಾರಿಟೆಬಲ್ ಟ್ರಸ್ಟ್ (ದೆಹಲಿ ಹಾಗೂ ಗ್ವಾಲಿಯರ್) ಇದರ ಸ್ಥಾಪಕರು ಹಾಗೂ ವ್ಯವಸ್ಥಾಪಕ ಕಾರ್ಯದರ್ಶಿಗಳು.ಶಿಕ್ಷಣ ತಜ್ಞೆ, ಪುನರ್ವಸತಿ ವೃತ್ತಿಪರರು ಹಾಗೂ ಕ್ರೀಡಾಪಟುಗಳಾದ ಇವರು, ಅಂಗವಿಕಲರ ಆಯೋಗದ ಮುಖ್ಯ ಆಯುಕ್ತರಾಗಿ ಭಾರತ ಸರ್ಕಾರದಿಂದ ನೇಮಕಗೊಂಡ ಮೊದಲ ಅಧಿಕಾರೇತರರು. ವಿಶೇಷ ಅಗತ್ಯವುಳ್ಳವರನ್ನು ಮುಖ್ಯವಾಹಿನಿಗೆ ತಂದು ಅವರು ಸಮಾನತೆ ಹಾಗೂ ಘನತೆಯಿಂದ ಬದುಕು ನಡೆಸುವಂತೆ ಮಾಡುವ ಪ್ರಯತ್ನಗಳಲ್ಲಿ ಡಾ.ತುಳಿ ಮುಂಚೂಣಿಯಲ್ಲಿದ್ದಾರೆ. ಇವರಿಗೆ ಡಾಕ್ಟರ್ ಆಫ್ ಲಾ, ಲಂಡನ್‌ನ ರೋಹ್ಯಾಂಪ್ಟನ್ ವಿಶ್ವವಿದ್ಯಾಲಯದಿಂದ ಹೊನರಿಸ್ ಕೌಸಾ, ಪದ್ಮಶ್ರೀ ಮುಂತಾದ ಪ್ರಶಸ್ತಿ ಹಾಗೂ ಗೌರವಗಳು ಲಭಿಸಿವೆ. ಇವರನ್ನು umatuli3@gmail.com ರಲ್ಲಿ ಸಂಪರ್ಕಿಸಬಹುದು.

ಅನುವಾದ: **ವಿನಯಾ ವಿಠಲ** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ವಿಶೇಷ ಶಿಕ್ಷಣದಲ್ಲಿ ಕುಟುಂಬ, ಶಾಲೆ ಮತ್ತು ಸಮುದಾಯದ ಪಾತ್ರ

ಉಷಾ ಮದನ್

ಸರಿಯಾಗಿ ಹೇಳುವುದಾದರೆ ಶಿಕ್ಷಣವು ವಿದ್ಯಾರ್ಥಿಗಳ ಬೌದ್ಧಿಕ ಮತ್ತು ಭಾವನಾತ್ಮಕ ಕೌಶಲಗಳನ್ನು ಬೆಳೆಸಿ, ಅಂತಿಮವಾಗಿ ಜಗತ್ತಿನ ಸವಾಲುಗಳನ್ನು ಎದುರಿಸುವುದಕ್ಕೆ ಅವರಲ್ಲಿ ಉತ್ತಮ ಜೀವನ ಕೌಶಲಗಳನ್ನು ವೃದ್ಧಿಗೊಳಿಸಬೇಕು. ವಿದ್ಯಾಭ್ಯಾಸ, ವಿದ್ಯಾರ್ಥಿಯನ್ನು ಅರ್ಥಪೂರ್ಣ ಬದುಕಿಗೆ, ಅದರ ಜೊತೆಗೇ ಉತ್ಪಾದಕ ಕೆಲಸದ ಬದುಕಿಗೂ ಸಜ್ಜುಗೊಳಿಸಬೇಕು.

ದುರದೃಷ್ಟವಶಾತ್, ಪ್ರಸ್ತುತ ಶಿಕ್ಷಣದ ಪರಿಕಲ್ಪನೆಯು ವಿದ್ಯಾರ್ಥಿಗಳ ಸರ್ವತೋಮುಖ ಪ್ರಗತಿಗೆ ಪೋಷಕ ಎನ್ನುವುದರ ಬದಲು ಮಾಹಿತಿ ಪಡೆಯುವುದರ ಮೂಲಕ ಹೆಚ್ಚಿನ ಶೈಕ್ಷಣಿಕ ವಿಕಾಸ ಎನ್ನುವ ರೀತಿಯಾಗಿದೆ. ಶಿಕ್ಷಣವು ಮಕ್ಕಳ ಸಾಮರ್ಥ್ಯಗಳನ್ನು ಎಷ್ಟು ಸಾಧ್ಯವೋ ಅಷ್ಟರಮಟ್ಟಿಗೆ ಬಳಸಿ ಬದುಕಿನ ಸವಾಲುಗಳನ್ನು ಆತ್ಮವಿಶ್ವಾಸದಿಂದ ಎದುರಿಸುವ ತರಬೇತಿ ನೀಡಬೇಕಾಗಿದೆ. ಇಂದಿನ ಶಿಕ್ಷಣ ವ್ಯವಸ್ಥೆಯಲ್ಲಿ ಈ ಕೇಂದ್ರಗಮನವನ್ನು ಬದಿಗೆ ಸರಿಸಲಾಗಿದೆ. ಬಹುತೇಕ ಎಲ್ಲ ಮುಖ್ಯವಾಹಿನಿಯ ಮಕ್ಕಳು ಹೇಗೋ ಕೆಲವು ಹಂತದವರೆಗೆ, ನೋಡುವ, ಕೇಳುವ, ಅನುಭವಿಸುವ, ವಿಶ್ಲೇಷಿಸುವ ಮತ್ತು ತಮ್ಮ ಸುತ್ತಮುತ್ತಲಿನ ಪರಿಸರ ನಿರೀಕ್ಷಿಸುವ ಕೆಲಸ ಮಾಡುತ್ತಾ ಇಂತಹ ಆತ್ಮವಿಶ್ವಾಸದ ತರಬೇತಿ ಪಡೆದು ಬೆಳೆದಿರುತ್ತಾರೆ. ಹಾಗೆ, ಅವರೆಲ್ಲ ಬದುಕಿನ ಕೌಶಲಗಳ ಸ್ವಯಂ ತರಬೇತಿಯನ್ನು ಹೊಂದಿರುತ್ತಾರೆ. ದುರದೃಷ್ಟವಶಾತ್, ಬೌದ್ಧಿಕ ನ್ಯೂನತೆ ಇರುವ ಮಕ್ಕಳಲ್ಲಿ ಇಂತಹ ಕೌಶಲಗಳ ಕೊರತೆ ಇರುತ್ತದೆ. ಹೀಗಾಗಿ ಜೀವನ ಕೌಶಲಗಳಿಗೆ ಹೆಚ್ಚಿನ ಗಮನ ಕೊಟ್ಟು ದೈಹಿಕ ಚಲನಾ (Motor) ಕೌಶಲ, ಬೌದ್ಧಿಕ ಮತ್ತು ಭಾವನಾತ್ಮಕ ತರಬೇತಿಯನ್ನು ಸೂಕ್ತ ಸಮಯದಲ್ಲಿ ಅವರಿಗೆ ಕೊಡಬೇಕಾದದ್ದು ಅಗತ್ಯ. ಕ್ರಿಯಾತ್ಮಕ ಶಿಕ್ಷಣ ಮತ್ತು ವೃತ್ತಿ ಕೌಶಲ ತರಬೇತಿಯನ್ನೂ ನೀಡಬೇಕಾಗಿದೆ.

ಹೀಗಿದ್ದರೂ, ವಿಶೇಷ ಅಗತ್ಯವುಳ್ಳ ಮಕ್ಕಳನ್ನು ಸುಶಿಕ್ಷಿತರನ್ನಾಗಿಸುವ ವಿಚಾರಕ್ಕೆ ಬಂದರೆ ಇಲ್ಲೊಂದು ನಿರಾಶದಾಯಕ ವಾಸ್ತವ ಇದೆ. ಅದೇಂದರೆ ಕುಟುಂಬ ಮತ್ತು ಸಮುದಾಯ ಸದಸ್ಯರು ಅವರ ಶೈಕ್ಷಣಿಕ ಪ್ರಗತಿಯನ್ನು ಇತರ ಮುಖ್ಯವಾಹಿನಿಯ ವಿದ್ಯಾರ್ಥಿಗಳೊಂದಿಗೆ ಹೋಲಿಸಿ ನೋಡುತ್ತಾರೆ. ಮಗು ಶಿಕ್ಷಣಕ್ಕೆ ಸಜ್ಜಾಗಿದೆಯೇ ಅಥವಾ ಆ ಮಗುವಿನ ಅಗತ್ಯಗಳೇನೇನು ಎನ್ನುವುದನ್ನು ಅವರು ಗಮನಿಸುವುದಿಲ್ಲ. ಇಂತಹ ಸಂದರ್ಭದಲ್ಲಿ, ಆರಂಭಿಕ ಶಿಕ್ಷಣದ ಅತ್ಯುತ್ತಮ ಅಭ್ಯಾಸಗಳನ್ನು ಶೋಧಿಸುವ ಮುನ್ನ, ವಿಶೇಷ ಅಗತ್ಯವುಳ್ಳ ಮಕ್ಕಳ ಶಿಕ್ಷಣ ಎಂದರೆ ಏನು ಎನ್ನುವುದನ್ನು ಅರ್ಥಮಾಡಿಕೊಳ್ಳಬೇಕಾದದ್ದು ಮುಖ್ಯ. ಕೇವಲ ಮಾಹಿತಿ ಮಾತ್ರ ಕಲಿಸಿ ಹಾಕುವ ಮುಖ್ಯವಾಹಿನಿಯ ಪಠ್ಯಕ್ರಮದ ಇನ್ನೊಂದು ಆವೃತ್ತಿ ಇದಾಗಬಾರದು.

ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಇರುವ ಆದರ್ಶ ಶಿಕ್ಷಣದ ಕಾರ್ಯಕ್ರಮವು ಸ್ವತಂತ್ರ ಬದುಕು ಕಲ್ಪಿಸುವ ಆತ್ಯಂತಿಕ ಗುರಿಯನ್ನಿರಿಸಿಕೊಂಡು ಸಮಗ್ರ ಗಮನವನ್ನು ವಹಿಸಬೇಕಾಗಿದೆ. ಇದಕ್ಕಾಗಿ ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ತರಬೇತಿ ಶುರು ಮಾಡಬೇಕು. ಅವರ ಹದಿಹರೆಯ ಮತ್ತು ಪ್ರೌಢಾವಸ್ಥೆಯ ಬದುಕಿನ ಕೌಶಲಗಳಿಗೆ ಅದು ಅಡಿಪಾಯ ಆಗಿರಬೇಕು. ಅವರ ಸ್ವತಂತ್ರ ಬದುಕನ್ನು ಉನ್ನತಗೊಳಿಸುವ ಕೌಶಲಗಳನ್ನು ಕಲಿಸುವ ಕಡೆಗೆ ಹೆಚ್ಚಿನ ಗಮನ ನೀಡಬೇಕು. ಅನಂತರ ಅವರವರ ಸಾಮರ್ಥ್ಯಕ್ಕೆ ಅನುಗುಣವಾಗಿ ವೃತ್ತಿಪರ ತರಬೇತಿ ನೀಡಬೇಕು. ಹಾಗೆ ಮಾಡುವುದರಿಂದ ವಿದ್ಯಾರ್ಥಿಗಳು ನೌಕರಿಗೆ ಅರ್ಹರಾಗುತ್ತಾರೆ ಮತ್ತು ಆರ್ಥಿಕವಾಗಿ ಸ್ವತಂತ್ರರಾಗುತ್ತಾರೆ. ಮಗುವಿಗೆ ಸ್ವಾವಲಂಬನೆಯ ತರಬೇತಿ ಕೊಡದೇ ಇರುವುದಕ್ಕೆ ಯಾವುದೇ ವಿಕಲತೆಯೂ ಕಾರಣ ಆಗಿರಬಾರದು. ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಸೂಕ್ತ ಶಿಕ್ಷಣ ಪಡೆಯುವ ಎಲ್ಲ ಅವಕಾಶವನ್ನೂ ನೀಡಬೇಕು. ಅದರಲ್ಲಿ ಯಾವುದೇ ಮಿತಿ ಇರಬಾರದು ಮತ್ತು ಅವರ ಸಾಮರ್ಥ್ಯ ಮತ್ತು ಅಗತ್ಯಗಳಿಗೆ ತಕ್ಕಂತೆ ತರಬೇತಿ ನೀಡಬೇಕು. ಹಾಗಾದರೆ ಮಾತ್ರ ಅವರ ನ್ಯೂನತೆಗಳ ಹೊರತಾಗಿಯೂ ಸೂಕ್ತ ಉದ್ಯೋಗಾರ್ಹತೆ ಜೊತೆಗೆ ಸ್ವತಂತ್ರವಾಗಿ ಬದುಕುವ ಸಾಮರ್ಥ್ಯವನ್ನು ಬೆಳೆಸುವುದು ಸಾಧ್ಯ. ವಿಶೇಷ ಶಿಕ್ಷಣ ಸಬಲೀಕರಣಗೊಳಿಸುವಂಥದ್ದಾಗಿರಬೇಕು (ಹಾಗಿದ್ದರೆ ಮಾತ್ರ ಅವರು, ಸಾಮಾನ್ಯ ಪ್ರಕರಣದಲ್ಲಿ ಇರುವಂತೆ ಕುಟುಂಬಗಳಿಗೆ ಅಥವಾ ಸಮಾಜಗಳಿಗೆ 'ಹೊರೆ' ಎಂದು ಅನ್ನಿಸಲಾರರು).

ವಿಶೇಷ ಅಗತ್ಯವುಳ್ಳ ಮಕ್ಕಳನ್ನು ಶಿಕ್ಷಿತರನ್ನಾಗಿಸುವುದರಲ್ಲಿ ಮೂರು ಮೂಲಭೂತ ಘಟಕಗಳಿವೆ: ಶಾಲೆ, ಕುಟುಂಬ ಮತ್ತು ಸಮಾಜ. ಇವು ಪರಸ್ಪರ ಪೂರಕ ನೆಲೆಯಲ್ಲಿ ಇರುತ್ತಾ ನಿಸ್ಸಂದೇಹವಾಗಿ ಮಹತ್ವದ ಪಾತ್ರವನ್ನು ವಹಿಸುತ್ತವೆ. ಈ ಮೂರೂ ಘಟಕಗಳು ಒಟ್ಟಾದರೆ ಸ್ವೀಕಾರ, ಗೌರವ ಮತ್ತು ಸ್ಥಾನ ಪಡೆಯುವ ಮಹತ್ವದ ಗುರಿಗಳನ್ನು ಸಾಧಿಸುವುದು ನಿಶ್ಚಿತ. ಇದು ಮುಂದೆ ವಿಶೇಷ ಶಿಕ್ಷಣ ಮತ್ತು ವಿಶೇಷ ಅಗತ್ಯವುಳ್ಳ ಮಕ್ಕಳ ಹಕ್ಕುಗಳ ಅಂತಿಮ ಗುರಿಯಾದ ಸಬಲೀಕರಣಕ್ಕೂ, ಸಮನ್ವಯತೆಗೂ ದಾರಿ.

**ಕುಟುಂಬದ ಪಾತ್ರ**

ಪ್ರಾಥಮಿಕ ಕಾಳಜಿ ವಹಿಸುವವರು ಹೆತ್ತವರು ಎನ್ನುವುದರಲ್ಲಿ ಯಾರಿಗೂ ತಕರಾರು ಇರಲಾರದು. ಹೆತ್ತವರ ಬದುಕಿನ ಗುರಿ ಎಂದರೆ ತಮ್ಮ ಮಕ್ಕಳು ಸ್ವತಂತ್ರವಾಗಿ ತಮ್ಮ ಪಾಡಿಗೆ ತಾವು ಅರಳಬೇಕೆನ್ನುವುದೇ ಆಗಿರುತ್ತದೆ. ವಿಶೇಷ ಅಗತ್ಯವುಳ್ಳ ಮಕ್ಕಳ ನ್ಯೂನತೆಗಳ ಕುರಿತು ಕುಟುಂಬದವರ ತಿಳುವಳಿಕೆ, ಒಡಹುಟ್ಟಿದವರ ಬೇಷರತ್ತಿನ ಸ್ವೀಕೃತಿ ಅವರ ಒಳಗೊಳ್ಳುವಿಕೆ ಇವೆಲ್ಲ ವಿಶೇಷ ಅಗತ್ಯವುಳ್ಳ ಮಕ್ಕಳಿಗೆ ಸೃಜನಾತ್ಮಕ ಶಿಕ್ಷಣ/ತರಬೇತಿ ನೀಡುವಲ್ಲಿ ಮಹತ್ವದ ಪಾತ್ರವಹಿಸುತ್ತವೆ.

ಶಾಲೆ ಮತ್ತು ಇತರ ಚಿಕಿತ್ಸೆಗಳು ತರಬೇತಿ ಪ್ರಕ್ರಿಯೆಗೆ ಪೂರಕವಾಗಿರುವಾಗ ಹೆತ್ತವರ ಮತ್ತು ಕುಟುಂಬದವರ ಪೂರ್ಣ ರೂಪದ ಒಳಗೊಳ್ಳುವಿಕೆ ಅತ್ಯಂತ ಮಹತ್ವದ್ದಾಗಿರುತ್ತದೆ. ಇದು ಪ್ರತಿ ಮಗುವಿನ ಗುರಿ ಸಾಧನೆಯ ಸಾಮರ್ಥ್ಯಕ್ಕೆ ಅತ್ಯಗತ್ಯ. ಕುಟುಂಬದ ಬೆಂಬಲ ಇರುವ ಮಗು ಸ್ವತಂತ್ರವಾಗುವ ಮತ್ತು

ಸೃಜನಶೀಲವಾಗುವ ಯಾವುದೇ ಬಗೆಯ ತರಬೇತಿಯಲ್ಲಿ ಯಶಸ್ವಿಯಾಗುತ್ತದೆ ಎನ್ನುವುದಕ್ಕೆ ಸಾಕಷ್ಟು ಸಾಕ್ಷ್ಯಗಳು ಸಿಗುತ್ತವೆ.

**ಸಮುದಾಯದ ಪಾತ್ರ**
ವಿಶೇಷ ಅಗತ್ಯವುಳ್ಳ ಮಗುವಿನ ಹೊಣೆಗಾರಿಕೆ ಕೇವಲ ಒಂದು ಕುಟುಂಬದ್ದಲ್ಲ ಎನ್ನುವುದನ್ನು ಆ ಮಗು ಬೆಳೆಯುತ್ತಿರುವ ಸಮಾಜ ಅರ್ಥೈಸಿಕೊಳ್ಳಬೇಕಾಗಿದೆ. ಸಮನ್ವಯ ಎನ್ನುವುದು ಸಾಮಾಜಿಕ ಜವಾಬ್ದಾರಿ. ಮಕ್ಕಳನ್ನು ಮೊದಲು ಮಕ್ಕಳೆಂದೇ ಭಾವಿಸಿ, ಅವರ ಜೀವನದ ಪ್ರತಿಯೊಂದು ಗತಿಯಲ್ಲೂ ಸಹಕಾರ, ಮನ್ನಣೆ ನೀಡುವ ನೆರೆಹೊರೆಯವರು ಮತ್ತು ಸಾರ್ವಜನಿಕರು ಇದ್ದಾಗ ಮಾತ್ರ ಇದು ಸಾಧ್ಯ. ನಮಗೆಲ್ಲ ಗೊತ್ತಿರುವ ಹಾಗೆ, ನಮ್ಮ ಮನೋವೃತ್ತಿ ಮತ್ತು ಕಲ್ಪನೆಗಳು ನಮ್ಮ ಕ್ರಿಯೆಯ ಮೇಲೆ ಪ್ರಭಾವ ಬೀರುತ್ತವೆ. ಹಾಗಾಗಿ ವಿಶೇಷ ಅಗತ್ಯವುಳ್ಳ ಮಗುವಿಗೆ ಪ್ರತಿಯೊಬ್ಬರೂ ನೆರವಾಗ-ಬೇಕಾದದ್ದು ಅನಿವಾರ್ಯ. ಕುಟುಂಬದಿಂದ ಶಾಲೆಗಳಿಗೆ, ಕೊನೆಗೆ ಸಮಾಜದಲ್ಲಿ ಅವರಿಗೆ ಸ್ಥಾನಮಾನ ಸಲ್ಲುವವರೆಗಿನ ಚಲನೆಯಲ್ಲಿ ಈ ನೆರವು ಬೇಕೇಬೇಕು.

**ಶಾಲೆಯ ಪಾತ್ರ**
ವಿಶೇಷ ಸೌಲಭ್ಯ ನೀಡುವ ಅಥವಾ ಭಾಗಿದಾರೀ ವ್ಯವಸ್ಥೆ ಮಾಡುವ ಮೂಲಕವೋ ವಿಶೇಷ ಅಗತ್ಯವುಳ್ಳ ಮಕ್ಕಳನ್ನು ಪೊರೆಯುವ ಯಾವುದೇ ಶಾಲೆಯ ಮೂಲ ಉದ್ದೇಶ ಮಕ್ಕಳ ಸಮಗ್ರ ಬೆಳವಣಿಗೆಗೆ ಪೂರಕ ಕಲಿಕಾ ವಾತಾವರಣ ಒದಗಿಸುವುದಾಗಿರುತ್ತದೆ. ಅವರು ತಮಗೆಷ್ಟು ಸಾಧ್ಯವೋ ಅಷ್ಟರಮಟ್ಟಿಗೆ ಕುಟುಂಬ ಮತ್ತು ಸಮುದಾಯಗಳ ಜೊತೆಗೆ ಸಂಪರ್ಕದಲ್ಲಿರಬೇಕು ಮತ್ತು ಒಳಗೊಳ್ಳುವಂತೆ ಮಾಡಬೇಕು. ಪಠ್ಯಕ್ರಮವು ದೈಹಿಕ, ಭಾಷಿಕ, ಭಾವನಾತ್ಮಕ, ಬೌದ್ಧಿಕ ಮತ್ತು ಸಾಮಾಜಿಕ ಎಂಬ ಐದು ಅಭಿವೃದ್ಧಿ ವಲಯಗಳನ್ನು ಕೇಂದ್ರೀಕರಿಸಿ ವಿನ್ಯಾಸಗೊಂಡಿರಬೇಕು. ಅಲ್ಲಿ ಪ್ರತೀ ವಲಯದ ಆರಂಭದ ಹಂತದಿಂದ ನಿರೀಕ್ಷೆಯ (ಗುರಿಗಳು) ಹಂತದವರೆಗೆ ಪ್ರತಿಯೊಬ್ಬ ವಿದ್ಯಾರ್ಥಿಯ ಸಾಮರ್ಥ್ಯ ಮತ್ತು ಸವಾಲಿಗೆ ಅನುಗುಣವಾಗಿ ವೈಯಕ್ತಿಕ ಶಿಕ್ಷಣ ಯೋಜನೆ (Individual Education Plans-IEPs)ಯಲ್ಲಿ ಮೌಲ್ಯ-ಮಾಪನದ ಮಾನದಂಡಗಳು ಸ್ಪಷ್ಟವಾಗಿ ಮೂಡಿರಬೇಕು. ಅಗತ್ಯವಿರುವ ಚಿಕಿತ್ಸಾ ಪ್ರತಿಸ್ಪಂದನಗಳನ್ನು ಒಳಗೊಂಡಿರಬೇಕು.

**ಸರ್ವತೋಮುಖ ವಿಧಾನ: ಮಂಡಲ**
ಬೌದ್ಧಿಕ ನ್ಯೂನತೆಯುಳ್ಳ ಮಕ್ಕಳಿಗಾಗಿ ಇರುವ ಶಾಲೆ ದೀಪಿಕಾ ಇಂಥದ್ದೊಂದು ಸರ್ವತೋಮುಖ ವಿಧಾನ ಅನುಸರಿಸುತ್ತಿದೆ.. ಇಲ್ಲಿ ನಮ್ಮ ಬೋಧನೆಯ ಉದ್ದೇಶವು ಬೌದ್ಧಿಕ ನ್ಯೂನತೆಯ ಮಕ್ಕಳಿಗೆ ಸಾಧ್ಯವಾದಷ್ಟು ಸ್ವತಂತ್ರ ಬದುಕಿಗೆ ಸಜ್ಜಾಗುವ ತರಬೇತಿ ನೀಡುವುದೇ ಆಗಿದೆ.ನಮ್ಮಲ್ಲಿ 'ಮಂಡಲ' ಎನ್ನುವ ಅನುಷ್ಠಾನ ಯೋಗ್ಯ ವ್ಯವಸ್ಥಿತ ತರಬೇತಿ ಕಾರ್ಯಕ್ರಮ ಇದೆ. ಕಳೆದ ಹದಿನೈದು ವರ್ಷಗಳಿಂದ ಬೌದ್ಧಿಕ ನ್ಯೂನತೆಯ ಮಕ್ಕಳಿಗಾಗಿ ಅಭಿವೃದ್ಧಿಪಡಿಸಲಾಗುತ್ತಿರುವ ಮತ್ತು ಅನುಷ್ಠಾನ-ಗೊಳಿಸಲಾಗುತ್ತಿರುವ ಶೈಕ್ಷಣಿಕ ಆವಿಷ್ಕಾರಗಳಲ್ಲಿ ಈ ತಂತ್ರವನ್ನು ಬಳಸುತ್ತಿದ್ದೇವೆ. ಇದು ಮಕ್ಕಳನ್ನು ಸ್ವತಂತ್ರವಾಗಿಸುವಲ್ಲಿ ಯಶಸ್ವಿಯಾಗಿದೆ ಎಂದು ಹೇಳುವುದಕ್ಕೆ ಸಂತೋಷವೆನಿಸುತ್ತದೆ. ಈವರೆಗಿನ ವಿಶೇಷ ಅಗತ್ಯವುಳ್ಳ ಮಕ್ಕಳ ಅವಲೋಕನ ಮತ್ತು ಅನುಭವದ ಆಧಾರದಲ್ಲಿ ಇಂತಹ ಸರ್ವತೋಮುಖ ವಿಧಾನವು ಈ ಹೊತ್ತಿನ ಅಗತ್ಯ ಎನ್ನುವುದನ್ನು ನಾವು ಮನಗಂಡಿದ್ದೇವೆ. ಇದು ಸ್ವತಂತ್ರವಾಗಿ ದೈನಂದಿನಜೀವನ ಕೌಶಲ, ಸಾಮಾಜಿಕ ಕೌಶಲ, ಸಂವಹನ ಕೌಶಲ, ಚಲನಾ ಕೌಶಲ, ಕ್ರಿಯಾತ್ಮಕ ಶಿಕ್ಷಣವನ್ನೂ ಒಳಗೊಂಡಿದೆ. ಜೊತೆಗೆ ವೃತ್ತಿಪರ ಕೌಶಲಗಳ ತರಬೇತಿಯೂ ಇರುತ್ತದೆ.

ಇಂಥದ್ದೊಂದು ಸಲಕರಣೆಯ ಮುಖ್ಯ ಉದ್ದೇಶ ಈಗಾಗಲೇ ಚರ್ಚೆ ಮಾಡಿದ ಮೂರು ಮುಖ್ಯ ಘಟಕಗಳನ್ನು ಗುರುತಿಸುವ, ವಿವರಿಸುವ, ಸಾಕ್ಷ್ಯ ಆಧಾರಿತ ಅಭ್ಯಾಸಗಳನ್ನು ಸಂಕ್ಷಿಪ್ತಗೊಳಿಸುವುದೇ ಆಗಿದೆ. ವಿಶೇಷ ಅಗತ್ಯವುಳ್ಳ ಮಕ್ಕಳ ಸರ್ವತೋಮುಖ ತರಬೇತಿಯ ಮೂರು ಘಟಕಗಳೆಂದರೆ ಶಾಲೆ, ಕುಟುಂಬ ಮತ್ತು ಸಮುದಾಯವೇ ಆಗಿದೆ. ಪ್ರತಿಗುಂಪಿನ ಮಕ್ಕಳ ಶೈಕ್ಷಣಿಕ ಉದ್ದೇಶಗಳನ್ನು ಈಡೇರಿಸುವುದಕ್ಕೆ ಇರುವ ಅಭ್ಯಾಸಗಳ ಜೋಡಿ ಇದರಲ್ಲಿವೆ.

ಇಲ್ಲಿ ನೀಡಲಾಗಿರುವ ಚಿತ್ರ ವ್ಯವಸ್ಥಿತ ಮಧ್ಯಸ್ಥಿಕೆಯ ನಿಯಮ ಮತ್ತು ಅಭ್ಯಾಸ ಪರಿಕಲ್ಪನೆಗಳನ್ನು ತೋರಿಸುತ್ತದೆ. ಈ ಮಧ್ಯಸ್ಥಿಕೆಯು ತರಬೇತಿದಾರ ನಿರ್ದೇಶಿತವಾಗಿದ್ದು ಸಂಪನ್ಮೂಲಗಳ ಯೋಜಿತ ಜೋಡಿಗಳನ್ನು ಬಳಸುತ್ತದೆ. ಇದು ಔಪಚಾರಿಕ ಮತ್ತು ಅನೌಪಚಾರಿಕ ಎರಡೂ ಸಂದರ್ಭಗಳಲ್ಲಿ ಘಟಿಸುತ್ತದೆ. ಈ ವಿಧಾನದ ಒಳಗೆ ಬಳಸಿದ ತಂತ್ರ ಎಂದರೆ ಅದು ವರ್ತನಾ ಮಾದರಿ (Behavioural model) (ಉದಾಹರಣೆಗೆ ಉತ್ತೇಜನ ಮತ್ತು ಬಲವರ್ಧನೆ). ಕೌಶಲಾರ್ಜನೆಯ ನಂತರ ನಿಧಾನಕ್ಕೆ ಕರಗಿಹೋಗುವ ತಂತ್ರ ಇದು. ಈ ಧ್ಯೇಯಗಳು ವಿದ್ಯಾರ್ಥಿ ಕೇಂದ್ರಿತವಾಗಿದ್ದು ವಾಸ್ತವ ನಿರೀಕ್ಷೆಗಳೊಂದಿಗೆ ಅವರ ಸಾಮರ್ಥ್ಯದ ಜೊತೆಗೆ ಸಂವಹನ ಮಾಡುತ್ತವೆ.




**ತಂತ್ರಗಳು**

**ಶಾಲೆ**
ನಮ್ಮ ಮುಖ್ಯ ಪಠ್ಯಕ್ರಮ ಕ್ರಿಯಾತ್ಮಕ ಶಿಕ್ಷಣದ ಜೊತೆಗೇ ಜೀವನ ಕೌಶಲಗಳು, ಚಲನಾ ಕೌಶಲಗಳು (MotorSkills), ಸಂವಹನ ಕೌಶಲಗಳು ಮತ್ತು ಸಾಮಾಜಿಕ ಕೌಶಲಗಳ ಮೇಲೆ ಗಮನ ಕೇಂದ್ರೀಕರಿಸುತ್ತದೆ. ವೃತ್ತಿಪರ ಕೌಶಲಗಳ ತರಬೇತಿ ಕೂಡಾ ಇರುತ್ತದೆ. ಇಲ್ಲಿ ಶಿಕ್ಷಕರು, ಸಹಪಾಠಿಗಳು ಮತ್ತು ಚಿಕಿತ್ಸಕರು ಭಾಗವಹಿಸುತ್ತಾರೆ.

**ಕುಟುಂಬ**
ಭಾವನಾತ್ಮಕ ನಿರ್ವಹಣೆಗೆ ನಾವು ಮುಖ್ಯವಾಗಿ ತಾಯಂದಿರಿಗೆ ವೈಯಕ್ತಿಕ ಸಮಾಲೋಚನೆ ತರಗತಿಗಳನ್ನು ನಡೆಸುತ್ತೇವೆ; ಬೇಷರತ್ ಸ್ವೀಕೃತಿಗಾಗಿ ಹೆತ್ತವರಿಗೆ ಸಮಾಲೋಚನೆ ; ಮೂರು ತಿಂಗಳಗೊಮ್ಮೆ ಒಡಹುಟ್ಟಿದವರಿಗೆ ಕಾರ್ಯಾಗಾರ; ಆರುತಿಂಗಳ–ಗೊಮ್ಮೆ ಕುಟುಂಬದ ಸದಸ್ಯರಾದ ಅಜ್ಜಅಜ್ಜಿಯಂದಿರಿಗೆ ಹಾಗೂ ಇತರ ಮುಖ್ಯ ಸದಸ್ಯರಿಗೆ ಕಾರ್ಯಾಗಾರ ನಡೆಸುತ್ತೇವೆ.

**ಸಮುದಾಯ**
ವೈಕಲ್ಯವುಳ್ಳ ಮಕ್ಕಳ ಜವಾಬ್ದಾರಿಯು ಕೇವಲ ಆ ಕುಟುಂಬದ್ದು ಮಾತ್ರ ಅಲ್ಲ. ಅದು ಸಾಮಾಜಿಕ ಹೊಣೆಗಾರಿಕೆ ಎನ್ನುವುದನ್ನು ಸಾಮಾನ್ಯ ನಾಗರಿಕರಿಗೆ ಮನವರಿಕೆ ಮಾಡಿ ಸಂವೇದನಾ–ಶೀಲರನ್ನಾಗಿಸುವುದು ಇಲ್ಲಿನ ಗುರಿ. ಕಾರ್ಪೋರೇಟ್ ಸಂಸ್ಥೆ, ಸಾರ್ವಜನಿಕ ಇಲಾಖೆ ಮತ್ತು ಮುಖ್ಯವಾಹಿನಿಯ ಶಾಲೆಗಳಗಾಗಿ ಜಾಗೃತಿ ಕಾರ್ಯಕ್ರಮಗಳನ್ನು ನಡೆಸುತ್ತೇವೆ.

**ಮಂಡಲ ಪ್ರಕ್ರಿಯೆ**

**ಶಾಲೆ**
ಜೀವನ ಕೌಶಲ, ಸಾಮಾಜಿಕ ಕೌಶಲ, ಸಂವಹನ ಕೌಶಲ, ನಿರ್ದಿಷ್ಟ ಕೌಶಲಗಳು ಮತ್ತುವೃತ್ತಿಪರ ಕೌಶಲಗಳಿಗೆ ತರಬೇತಿಗೊಳಸುವ ಧ್ಯೇಯಗಳನ್ನು ನಮ್ಮ ಪಠ್ಯಕ್ರಮವು ಒಳಗೊಂಡಿರುತ್ತವೆ.

- ಜೀವನ ಕೌಶಲ (ದಿನನಿತ್ಯ ಸ್ವತಂತ್ರವಾಗಿ ಬದುಕುವ ಕೌಶಲ)

ದಾಖಲಾತಿಯ ಸಂದರ್ಭದಲ್ಲಿ ಮಕ್ಕಳು ಆರ್ಜಿಸಿರುವ ದೈನಂದಿನ ಬದುಕಿನ ಕೌಶಲಗಳ ಮಟ್ಟವನ್ನು ಇದು ಅಳೆಯುತ್ತದೆ. ಶೌಚಾಲಯದ ತರಬೇತಿ, ಸ್ನಾನ, ವೈಯಕ್ತಿಕ ಸ್ವಚ್ಛತೆ, ಸ್ವತಂತ್ರವಾಗಿ ಆಹಾರ ಸೇವನೆಯ ಹವ್ಯಾಸ ಇವುಗಳ ಕಡೆಗೆ ಹೆಚ್ಚಿನ ಗಮನ ಕೇಂದ್ರೀಕರಿಸಲಾಗುತ್ತದೆ. ಮೂಲಭೂತ ಜೀವನ ಕೌಶಲಗಳಲ್ಲಿ ಮಕ್ಕಳನ್ನು ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ತರಬೇತುಗೊಳಸಬೇಕೆಂಬ ಮಹತ್ವವನ್ನು ಹೆತ್ತವರು ಅರ್ಥ–ಮಾಡಿಕೊಳ್ಳುವುದಿಲ್ಲ ಎನ್ನುವುದನ್ನು ಗಮನಿಸಿದ್ದೇವೆ. ಹೆತ್ತವರು, ಒಂದೋ ಮಕ್ಕಳ ಸಾಮರ್ಥ್ಯವನ್ನು ಕಡೆಗಣಿಸಿರುತ್ತಾರೆ. ಇಲ್ಲವೇ ಅವರು ಅತಿಕಾಳಜಿ ವಹಿಸುವವರಾಗಿರುತ್ತಾರೆ ಮತ್ತು ಯಾವಾಗಲೂ ಅವರ ಕೆಲಸಗಳನ್ನು ಮಾಡಲು ತಯಾರಿರುತ್ತಾರೆ. ಮಕ್ಕಳಗಾಗಿ ಇದನ್ನೆಲ್ಲ ಮಾಡಿದರೆ ಯಾವುದೇ ತೊಂದರೆ ಇಲ್ಲ ಎಂದು, ಅದರಿಂದಾಗುವ ಪರಿಣಾಮಗಳನ್ನು ನಿರ್ಲಕ್ಷಿಸುತ್ತಾರೆ. ಇಂತಹ ಪ್ರಕರಣಗಳಲ್ಲಿ ಮುಖ್ಯ ಸವಾಲು ಎಂದರೆ ಇಂತಹ ಮಕ್ಕಳನ್ನು 'ಬೆಳೆಯಲು' ಬಿಡುವುದಿಲ್ಲ ಎನ್ನುವುದೇ ಆಗಿದೆ. ಉದಾಹರಣೆಗೆ ಬೆಳೆಯುವ ಮಕ್ಕಳಗೆ ಹೆತ್ತವರೇ ಸ್ನಾನ ಮಾಡಿಸುತ್ತಾರೆ. ಮಕ್ಕಳನ್ನು ಹೆತ್ತವರ ಜೊತೆಯಲ್ಲೇ ಮಲಗಿಸಿಕೊಳ್ಳುತ್ತಾರೆ. ಹಾಗಾಗಿ ಮಕ್ಕಳು 'ತಮ್ಮ ದೇಹ' ಎನ್ನುವ ಪರಿಕಲ್ಪನೆಯನ್ನು ಅರ್ಥಮಾಡಿಕೊಳ್ಳುವಲ್ಲಿ ಸೋಲುತ್ತಾರೆ. ಇದರಿಂದಾಗಿ ಮಕ್ಕಳಗೆ ಯಾವುದು ಒಳ್ಳೆಯ ಸ್ಪರ್ಶ ಮತ್ತು ಯಾವುದು ಕೆಟ್ಟ ಸ್ಪರ್ಶ ಎನ್ನುವುದರ ವ್ಯತ್ಯಾಸ ಕಂಡುಕೊಳ್ಳುವುದಕ್ಕಾಗದೇ ಅಪಾಯಕ್ಕೆ ಸಿಲುಕುತ್ತಾರೆ. ಇದು 'ವೈಯಕ್ತಿಕ ಸ್ಥಳ' (Personal space) ಪರಿಕಲ್ಪನೆಯ ತರಬೇತಿಗೆ ದೊಡ್ಡ ಅಡ್ಡಿಯಾಗಿ ಬಿಡುತ್ತದೆ. ಹದಿಹರೆಯಕ್ಕೆ ಕಾಲಿಡುವ ಮಕ್ಕಳು ತಮ್ಮದೇ ರಕ್ಷಣೆಗಾಗಿ ತಮ್ಮ ಸಾಮಾಜಿಕ ಸರಹದ್ದುಗಳನ್ನು ಅರ್ಥಮಾಡಿಕೊಳ್ಳುವುದು ಮುಖ್ಯ. ಬೌದ್ಧಿಕ ನ್ಯೂನತೆ ಇರುವ ಮಕ್ಕಳಗೂ ಸಾಮಾನ್ಯರಂತೆಯೇ ದೈಹಿಕ ಮತ್ತು ಅದಕ್ಕೆ ಹೊಂದಿಕೊಂಡ ಲೈಂಗಿಕ ಬೆಳವಣಿಗೆಯಾಗುತ್ತದೆ. ಅದಕ್ಕಾಗಿ ಸಾಕಷ್ಟು ಪೂರ್ವಸಿದ್ಧತೆ ನಡೆಸಬೇಕು ಎನ್ನುವುದನ್ನು ಬಹುತೇಕ ಹೆತ್ತವರು ಅರ್ಥಮಾಡಿಕೊಳ್ಳುವಲ್ಲಿ ಸೋಲುತ್ತಾರೆ ಅಲ್ಲದೆ ಅನೇಕರಿಗೆ ಇದು ಪೂರ್ವಸಿದ್ಧತೆ ಇಲ್ಲದ ಸವಾಲು. ಮುಂದೆ ಹದಿಹರೆಯಕ್ಕೆ ಸಂಬಂಧಿಸಿದ ವರ್ತನಾ ಸಮಸ್ಯೆಗಳಗೆ (Behaviouralissues) ಕೂಡ ಇದು ದಾರಿ ಮಾಡಿಕೊಡುತ್ತದೆ. ಇದು ಹೆತ್ತವರು ಮತ್ತು ಮಕ್ಕಳು–ಇಬ್ಬರಿಗೂ ಸವಾಲಾನದ್ದು ಮತ್ತು ಹತಾಶೆಯದ್ದೂ ಆಗಬಹುದು. ಇವುಗಳ ಪರಿಹಾರಕ್ಕಾಗಿ, ವಿದ್ಯಾರ್ಥಿಯ ಶಾಲಾ ದಾಖಲಾತಿಯ ಸಂದರ್ಭದಲ್ಲಿ ಜೀವನಶೈಲಿಗೆ ಸಂಬಂಧಿಸಿದಂತೆ ಮೂರು ನೆಲೆಯ ಮಾಹಿತಿಗಳನ್ನು ಕಲೆಹಾಕಲಾಗುತ್ತದೆ; ಒಂದು ಹೆತ್ತವರಿಂದ, ಇನ್ನೊಂದು ಪ್ರಭಾರ ಶಿಕ್ಷಕರಿಂದ ಮತ್ತು ಕೊನೆಯದ್ದು, ನಿರ್ಣಾಯಕವಾದದ್ದು, ಮೊದಲ ಎರಡು ತಿಂಗಳ ನಂತರ ಶಾಲೆಯಲ್ಲೇ ಒಂದು 'ರಾತ್ರಿ ಪೂರ್ತಿ 'ಉಳಿಯುವ ಕಾರ್ಯಕ್ರಮ' ಇರುತ್ತದೆ. ಇದರಿಂದ ಮಕ್ಕಳ ಬಗ್ಗೆ ಅವರ ಶೌಚಾಲಯದ ಬಳಕೆ, ವೈಯಕ್ತಿಕ ಸ್ವಚ್ಛತೆ, ನಿತ್ಯ ಬದುಕಿನ ಕೌಶಲಗಳು, ಸಾಮರ್ಥ್ಯಗಳು, ಅದಕ್ಕೆ ಸಂಬಂಧಿಸಿದ ಅವಲಂಬನೆ ಮತ್ತು ಈ ವಿಷಯಗಳ ಬಗ್ಗೆ ಹೆತ್ತವರ ದೃಷ್ಟಿಕೋನದ ಬಗ್ಗೆ ನಮಗೆ ಸ್ಪಷ್ಟ ಚಿತ್ರಣ ಸಿಗುತ್ತದೆ. ಈ ಅವಲೋಕನವು ದೈನಂದಿನ ಬದುಕಿನ ಕೌಶಲಗಳಲ್ಲಿ ಐಇಪಿಯ (ವೈಯಕ್ತಿಕ ಶಿಕ್ಷಣ ಯೋಜನೆ) ಗುರಿಗಳನ್ನು ಸಾಧಿಸುವದಕ್ಕೆ ನೆರವಾಗುತ್ತದೆ ಇದು ಮಕ್ಕಳಗೆ ಮನೆಯಲ್ಲೇ ತರಬೇತಿ ನೀಡುವಂತೆ ಹೆತ್ತವರಲ್ಲಿ ಜಾಗೃತಿ ಮೂಡಿಸಲು ಮತ್ತು ಅವರನ್ನು ಭಾಗವಹಿಸುವಂತೆ ಮಾಡಲು ಅಗತ್ಯ. ಇದು ವ್ಯವಸ್ಥಿತ ಚಾಲನಾ ಕೌಶಲದ (Structured motor skills) ತರಬೇತಿ ಮತ್ತು ದೈಹಿಕ ಸ್ವಾಸ್ಥ್ಯ, ಮಾಂಸಖಂಡಗಳ ಸಂಯೋಜನೆ (Muscle coordination) ಮತ್ತು ದೈಹಿಕ ಸಾಮರ್ಥ್ಯಗಳನ್ನು ಅಳೆಯಲು ಜೊತೆಗೆ ದಿನ ನಿತ್ಯದ ಮನೆಗೆಲಸ ಮತ್ತು ವೈಯಕ್ತಿಕ ಕಾಳಜಿಗಳನ್ನು ಒಳಗೊಂಡಿರುತ್ತದೆ.

- ಸಾಮಾಜಿಕ ಕೌಶಲಗಳು: ಬೌದ್ಧಿಕ ನ್ಯೂನತೆ ಇರುವ ಮಕ್ಕಳು ಸಾಮಾಜಿಕ ಕೌಶಲ ಕಲಿಯುವುದರಲ್ಲಿ, ಅವುಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಮತ್ತು ಅನ್ವಯಿಸುವುದರಲ್ಲಿ ಸಮಸ್ಯೆಗಳನ್ನು ಎದುರಿಸುತ್ತಾರೆ. ಇದನ್ನೆಲ್ಲ ಕಲಿಯುವುದಕ್ಕೆ, ತಮ್ಮದಾಗಿಸಿಕೊಳ್ಳುವುದಕ್ಕೆ ಸಾಕಷ್ಟು ತರಬೇತಿಯ ಅಗತ್ಯವಿರುತ್ತದೆ. ವಿವಿಧ ಸಾಮಾಜಿಕ ಸನ್ನಿವೇಶಗಳಲ್ಲಿ ಮಕ್ಕಳನ್ನು ಇರಿಸಿ ಅವರಿಗೆ ಈ ತರಬೇತಿಯನ್ನು ನೀಡಲಾಗುತ್ತದೆ. ಮನೆಗೆ ಭೇಟಿ ನೀಡುವುದರಿಂದ ಹಿಡಿದು, ಸಾಮಾಜಿಕ ಕಾರ್ಯಕ್ರಮ, ಮಾಲ್, ಸಾರ್ವಜನಿಕ ಸೇವೆಯ ಕಚೇರಿಗಳು, ಅಲ್ಪಾವಧಿ (ಎರಡು ರಾತ್ರಿ), ದೀರ್ಘಾವಧಿಯ (ಏಳು ರಾತ್ರಿ) ಶಿಕ್ಷಣ ಪ್ರವಾಸಗಳೆಲ್ಲ ಈ ತರಬೇತಿಯಲ್ಲಿ ಒಳಗೊಂಡಿರುತ್ತವೆ ಈ ಇಲ್ಲಿ ಅವಲೋಕಿಸಿದ ಅವರ ಸಂವಹನ ಮತ್ತು ವರ್ತನೆಯ ಶೈಲಿಗಳ ಆಧಾರದಲ್ಲಿ ಸಾಮಾಜಿಕ ಕೌಶಲಗಳ ನೆಲೆಗಳ ಬಗ್ಗೆ ಟಿಪ್ಪಣಿ ಮಾಡಿಕೊಳ್ಳಲಾಗುತ್ತದೆ. ಅದಕ್ಕೆ ಅನುಗುಣವಾಗಿ ವೈಯಕ್ತಿಕ ಕೌಶಲ ಅಭಿವೃದ್ಧಿ, ಸಾಮಾಜಿಕ ಕೌಶಲಗಳ ಕೊರತೆ, ಆಧಿಕ್ಯ, ಸಾಮಾಜಿಕ ವಿಚಿತ್ರ ನಡವಳಿಕೆ ಮತ್ತು ಐಇಪಿಗಳನ್ನು (ವೈಯಕ್ತಿಕ ಶಿಕ್ಷಣ ಯೋಜನೆ) ಯೋಜಿಸಲಾಗುತ್ತದೆ. ಸಂವಹನ ಕೌಶಲಗಳು: ಉತ್ತಮ ಸಾಮಾಜಿಕ ಬಾಂಧವ್ಯಕ್ಕಾಗಿ ಅವಶ್ಯಕತೆಗೆ ತಕ್ಕಂತೆ ಅಭಿವ್ಯಕ್ತಿಶೀಲ ಮತ್ತು ಸಂದರ್ಭಾ ನುಸಾರ ಸಂಭಾಷಣೆಗಳ ಬೆಳವಣಿಗೆಗೆ ಮುಖ್ಯಗಮನ ನೀಡಲಾಗುವುದು.

ವೈಯಕ್ತಿಕವಾಗಿ ಮತ್ತು ದೂರವಾಣಿ ಮೂಲಕ ಇಡೀ ದಿನ ಮಕ್ಕಳ ಭಾಗವಹಿಸುವಿಕೆ ಹೆಚ್ಚಿಸಲು ಅವಕಾಶ ಆಧಾರಿತ ಯೋಜನೆಯನ್ನು

ವಿನ್ಯಾಸಗೊಳಿಸಲಾಗುತ್ತದೆ. ಶಾಲೆಗಳಲ್ಲಿ ಮತ್ತು ಕುಟುಂಬಗಳಲ್ಲಿ ಮೊದಲಿಗೆ ಇಂತಹ ಅವಕಾಶಗಳನ್ನು ಸೃಷ್ಟಿಸಲಾಗುತ್ತದೆ ಅನಂತರ ಅದನ್ನು ಸಾಮಾಜಿಕ ಸನ್ನಿವೇಶಗಳಿಗೆ ವಿಸ್ತರಿಸಲಾಗುತ್ತದೆ. ಮಾತು ಬಾರದ ಮಕ್ಕಳಿಗೆ ಸಂಬಂಧಿಸಿದಂತೆ ಮೊದಲು ಶಿಕ್ಷಕರು ಸಂವಹನ ತಿಳಿಸುವ ಅವರ ವರ್ತನೆಯನ್ನು ಗುರುತಿಸಿ ಮೌಲ್ಯಮಾಪನ ಮಾಡುತ್ತಾರೆ. ಮಕ್ಕಳನ್ನು ಇನ್ನಷ್ಟು ಚೆನ್ನಾಗಿ ಅರ್ಥ-ಮಾಡಿಕೊಳ್ಳುವುದಕ್ಕಾಗಿ, ವಿವಿಧ ಭಾವನೆಗಳನ್ನು / ಅಗತ್ಯಗಳನ್ನು ತಿಳಿಸಲು ವ್ಯಕ್ತಪಡಿಸುವ ಇತರ ಸಾಮಾನ್ಯ ವರ್ತನೆಗಳ ಬಗೆಗೂ ಹೆತ್ತವರಿಂದ ಮಾಹಿತಿ ಪಡೆಯಲಾಗುತ್ತದೆ. ವರ್ತನಾ ಪ್ರತಿಸ್ಪಂದನೆಯ (Behavioural intervention) ಗುರಿಗಳ ಒಳನೋಟ ಪಡೆಯಲು ವರ್ತನೆಯ ಕ್ರಿಯಾತ್ಮಕ ವಿಶ್ಲೇಷಣೆ (Functional analysis of behavior) (ಹಿಂದಿನ-ವರ್ತನೆ-ಪರಿಣಾಮ) ಯನ್ನು ಮಾಡಲಾಗುತ್ತದೆ. ಉದಾಹರಣೆಗೆ ಹಸಿವಾದಾಗ ಎಸೆಯುವ ತಂತ್ರ, ಕೆಲಸ ತಪ್ಪಿಸಲು ಓಡುವ ತಂತ್ರ – ಇತ್ಯಾದಿಗಳ ವಿಶ್ಲೇಷಣೆ ಮಾಡಲಾಗುತ್ತದೆ. ಈ ತಂತ್ರಗಳಿಗೆ ಪರ್ಯಾಯವಾಗಿ ಮನೆಯಲ್ಲೇ ಬಳಸುವ ಸಂಜ್ಞೆ/ಸಂಕೇತ ಭಾಷೆಯ ಬಗೆಗೆ ವಿದ್ಯಾರ್ಥಿಗಳಿಗೆ ತರಬೇತಿ ನೀಡಲಾಗುತ್ತದೆ. ನಾವು ಹೆತ್ತವರಿಗೂ ಸಂಕೇತ ಭಾಷೆಯ ಕಾರ್ಯಾಗಾರ ನಡೆಸುತ್ತೇವೆ. ಇದರಿಂದ ಮಗುವಿಗೆ ಶಾಲೆ ಮತ್ತು ಕುಟುಂಬದ ಸಂವಹನದಲ್ಲಿ ಯಾವುದೇ ವ್ಯತ್ಯಾಸ ಕಾಣಿಸುವುದಿಲ್ಲ.

- ಕ್ರಿಯಾತ್ಮಕ ಶಿಕ್ಷಣ: ಒಮ್ಮೆ ಈ ಮೂಲಕೌಶಲಗಳನ್ನು ಗಳಿಸಿದ ನಂತರ, ಕ್ರಿಯಾತ್ಮಕ ಶಿಕ್ಷಣ ತರಬೇತಿ ಶುರುವಾಗುತ್ತದೆ. ಇದರಲ್ಲಿ ಸಮಯ, ಹಣ, ಕ್ಯಾಲೆಂಡರ್ ಓದು, ಮುಖ್ಯ ಸ್ಥಳಗಳು, ಪ್ರದೇಶಗಳ ಗುರುತಿಸುವಿಕೆ ಇತ್ಯಾದಿಗಳನ್ನು ಕಲಿಸಲಾಗುತ್ತದೆ. ನಿಜ ಬದುಕಿನ ಸನ್ನಿವೇಶಗಳಿಗೆ ಅವರು ತೆರೆದುಕೊಳ್ಳುವಂತೆ ಮಾಡಿ ಪ್ರಾಯೋಗಿಕ ನೆಲೆಯಲ್ಲೇ ಅವುಗಳನ್ನು ಅಭ್ಯಾಸ ಮಾಡಿಸಲಾಗುತ್ತದೆ. ತರಬೇತಿಯು ಮೂಲ ವಿಚಾರಗಳೊಂದಿಗೆ ಆರಂಭ ಆಗುತ್ತದೆ. ಸಮಯಕ್ಕೆ ಸಂಬಂಧಿಸಿದ ಚಟುವಟಿಕೆಗಳ ಪರಿಕಲ್ಪನೆಗಳನ್ನು ಅರ್ಥೈಸುವುದಕ್ಕೆ ಹೇಳಿಕೊಡಲಾಗುತ್ತದೆ. ಅದೇ ರೀತಿ ಬೇಗ ಮತ್ತು ವಿಳಂಬ, ಕಡಿಮೆ ಮತ್ತು ಹೆಚ್ಚು ಇಂತಹ ಪರಿಕಲ್ಪನೆಗಳನ್ನು ತಿಳಿಸಲಾಗುತ್ತದೆ. ಕ್ರಮೇಣ ದೈನಂದಿನ ಬದುಕಿಗೆ ಬೇಕಾದ ಉನ್ನತ ಮಟ್ಟದ ಪರಿಕಲ್ಪನೆಗಳನ್ನು ಗಳಿಸುವಂತೆ ಮಾಡಲಾಗುತ್ತದೆ.

- ಕೌಶಲ ತರಬೇತಿ: ಈ ಮೇಲಿನ ಸ್ವತಂತ್ರ ಜೀವನಕ್ಕೆ ಬೇಕಾದ ಮೂಲಭೂತ ಕೌಶಲಗಳ ತರಬೇತಿ ಪಡೆದ ನಂತರ, ಮನೆ ನಿರ್ವಹಣೆಯ ತರಬೇತಿ, ವಿದ್ಯಾರ್ಥಿಗಳಿಗೆ ಸೂಕ್ತವಾದ ವೃತ್ತಿಪರ ತರಬೇತಿಗಳನ್ನು ಆರಂಭಿಸಲಾಗುತ್ತದೆ. ಇದೂ ಕೂಡ ತಮ್ಮನ್ನು ತಾವು ಅಂದಗೊಳಿಸುವುದು, ಮನೆ ನಿರ್ವಹಣೆ ಕೌಶಲ, ಕುಟುಂಬದ ಒಳಗೆ ಮತ್ತು ಹೊರಗೆ ಅಂತರ್‌ವ್ಯಕ್ತಿ ಸಂಬಂಧ ಕೌಶಲ, ನೆರೆಹೊರೆಯವರ ಪರಿಚಯ, ಸ್ವತಂತ್ರ ಪ್ರಯಾಣದ ಕೌಶಲ ಮತ್ತು ಕೊನೆಗೆ ನಿರ್ದಿಷ್ಟ ಸ್ಥಳದಲ್ಲಿಯೇ ಕೌಶಲ ತರಬೇತಿಗಳನ್ನು ಒಳಗೊಂಡಿರುತ್ತವೆ. ಕುಟುಂಬ.

- ವಿಶೇಷ ಅಗತ್ಯವುಳ್ಳ ಮಗುವಿನ ಬೆಳವಣಿಗೆ ಮತ್ತು ವ್ಯಕ್ತಿತ್ವ ರೂಪುಗೊಳ್ಳುವಲ್ಲಿ, ಅದು ಸ್ವತಂತ್ರವಾಗಿ ಕಾರ್ಯ-ನಿರ್ವಹಿಸುವಂತೆ ಮಾಡುವಲ್ಲಿ ಕುಟುಂಬವು ಅತ್ಯಂತ ಪ್ರಬಲ ಮತ್ತು ಮುಖ್ಯ ಭಾವನಾತ್ಮಕ ಒತ್ತಾಸೆಯ ವ್ಯವಸ್ಥೆಯಾಗಿ ಕೆಲಸ ಮಾಡುತ್ತದೆ. ಕುಟುಂಬಗಳು ಭಾಗಿಯಾದಾಗ ಅತ್ಯುತ್ತಮ ಫಲಿತಾಂಶ ಬರುವುದನ್ನು ನೋಡಿದ್ದೇವೆ. ಮಕ್ಕಳ ಸಬಲೀಕರಣಕ್ಕೆ ಬೇಕಾದ ವೈಯಕ್ತಿಕ ಮತ್ತು ವೃತ್ತಿಪರ ತರಬೇತಿಗೆ ಹೆತ್ತವರ ಕನಸುಗಳು, ಪ್ರಯತ್ನಗಳು, ನಡವಳಿಕೆಗಳೇ ಆಧಾರ.

ಮಕ್ಕಳನ್ನು ಬೆಚ್ಚಗಿನ ಪ್ರೋತ್ಸಾಹದಾಯಕ ವಾತಾವರಣದಲ್ಲಿ ಪೋಷಿಸುವುದು ಅಗತ್ಯ. ಉತ್ತಮ ಸಕಾರಾತ್ಮಕ ಪಾಲಕತ್ವ (Parenting) ಅವರಿಗೆ ಬೇಕು. ಮಕ್ಕಳನ್ನು ಒಪ್ಪಿಕೊಂಡು ಗೌರವಿಸುವುದು, ಹೆತ್ತವರು ಮತ್ತು ಕುಟುಂಬದ ಇತರ ಸದಸ್ಯರು ನಿರಂತರವಾಗಿ ಅವರ ಚಟುವಟಿಕೆಗಳಲ್ಲಿ ಭಾಗವಹಿಸುವುದು ಮುಖ್ಯ. ಪಾಲಕರಿಗೆ ಅದರಲ್ಲೂ ತಾಯಂದಿರಿಗೆ ಸಂಬಂಧಿಸಿದಂತೆ ಇದು ದೊಡ್ಡ ಸವಾಲಿನ ಮತ್ತು ಚೈತನ್ಯ ಬೇಡುವ ಚಟುವಟಿಕೆ. ಹಾಗಾಗಿ ಮಗುವಿನ ಸಾಮರ್ಥ್ಯ, ಮಿತಿ ಮತ್ತು ವೈಯಕ್ತಿಕ ಭಾವನೆಗಳ ನಿರ್ವಹಣೆಗಾಗಿ ಹೆತ್ತವರಿಬ್ಬರಲ್ಲೂ ಜಾಗೃತಿ ಮೂಡಿಸುವ ನಿಟ್ಟಿನಲ್ಲಿ ನಿಯತವಾಗಿ ಒಬ್ಬರ ನಂತರ ಒಬ್ಬರಿಗೆ ಎಂಬಂತೆ ಸಮಾಲೋಚನೆಯು ತರಗತಿಗಳನ್ನು ನಡೆಸಲಾಗುತ್ತದೆ. ಪೋಷಕರಿಗೆ, ಆಧ್ಯಾತ್ಮಿಕವಾಗಿ ಶಮನ ನೀಡುವ ಕಾರ್ಯಾ-ಗಾರಗಳು, ಕಲಾ ಆಧಾರಿತ ಚಿಕಿತ್ಸೆಗಳ ಮೂಲಕ ಆತ್ಮಾವಲೋಕನ, ಚಲನೆಯ ಚಿಕಿತ್ಸೆ, ಯೋಗ ಚಿಕಿತ್ಸೆ ಮತ್ತು ಕೌಟುಂಬಿಕ ಬಾಂಧವ್ಯ ದಿನ ಮುಂತಾದವುಗಳ ಮೂಲಕ ಸಬಲೀಕರಣಗೊಳಿಸುವ ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತದೆ. ಅನಂತರ ಒಡಹುಟ್ಟಿದವರಿಗೆ, ಮತ್ತು ವಿಸ್ತರಿತ ಕುಟುಂಬದ ಇತರ ಸದಸ್ಯರಿಗೆ ಕಾರ್ಯಾಗಾರಗಳು ಜರುಗುತ್ತವೆ. ಮಕ್ಕಳನ್ನು ಒಪ್ಪಿಕೊಳ್ಳುವುದಕ್ಕೆ ಮತ್ತು ಕೌಟುಂಬಿಕವಾಗಿ ಮಗುವನ್ನು ತೊಡಗಿಸಿಕೊಳ್ಳಲು ಇಂತಹ ಕಾರ್ಯಾಗಾರಗಳು ಬೇಕಾಗುತ್ತವೆ. ವಿಸ್ತೃತ ನೆಲೆಯಲ್ಲಿ ಇದು ಬಹುತೇಕ ತಾಯಂದಿರ ಮೇಲಿನ ಒತ್ತಡವನ್ನು ತಗ್ಗಿಸುತ್ತದೆ.

**ಸಮುದಾಯ**

ಬೌದ್ಧಿಕ ನ್ಯೂನತೆ ಇರುವ ಮಕ್ಕಳು ಮತ್ತು ಅವರ ಕುಟುಂಬಗಳ ಬದುಕಿನ ಸಮಗ್ರ ಸಿದ್ಧತೆ ಮತ್ತು ಗುಣಮಟ್ಟದ ಜೀವನದಲ್ಲಿ ಸಮುದಾಯ ಮುಖ್ಯ ಪಾತ್ರವನ್ನು ವಹಿಸುತ್ತದೆ ಎನ್ನುವುದರಲ್ಲಿ ಸಂದೇಹವಿಲ್ಲ. ದುರ-ದೃಷ್ಟವಶಾತ್ ಸಾಮಾಜಿಕ ಕಳಂಕ, ಜಾಗೃತಿಯ ಕೊರತೆ, ನಕಾರಾತ್ಮಕ ಪ್ರವೃತ್ತಿ, ಹೇಗೆ ಸಹಾಯ ಮಾಡಬಹುದು, ಒಳಗೊಳ್ಳಿಸಬಹುದು ಎನ್ನುವುದಕ್ಕಿಂತ ವಿಕಲತೆಯ ಮತ್ತು ಮಗು ಏನು ಮಾಡಲಾರದು ಎನ್ನುವುದರ ಮೇಲೆ ಹೆಚ್ಚಿನ ಗಮನ ಕೇಂದ್ರೀಕರಿಸುವ ಸಮಾಜ, ತಾನು ಹೇಗೆ ಮಗುವನ್ನು ತಲುಪಲು ಸಾಧ್ಯ ಎಂಬಲ್ಲಿ ಸಾಮಾಜಿಕ ಜವಾಬ್ದಾರಿ ತೋರಬೇಕಾಗಿರುವುದನ್ನುನ್ನು ಅಲ್ಲ-ಗಳೆಯುವುದು ಸಾಧ್ಯವಿಲ್ಲ. ಇದಕ್ಕೆ ಇರುವ ಪರಿಹಾರ ಎಂದರೆ ಸೂಕ್ತ ಸಾರ್ವಜನಿಕ ಶಿಕ್ಷಣ ಮತ್ತು ನೆರೆಹೊರೆಯನ್ನು ಇದಕ್ಕಾಗಿ ಸೂಕ್ಷ್ಮಮತಿಗಳಾಗಿಸುವ ಕಾರ್ಯಕ್ರಮಗಳು. ಹೀಗಾಗಿ ಕಾರ್ಪೋರೇಟ್ ಸಂಸ್ಥೆಗಳ, ಸಾರ್ವಜನಿಕ ಸೇವಾ ಇಲಾಖೆಗಳ ಮತ್ತು ಮುಖ್ಯವಾಹಿನಿಯ ಶಾಲೆಗಳ, ನಿವಾಸಿಗಳ ಅಭಿವೃದ್ಧಿ ಸಂಘಗಳ, ಸಾರಿಗೆ ಸಿಬ್ಬಂದಿಯ ಸಹಕಾರದೊಂದಿಗೆ ನಿಯತವಾಗಿ ಸಂವಾದಗಳನ್ನು ಸಂಯೋಜಿಸಿ ಆರಂಭಿಸಲಾಗಿದೆ. ಪ್ರತಿಯೊಬ್ಬರೂ ಅನುಕಂಪ ಮತ್ತು ತೀರ್ಪು ನೀಡುವ ಸ್ಥಿತಿಗಿಂತ ಅನುಭೂತಿಯ ಮತ್ತು ಬೆಂಬಲ ನೀಡುವ ಸ್ಥಿತಿಯಲಿರಬೇಕು ಎಂದು ಅರ್ಥಮಾಡಿಕೊಳ್ಳಲು ಈಸಂವಾದಗಳು ಸಹಾಯಕ. ಮಕ್ಕಳನ್ನು ತರಕಾರಿ ಮಾರುಕಟ್ಟೆ, ಮಾಲ್, ಹಾಲಿನ ಅಂಗಡಿ, ರೈಲ್ವೇ ನಿಲ್ದಾಣ, ಅಂಚೆಕಚೇರಿ, ಔಷಧ ಅಂಗಡಿಗಳಿಗೆ ಸಂವಾದಕ್ಕಾಗಿ ಮತ್ತು ಖರೀದಿ ಮಾಡುವುದಕ್ಕಾಗಿ ಕರೆದೊಯ್ಯಲಾಗುತ್ತದೆ. ಸೇವಾ ಪೂರೈಕೆದಾರರಲ್ಲಿ ವಿಶೇಷ ಅಗತ್ಯವುಳ್ಳ ಮಕ್ಕಳ ಸಮಸ್ಯೆಗಳ ಬಗೆಗೆ ಜಾಗೃತಿ ಮೂಡಿಸುವುದಕ್ಕೆ

ಇಂತಹ ಅವಕಾಶ ಕಲ್ಪಿಸಲಾಗುತ್ತದೆ. ಈ ಮಕ್ಕಳನ್ನು ನಾವು ಯಾಕೆ ಮತ್ತು ಹೇಗೆ ತೊಡಗಿಸಿಕೊಳ್ಳಬೇಕು ಎಂದು ಅರ್ಥೈಸುವುದಕ್ಕೆ ಇದು ದಾರಿ ಮಾಡಿಕೊಡುತ್ತದೆ.

'ಮಂಡಲ' ಕಾರ್ಯಕ್ರಮದ ವಿಶ್ಲೇಷಣೆ ಮತ್ತು ಫಲಿತಾಂಶ




ವಿಶೇಷ ಅಗತ್ಯವುಳ್ಳ ಮಕ್ಕಳ ಶಿಕ್ಷಣ/ತರಬೇತಿಗಳಲ್ಲಿ ಶಾಲೆ, ಕುಟುಂಬ ಮತ್ತು ಸಮುದಾಯದ ಕೊಡುಗೆ ಏನು ಎನ್ನುವುದನ್ನು ಮುಂದೆ ನೀಡಲಾದ ಕೋಷ್ಟಕ ಬಹಳ ಸ್ಪಷ್ಟವಾಗಿ ತೋರಿಸಿಕೊಡುತ್ತದೆ.

ಪ್ರತಿಯೊಬ್ಬ ವಿಶೇಷ ಅಗತ್ಯವುಳ್ಳ ಮಗುವಿನ ಶಿಕ್ಷಣದ ಮೂರು ಮುಖ್ಯ ಅಂತಿಮ ಗುರಿಗಳಗೆ-ಸ್ವತಂತ್ರ ಬದುಕಿನ ಕೌಶಲಗಳು, ಉದ್ಯೋಗಾರ್ಹತೆ ಮತ್ತು ಒಳಗೊಳ್ಳುವಿಕೆ ಸಂಬಂಧಿಸಿದ ಅನುಕ್ರಮ ಸಾಧನೆ ಈ ಕೋಷ್ಟಕದಲ್ಲಿದೆ. ಹೀಗೆ ಬೌದ್ಧಿಕ ನ್ಯೂನತೆ ಇರುವ ವಿದ್ಯಾರ್ಥಿಗಳ ಆದರ್ಶ ಶಿಕ್ಷಣವು ಶಾಲೆಗಳ ಜೊತೆಗೆ ಕುಟುಂಬಗಳು ಸೇರಿಕೊಳ್ಳುವುದರಿಂದ ಮತ್ತು ಅದೇ ಹೊತ್ತಿಗೆ ಸಮಾಜವನ್ನು ಸಂವೇದನಾಶೀಲಗೊಳಿಸುವುದರಿಂದ ಆರಂಭಗೊಳ್ಳುತ್ತದೆ. ಈ ಧೋರಣೆಯು ಶಾಲೆ ಮತ್ತು ಕುಟುಂಬ ಪರಿಸರದಿಂದ ಸಮುದಾಯದಲ್ಲಿ ಗೌರವದಿಂದ ಬದುಕುವ ಕಡೆಗೆ ಈ ಮಕ್ಕಳನ್ನು ಸರಿಯಾದ ಮತ್ತು ಸರಳವಾದ ಚಲನೆಗೆ ಸುಗಮಗೊಳಿಸುತ್ತದೆ.




**ಉಷಾ ಮದನ್**, ಎಂಎಸ್ಸಿ (ಜೆನೆಟಿಕ್ಸ್), ಡಿಸಿಎಸ್, ಎಂ.ಎಸ್. (ಮನೋಚಿಕಿತ್ಸೆ + ಸಮಾಲೋಚನೆ), ಅವರು ದೀಪಿಕಾ ವಿಶೇಷ ಶಾಲೆಯಲ್ಲಿ ಸಾರ್ವಜನಿಕ ಸಂಪರ್ಕ ಅಧಿಕಾರಿ ಮತ್ತು ಸಮಾಲೋಚನಾ ಸಂಯೋಜಕಿಯಾಗಿ 2007ರಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ಅದಕ್ಕೂ ಮುನ್ನ ಅವರು ಪ್ರಮೇಯಾ ಹೆಲ್ತ್ ಪ್ರೈವೇಟ್ ಲಿಮಿಟೆಡ್‌ನಲ್ಲಿ ಸಲಹಾ ಮನೋಚಿಕಿತ್ಸಕಿಯಾಗಿ ದುಡಿದಿದ್ದಾರೆ. ಬೆಂಗಳೂರಿನ ಐಆರ್‌ಸಿಯಲ್ಲಿ ಸಂಪನ್ಮೂಲ ಸಿಬ್ಬಂದಿಯಾಗಿ ದುಡಿದಿದ್ದಾರೆ. ಬೆಂಗಳೂರಿನ ಪೂರ್ಣಪ್ರಜ್ಞ ಶಿಕ್ಷಣ ಸಂಸ್ಥೆಯ ಪಾಲಕರ ಕಾರ್ಯಾಗಾರಗಳಲ್ಲಿ ಬೋಧಕರಾಗಿ ಕೆಲಸ ಮಾಡಿದ್ದಾರೆ. ಗಿವ್ ಇಂಡಿಯಾ ಫೋರ್ ವಾಯ್ಸ್‌ಲೆಸ್‌ನ ಸ್ಥಾಪಕ ಧರ್ಮದರ್ಶಿಯೂ ಆಗಿದ್ದಾರೆ. ಅವರನ್ನು ushamadan2@gmail.com ಮೂಲಕ ಸಂಪರ್ಕಿಸಬಹುದು.



ಅನುವಾದ: **ಬಾಲಕೃಷ್ಣ ಹೊಸಂಗಡಿ** । ಪರಿಶೀಲನೆ: **ನಾಗಮಣಿ ಎಸ್ ಎನ್**

# ಒಂದು ಮಹಾನ್ ಉದ್ದೇಶಕ್ಕಾಗಿ ಕಾರ್ಯವೆಸಗುವುದು

## ವಿಶೇಷ ಶಿಕ್ಷಕರೊಬ್ಬರ ಸಂದರ್ಶನ

ವಿಜಯಶ್ರೀ ಪಿ.ಎಸ್.

ಒಂದು ಶಾಲೆಯಲ್ಲಿ ವೈಕಲ್ಯಗಳಿರುವ ಮತ್ತು ವೈಕಲ್ಯಗಳಿರದ ಮಕ್ಕಳು ಜೊತೆಗೆ ಶಿಕ್ಷಣ ಪಡೆಯುತ್ತಿದ್ದರೆ, ನಮ್ಮ ವಿದ್ಯಾರ್ಥಿ ಸಮುದಾಯವು ಪರಸ್ಪರ ಗೌರವ ನೀಡಬೇಕೆನ್ನುವುದನ್ನು ಹೇಗೆ ಕಲಿಯುತ್ತದೆ ಮತ್ತು ಅರ್ಥ ಮಾಡಿಕೊಳ್ಳುತ್ತದೆ! ಹೀಗೆ ಮಾಡುತ್ತಿರುವ ಒಂದು ತುಂಬಾ ಅಪೂರ್ವವಾದ ಶಾಲೆಯೆಂದರೆ, ಮಂಡ್ಯ ಜಿಲ್ಲೆಯ ಬೆಳಗೊಳ ತಾಲೂಕಿನ ಪೇಪರ್‌ಟೌನ್‌ನಲ್ಲಿರುವ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ. ಸರ್ಕಾರಿ ಶಾಲಾ ಶಿಕ್ಷಕರೊಬ್ಬರು ಕೈಗೊಂಡ ಉಪಕ್ರಮವು ಸಾಮಾನ್ಯ ಶಾಲೆಯಲ್ಲಿ ಓದುವ ಮಕ್ಕಳು, ವಿಶೇಷ ಅಗತ್ಯ ಬೇಕಾದ ಮಕ್ಕಳನ್ನು ನೋಡುವ ದೃಷ್ಟಿಕೋನವನ್ನೇ ಬದಲಾಯಿಸಿದೆ.

ನಾನು ಈ ಪಟ್ಟಣಕ್ಕೆ ಭೇಟಿ ನೀಡಿದ ದಿನ, ವೈದ್ಯಕೀಯ ಶಿಬಿರಕ್ಕೆಂದು ತಮ್ಮ ವಿಶೇಷ ಅಗತ್ಯ ಬೇಕಾದ ಮಕ್ಕಳನ್ನು ಕರೆದುಕೊಂಡು ಬಂದಿದ್ದಐವತ್ತಕ್ಕೂ ಹೆಚ್ಚು ಪಾಲಕರು ಆ ಶಾಲಾ ಆವರಣದಲ್ಲಿ ನೆರೆದಿದ್ದರು. ಕ್ಲಸ್ಟರ್ ಅಧಿಕಾರಿಯು ನಮ್ಮನ್ನು ಸಯ್ಯದ್ ಖಾನ್ ಎಂಬ ಶಿಕ್ಷಕರೊಬ್ಬರಿಗೆ ಪರಿಚಯಿಸಿದರು. ಹಾಗೆ ಪರಿಚಯಿಸುವಾಗ, ಈ ಶಾಲೆಯಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರವು ಆರಂಭವಾಗಲು ಈ ಶಿಕ್ಷಕರೇ ಕಾರಣವೆಂದೂ, ಅವರು ಶಿಕ್ಷಕರಾಗಿದ್ದುಕೊಂಡೇ ಇಡೀ ಪ್ರಕ್ರಿಯೆಯ ಜವಾಬ್ದಾರಿಯನ್ನು ನೋಡಿಕೊಳ್ಳುತ್ತಾರೆಂದೂ ಉಲ್ಲೇಖಿಸಿದರು. ಸುತ್ತಲೂ ಓಡಾಡುತ್ತಿದ್ದ ವಿದ್ಯಾರ್ಥಿಗಳು, ತಮ್ಮ ಮಗುವಿನ ವೈದ್ಯಕೀಯ (ಆರೋಗ್ಯದ) ಸ್ಥಿತಿಗತಿಯ ಕುರಿತು ವೈದ್ಯರೊಡನೆ ಚರ್ಚಿಸುತ್ತಿದ್ದ ಪೋಷಕರು, ಸ್ವಯಂಸೇವಕರಾಗಿ ಎಲ್ಲ ವ್ಯವಸ್ಥೆಯನ್ನು ಗಮನವಿಟ್ಟು ನೋಡಿಕೊಳ್ಳುತ್ತಿದ್ದ ಶಿಕ್ಷಕರನ್ನು ಕಂಡು ಕುತೂಹಲವಾಯಿತು. ಶಾಲಾ ಸಮಯದ ನಂತರ ಸಯ್ಯದ್‌ಖಾನ್ ಅವರೊಂದಿಗೆ ಒಂದು ಸಂದರ್ಶನ ನಡೆಸಬೇಕೆಂಬ ಉದ್ದೇಶದಿಂದ ವಿನಂತಿಸಿಕೊಂಡೆ. ಅವರು ಆ ಕೂಡಲೇ ಒಪ್ಪಿದರು. ವಿಜಯಶ್ರೀ : ನಿಮ್ಮ ಶೈಕ್ಷಣಿಕ ಹಿನ್ನೆಲೆ ಏನು? ನೀವು ವಿಶೇಷ ಶಿಕ್ಷಕರಾಗುವುದನ್ನೇ ಆರಿಸಿಕೊಂಡಿದ್ದೇಕೆ?

ಖಾನ್: ನಾನು B.A ಮುಗಿಸಿ ಶ್ರೀರಂಗಪಟ್ಟಣ ತಾಲೂಕಿನ ಗಾಣಂಗೂರಿನಲ್ಲಿರುವ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಸಹಾಯಕ ಶಿಕ್ಷಕನಾಗಿ ಕೆಲಸ ಮಾಡುತ್ತಿದ್ದೆ. ಸೇವಾವಧಿಯ ಆರಂಭಿಕ ದಿನಗಳಲ್ಲಿ ನಾನು ಶಿಕ್ಷಣ ಇಲಾಖೆಯಲ್ಲಿರುವ ನನ್ನ ಸಹೋದ್ಯೋಗಿಗಳನ್ನು ಭೇಟಿಯಾದಾಗಲೆಲ್ಲ ವೈಕಲ್ಯಗಳಿರುವ ಬಹಳಷ್ಟು ಮಕ್ಕಳು ಸಾವನ್ನಪ್ಪುತ್ತಿರುವುದು ನಮಗೆ ತಿಳಿದುಬರುತ್ತಿತ್ತು. ಇಂತಹ ಸುದ್ದಿಗಳು ನನ್ನ ಮನವನ್ನು ಕಲಕುತ್ತಿದ್ದವು. ಸೌಲಭ್ಯಗಳಿಲ್ಲ ಎನ್ನುವ ಒಂದೇ ಕಾರಣಕ್ಕೆ ಈ ಮಕ್ಕಳು ಏಕೆ ಸಾಯಬೇಕು ಎಂದು ಆಶ್ಚರ್ಯಪಡುತ್ತಿದ್ದೆ. ಈ ಸಮಯದಲ್ಲಿ ಇಲಾಖೆಯು ಸರ್ಕಾರಿ ಪ್ರೌಢಶಾಲೆಗಳಿಗೆ ಹೊಸತಾಗಿ ನೇಮಕಗೊಂಡ ಸಹಾಯಕ ಶಿಕ್ಷಕರಿಗೆ ಆರಂಭಿಕ ಹಂತದಲ್ಲಿ ನೀಡುವ ೧೦ ದಿನಗಳ 'ಬುನಾದಿ' ತರಬೇತಿ ಕಾರ್ಯಕ್ರಮವನ್ನು ಆಯೋಜಿಸಿತ್ತು. ತರಬೇತಿಯ ಬಳಿಕ, ಭಾಗವಹಿಸಿದವರು ಪರೀಕ್ಷೆಯೊಂದರಲ್ಲಿ ತೇರ್ಗಡೆಯಾಗಬೇಕಿತ್ತು. ಆ ಮೌಲ್ಯಮಾಪನದಲ್ಲಿ ತೇರ್ಗಡೆಯಾದ ಏಳು ಜನರಲ್ಲಿ ನಾನೂ ಒಬ್ಬನಾಗಿದ್ದೆ. ನಮ್ಮನ್ನು ವಿಶೇಷ ಬಿಎಡ್ ಪದವಿ (Special B.Ed Certification) ಪೂರ್ಣಗೊಳಿಸಲು ಮಧ್ಯಪ್ರದೇಶದ ಭೋಜ್ ವಿಶ್ವವಿದ್ಯಾನಿಲಯಕ್ಕೆ ಕಳುಹಿಸಲಾಯಿತು. ಕರ್ನಾಟಕ ಸರ್ಕಾರವು ನಮ್ಮ ವಿಶೇಷ ಬಿಎಡ್ ಪದವಿಗೆ ಬೇಕಾದ ಹಣಕಾಸು ನೆರವನ್ನು ಒದಗಿಸಿತು.ನಾನದನ್ನು ಮುಗಿಸಿ, ಒಬ್ಬ ವಿಶೇಷ ಶಿಕ್ಷಕನಾಗಿ ಮರಳಿ ಬಂದೆ. ವಿಜಯಶ್ರೀ: ಯಾವಾಗ ಮತ್ತು ಹೇಗೆ ನೀವು ಈ ಶಾಲೆಗೆ ನಿಯುಕ್ತರಾದಿರಿ?

ಖಾನ್ : ನಾನು ನನ್ನ ಶಿಕ್ಷಣವನ್ನು ಮುಗಿಸಿ ವಾಪಸ್ಸು ಬಂದಾಗ ಈ ಪ್ರದೇಶದ ಸುತ್ತ ಎಲ್ಲೂ ಪ್ರಾಥಮಿಕ ಆರೋಗ್ಯ ಕೇಂದ್ರವಿರಲಿಲ್ಲ. ಹಾಗಾಗಿ ಆರೋಗ್ಯ ಕೇಂದ್ರವನ್ನು ಸ್ಥಾಪಿಸಲು ಸರಿಯಾದ ಸ್ಥಳವನ್ನು ಆರಿಸುವುದು ನಾವು ಮಾಡಬೇಕಾಗಿದ್ದ ಮೊದಲ ಕೆಲಸವಾಗಿತ್ತು. ಅದಕ್ಕಾಗಿ, ವಿಶೇಷ ಅಗತ್ಯ ಬೇಕಾದಮಕ್ಕಳು ಹೆಚ್ಚಿನ ಸಂಖ್ಯೆಯಲ್ಲಿರುವ ಜಾಗವನ್ನು ಗುರುತಿಸುವ ಅಗತ್ಯವಿತ್ತು. ಆರೋಗ್ಯ ಇಲಾಖೆಯ ಬಳಿ ಇರುವ ದಾಖಲೆಗಳನ್ನು ಪರಿಶೀಲಿಸಿದಾಗ ಕೆಆರ್‌ಎಸ್ ಕ್ಲಸ್ಟರ್‌ನಲ್ಲಿ ವಿಶೇಷ ಅಗತ್ಯ ಬೇಕಾದ ಮಕ್ಕಳು ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ ಎನ್ನುವುದು ತಿಳಿದುಬಂದಿತು. ಪ್ರಥಮ ಚಿಕಿತ್ಸೆ ವಾಹನವನ್ನು ಕೂಡ ಒಳಗೊಂಡ ನಮ್ಮ ಸಿಬ್ಬಂದಿ ತಂಡವು ಆ ಪ್ರದೇಶದಲ್ಲೆಲ್ಲ ಓಡಾಡಿ, ಅಂಗನವಾಡಿ ಕಾರ್ಯಕರ್ತರ ನೆರವಿನಿಂದ ವಿಶೇಷ ಅಗತ್ಯ ಬೇಕಾದ ಮಕ್ಕಳಿರುವ ಮನೆಗಳಿಗೆ ಭೇಟಿ ನೀಡಲು ಸಾಧ್ಯವಾಯಿತು. ಅತ್ಯಂತ ದೂರಪ್ರದೇಶದಲ್ಲಿ ವಾಸಿಸುವುದು, ಆರ್ಥಿಕವಾಗಿ ಹಿಂದುಳಿದಿರುವುದು ಕೂಡಾ ಅಂಥಾ ಕುಟುಂಬದ ಮಕ್ಕಳ ಆರೋಗ್ಯವನ್ನು ಹೇಗೆ ಮತ್ತಷ್ಟು ದುರ್ಬಲಗೊಳಿಸುತ್ತದೆ ಎನ್ನುವುದನ್ನು ನಾವು ಕಂಡೆವು. ಆದ್ದರಿಂದ ನಾವು ಆರೋಗ್ಯ ಕೇಂದ್ರವನ್ನು ಸ್ಥಾಪಿಸಲು ಜಾಗವನ್ನು ಹುಡುಕಲು ಆರಂಭಿಸಿದೆವು. ಆಗ ನಮಗೆ ತುಂಬಾ ಕಡಿಮೆ ಸಂಖ್ಯೆಯ ವಿದ್ಯಾರ್ಥಿಗಳ ದಾಖಲಾತಿಯಿಂದಾಗಿ ಮುಚ್ಚುವ ಹಂತದಲ್ಲಿದ್ದ ಪೇಪರ್ ಟೌನ್‌ನಲ್ಲಿರುವ ಶಾಲೆಯ ಕಟ್ಟಡದ ಬಗ್ಗೆ ತಿಳಿದು ಬಂದಿತು. ಆ ಕೂಡಲೇ ನಾವು ನೇರವಾಗಿ ಶಿಕ್ಷಣ ಇಲಾಖೆಯ ವಲಯ ಕಚೇರಿಯನ್ನು (Block Education Department) ಸಂಪರ್ಕಿಸಿ, ಶಾಲೆಯನ್ನು ಉಳಿಸಿಕೊಳ್ಳುವುದರ ಜೊತೆಗೆ ಆ ಹೋಬಳಿಯ ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ಅಲ್ಲಿಯೇ ಸ್ಥಾಪಿಸಬೇಕೆಂದು ವಿನಂತಿಸಿಕೊಂಡೆವು.

ವಿಜಯಶ್ರೀ : ಆ ಕೂಡಲೇಅನುಮತಿದೊರೆಯಿತೇ?

ಖಾನ್ : ಹೌದು! ನನಗೆ ಈ ಶುಭ ಸುದ್ದಿ ತಿಳಿದು ತುಂಬಾ ಸಂತೋಷವಾಯಿತು. ಅಷ್ಟರಲ್ಲಿ, ಒಂದು ಸಶಕ್ತ ತಂಡವನ್ನು ಹೊಂದಿರುವುದು ತುಂಬಾ ಮುಖ್ಯವೆಂದು ನನಗೆ ತಿಳಿದಿದ್ದರಿಂದ, ನಾನು ಮಾತನಾಡಿ ಕೆಲವು ಸ್ವಯಂಸೇವಕರು ಮತ್ತು ಸಾಮಾಜಿಕ ಕಾರ್ಯಕರ್ತರನ್ನು ಹುಡುಕಿ ಇಟ್ಟಿದ್ದೆ. ನಾವು ಒಂದು ತಂಡವಾಗಿಯೇ ಈ ಶಾಲೆಗೆ ಬಂದೆವು. ಅರ್ಧ ಇಂಚಿನಷ್ಟು ದಪ್ಪ ಧೂಳು ತುಂಬಿದ್ದ ಮೊದಲನೆಯ ಮಹಡಿಯ ಜಗುಲಿಯನ್ನು ಸ್ವಚ್ಛ ಮಾಡಬೇಕಾಗಿತ್ತು. ಅಗತ್ಯ ಸಾಮಗ್ರಿಗಳನ್ನು ಖರೀದಿಸಲೆಂದು

ನಮಗೆ ಒಂದಿಷ್ಟು ಹಣನೀಡಲಾಗಿತ್ತು. ನಾವು, 'ಪುನರ್ವಸತಿಕೇಂದ್ರ' (Rehabilitation Centre) ಎಂಬ ಫಲಕವೊಂದನ್ನು ತೂಗುಹಾಕಿದೆವು. ನಮ್ಮಂತೆ ಕೆಳಗೆ, ನೆಲ ಅಂತಸ್ತಿನಲ್ಲಿ ಸಾಮಾನ್ಯ ಶಾಲೆಯು ಎಂದಿನ ಹಾಗೆ ಸರಾಗವಾಗಿ ನಡೆಯುತ್ತಿದ್ದರಿಂದ ಮಧ್ಯಾಹ್ನದ ಬಿಸಿಯೂಟದ ಬಗ್ಗೆ ತಲೆಕೆಡಿಸಿಕೊಳ್ಳಬೇಕಾಗಿರಲಿಲ್ಲ. ನಾವು ಎಲ್ಲ ರೀತಿಯಲ್ಲಿಯೂ ನೆಲೆಗೊಂಡಿದ್ದೆವು. ಕೇಂದ್ರವು ಆರಂಭವಾದ ಮರುದಿನವೇ ಪಾಲಕರು ಬಂದು ಜಮಾಯಿಸುತ್ತಾರೆಂದು ನಾನು ಭಾವಿಸಿದ್ದೆ. ದುರದೃಷ್ಟವಶಾತ್, ಬಹಳ ಸಮಯದವರೆಗೆ ಈ ಕಟ್ಟಡಕ್ಕೆ ಯಾರೂ ಬರಲೇಇಲ್ಲ.

ವಿಜಯಶ್ರೀ: ಅದು ಬಹುಶಃ ತುಂಬಾ ಎದೆಗುಂದಿಸು-ವಂತದ್ದಾಗಿರಬೇಕು.

ಖಾನ್: ಈ ಕೇಂದ್ರ ಏತಕ್ಕಾಗಿ ಇದೆ, ಇದರ ಉದ್ದೇಶ ಏನು ಎನ್ನುವುದನ್ನು ಪಾಲಕರಾಗಲೀ ಸಮುದಾಯವಾಗಲೀ ಸ್ಪಷ್ಟವಾಗಿ ತಿಳಿದುಕೊಂಡಿಲ್ಲ ಎನ್ನುವುದು ನನಗೆ ಮನದಟ್ಟಾಯಿತು. ಹಾಗಾಗಿ, ಸುಮಾರು 2008ರ ಮಧ್ಯಭಾಗದ ಹೊತ್ತಿಗೆ, ಮೂರು ಜನರಿರುವ ನಮ್ಮ ಸಮರ್ಥ ತಂಡವು ಪಾಲಕರನ್ನು ಅವರ ಮನೆಯಲ್ಲಿಯೇ ಭೇಟಿಯಾಗಲು ಹೊರಟಿತು. ಅಂಗನವಾಡಿ ಕಾರ್ಯಕರ್ತರ ಜೊತೆಗೂಡಿ ನಾವು ಪ್ರತಿಯೊಂದು ಕುಟುಂಬವನ್ನೂ ಸಂಪರ್ಕಿಸಿದೆವು. ಆ ಮಕ್ಕಳ ಸ್ಥಿತಿ ಕರುಣಾಜನಕವಾಗಿತ್ತು. ಇದರಲ್ಲಿ ಪಾಲಕರ ತಪ್ಪಿರಲಿಲ್ಲ. ಅವರಿಗೆ ಇಂತಹ ಮಕ್ಕಳ ಕಾಳಜಿಯನ್ನು ಹೇಗೆ ತೆಗೆದುಕೊಳ್ಳಬೇಕೆಂಬ ಅರಿವೇ ಇರಲಿಲ್ಲ. ಕೆಲವು ಮಕ್ಕಳಂತೂ ಸಂಪೂರ್ಣ ಹಾಸಿಗೆ ಹಿಡಿದಿದ್ದರು. ಅವರ ಕೋಣೆ ಮತ್ತು ಸುತ್ತಮುತ್ತಲಿನ ಸ್ವಚ್ಛತೆಯಂತೂ ತೀರಾ ಶೋಚನೀಯವಾಗಿತ್ತು. ನಿಜ ಹೇಳಬೇಕೆಂದರೆ, ಮಕ್ಕಳು ತಮ್ಮ ಪರಿಸರವು ಸ್ವಚ್ಛವಾಗಿರದ ಕಾರಣದಿಂದಲೂ ಬಳಲುತ್ತಿದ್ದರು. ಎಲ್ಲಾ ಹಳ್ಳಿಗಳಿಗೂ ನಿಯಮಿತವಾಗಿ ಭೇಟಿ ನೀಡುತ್ತಿದ್ದ ಕಾರಣ ನಾವು ಈ ಕುಟುಂಬಗಳಿಗೆ ಆತ್ಮೀಯರಾದೆವು, ನಮ್ಮ ನಡುವೆ ವಿಶ್ವಾಸ ಹುಟ್ಟಿತು. ಸಮಯ ಸರಿದಂತೆ, ಕುಟುಂಬಗಳು ನಮ್ಮನ್ನು ಬರಮಾಡಿಕೊಳ್ಳುತ್ತವೆ, ನಮ್ಮ ಹಸ್ತಕ್ಷೇಪವನ್ನು ಧನಾತ್ಮಕವಾಗಿ ಸ್ವೀಕರಿಸುತ್ತವೆ ಎಂಬುದು ಮನದಟ್ಟಾದ ಮೇಲೆ, ಮುಂದಿನ ಹೆಜ್ಜೆಯಾಗಿ ಸಮುದಾಯಗಳಿಗೆ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ವಿಶ್ವಾಸ ನಮಗೆ ಬಂದಿತು. ಆಗಲೇ ನಾವು ವಿಶೇಷ ಅಗತ್ಯ ಬೇಕಾದ ಮಕ್ಕಳಿಗೆ ಅಗತ್ಯ ಸೌಲಭ್ಯಗಳಿರುವ ಪುನರ್ವಸತಿ ಕೇಂದ್ರದ (Rehabilitation centre) ಪರಿಕಲ್ಪನೆಯನ್ನು ಪರಿಚಯಿಸಿದ್ದು.

ವಿಜಯಶ್ರೀ: ಪುನರ್ವಸತಿ ಕೇಂದ್ರವೊಂದು ಏನನ್ನೆಲ್ಲ ಮಾಡಬಲ್ಲದು ಎಂಬುದನ್ನು ಅವರು ಅರ್ಥ ಮಾಡಿಕೊಂಡರೇ?

ಖಾನ್ : ಮನೆಗಳಲ್ಲಿ ನಾವು ಪ್ರಥಮ ಚಿಕಿತ್ಸೆ ನೀಡುವುದನ್ನು ಮತ್ತು ಅತ್ಯಗತ್ಯವಾದ ಪ್ರಾಥಮಿಕ ಮಟ್ಟದ ದೈಹಿಕ ಚಿಕಿತ್ಸೆ (Physiotherapy) ಮಾಡುವುದನ್ನು ಪಾಲಕರು ನೋಡಿದ್ದರು. ಇದರಿಂದಾಗಿ, ಮನೆಯಲ್ಲಿ ನಾವು ಮಾಡುತ್ತಿದ್ದ ಸಾಮಾನ್ಯ ಚಟುವಟಿಕೆಗಳಿಗಿಂತಲೂ ಹೆಚ್ಚಿನದನ್ನು ಪುನರ್ವಸತಿ ಕೇಂದ್ರದಲ್ಲಿ ಒದಗಿಸುತ್ತೇವೆ ಎಂಬುದನ್ನು ಸ್ಪಷ್ಟಪಡಿಸಲು ನಮಗೆ ಸುಲಭವಾಯಿತು. ಅವರ ಮಕ್ಕಳು ಇನ್ನೊಂದಿಷ್ಟು ಹೆಚ್ಚು ಸ್ವತಂತ್ರರಾಗಲು ಪುನರ್ವಸತಿ ಕೇಂದ್ರವು ನೆರವಾಗುತ್ತದೆ ಎಂದು ತಿಳಿಹೇಳಿ ಕುಟುಂಬಗಳ ಮನವೊಲಿಸಿದೆವು.

ಮೊದಲ ವೈದ್ಯಕೀಯ ಶಿಬಿರಕ್ಕಾಗಿ ನಾವು ಕುಟುಂಬಗಳನ್ನು ಶಾಲೆಗೆ ಆಹ್ವಾನಿಸಿದಾಗ ಪಾಲಕರು ಆ ಕೂಡಲೇಒಪ್ಪಿಕೊಂಡರು. ಫಿಸಿಯೋಥೆರಪಿ ಸೌಲಭ್ಯಗಳು, ಮಕ್ಕಳು ಖುಷಿಪಡುವ ಆಟದ ಸಾಮಗ್ರಿ ಹಾಗೂ ಆಟಿಕೆ ಸಲಕರಣೆಗಳನ್ನು ನೋಡಿದ ಮೇಲೆ ಅವರಿಗೆ ಇಲ್ಲಿ ವೈದ್ಯರು/ತಜ್ಞರು ಕೂಡ ಲಭ್ಯರಿರುತ್ತಾರೆ ಎನ್ನುವುದು ಅರಿವಾಗಿ ತಮ್ಮ ಮಕ್ಕಳನ್ನು ಕಳುಹಿಸಲು ಸಿದ್ಧರಾದರು. ವಿಜಯಶ್ರೀ: ಅತ್ಯಂತ ದೂರ ಪ್ರದೇಶದಲ್ಲಿರುವ ಮತ್ತು ಸಾಂಪ್ರದಾಯಿಕ ಮನಸ್ಥಿತಿ ಹೊಂದಿರುವ ಈ ಪಾಲಕರ ಬದುಕನ್ನು ಪರಿಗಣಿಸಿದರೆ ಇದೊಂದು ಬಲು ದೊಡ್ಡ ಸಾಧನೆಯೇ.

ಖಾನ್: ನಮ್ಮ ತಂಡವು ಅದಕ್ಕಾಗಿ ಬಹಳಷ್ಟು ಶ್ರಮಪಟ್ಟಿದೆ. ಅವರ ವಿಶ್ವಾಸವನ್ನು ಗಳಿಸಲು ನಾವು ತಿಂಗಳುಗಳ ಕಾಲ ಕೆಲಸ ಮಾಡಬೇಕಾಯಿತು.

ವಿಜಯಶ್ರೀ : ಅದಾದ ನಂತರ ಕೇಂದ್ರವು ಹೇಗೆ ಕೆಲಸ ಮಾಡಿತು?

ಖಾನ್: ತಮ್ಮ ಮಕ್ಕಳು ಶಾಲೆಗೆ ಸಂತೋಷವಾಗಿ ಬರುತ್ತಿದ್ದಾರೆ ಎನ್ನುವುದಂತೂ ಪಾಲಕರಿಗೆ ಸ್ಪಷ್ಟವಾಗಿತ್ತು. ಕೆಲವು ದಿನಗಳ ಚಿಕಿತ್ಸೆಯ ನಂತರ ಕೆಲವು ಮಕ್ಕಳು ಸ್ವತಂತ್ರವಾಗಿ ಕುಳಿತುಕೊಳ್ಳಲು ಆರಂಭಿಸಿದರು. ಒಂದು ಮಗು ಲೋಹದ ಚೌಕಟ್ಟೊಂದರ ಆಧಾರ ಪಡೆದು ನಡೆಯಲು ಆರಂಭಿಸಿತು. ಇವೆಲ್ಲವೂ ಅವರ ಕುಟುಂಬಗಳಿಗೆ ಆಶ್ಚರ್ಯ ಉಂಟುಮಾಡಿತ್ತು. ಪಾಲಕರೆಲ್ಲ ಸೇರಿ ಇಲ್ಲೊಂದು ಸ್ನೇಹ-ಕೂಟವನ್ನು ರಚಿಸಿಕೊಂಡು ಮಕ್ಕಳು ಮತ್ತು ನಮ್ಮೊಂದಿಗೆ (ಸಿಬ್ಬಂದಿ) ಇಡೀ ದಿನ ಕಳೆಯಲಾರಂಭಿಸಿದರು. ಈಗ ನಾವೆಲ್ಲ ಒಂದೇ ಕುಟುಂಬದಂತಿದ್ದೇವೆ.

ವಿಜಯಶ್ರೀ : ಪುನರ್ವಸತಿ ಕೇಂದ್ರದಲ್ಲಿ ಒಂದು ಸಾಮಾನ್ಯ ದಿನಚರಿ ಹೇಗಿರುತ್ತದೆ?

ಖಾನ್: ಶಾಲೆಯು ಬೆಳಗ್ಗಿನ ಅಸೆಂಬ್ಲಿಯೊಂದಿಗೆ ಆರಂಭವಾತ್ತದೆ. ನಂತರ, ಮಕ್ಕಳು ಪಾಠ ಕೇಳಲು ತಮ್ಮ ತಮ್ಮ ತರಗತಿ ಕೊಠಡಿಗಳಿಗೆ ತೆರಳುತ್ತಾರೆ. ವಿಶೇಷ ಅಗತ್ಯ ಬೇಕಾದ ಮಕ್ಕಳು ತಮ್ಮ ಪಾಲಕರು ಮತ್ತು ಶಿಕ್ಷಕ ಸಿಬ್ಬಂದಿಗಳೊಡನೆ ದೈಹಿಕ ಚಿಕಿತ್ಸೆ, ಆಟ, ವಾಕ್‌ಚಿಕಿತ್ಸೆ ಮುಂತಾದ ಕೆಲವು ನಿತ್ಯದ ಯೋಜಿತ ಚಟುವಟಿಕೆಗಳನ್ನು ಆರಂಭಿಸುತ್ತಾರೆ. ಊಟದ ನಂತರ, ಈ ಮಕ್ಕಳು ಸಾಮಾನ್ಯ ವಿದ್ಯಾರ್ಥಿಗಳೊಂದಿಗೆ ವಿಷಯ ಸಂಬಂಧೀ ಪಾಠ ಕೇಳಲು ಆಯಾ ತರಗತಿ ಕೊಠಡಿಗಳಲ್ಲಿ ಕುಳಿತುಕೊಳ್ಳುತ್ತಾರೆ.

ವಿಜಯಶ್ರೀ : ಅಂದರೆ, ಎಲ್ಲಾ ಮಕ್ಕಳು ಒಟ್ಟಿಗೇ ಕಲಿಯುತ್ತಾರೆ?

ಖಾನ್: ಹೌದು. ಎಲ್ಲಾ ಮಕ್ಕಳೂ ಒಟ್ಟಿಗೇ ಕಲಿಯುತ್ತಾರೆ. (ನನ್ನ ಮುಖದಲ್ಲಿನ ಬೆರಗನ್ನು ನೋಡಿ ನಸುನಕ್ಕರು)

ವಿಜಯಶ್ರೀ : ನೀವಿದನ್ನೆಲ್ಲ ಹೇಗೆ ಮಾಡುತ್ತೀರಿ? ಇದು ತುಂಬಾ ಸವಾಲಿನ ಕೆಲಸವೇ ಆಗಿರಬೇಕು.

ಖಾನ್: ಹ್ಞಂ. ಹಾಗೇನೂ ಇಲ್ಲ ಮೇಡಂ. ವೈಕಲ್ಯಗಳಿರದ ಮಗುವಿಗೆ ಮಧ್ಯಮಗತಿಯಲ್ಲಿ ಕಲಿಸುವುದರಿಂದ ಅದ್ಭುತ ಪರಿಣಾಮ ಬೀರುತ್ತದೆಂಬ ಒಂದು ಸಂಗತಿಯನ್ನು ನಾನು ಅರಿತಿದ್ದೇನೆ. ಆದರೆ ಇಲ್ಲಿ ಎಲ್ಲ ತರಹದ ವಿದ್ಯಾರ್ಥಿಗಳಿರುವುದರಿಂದ ನಮ್ಮ ಶಿಕ್ಷಕರು ನಿಧಾನಗತಿಯಲ್ಲೇ ಕಲಿಸುತ್ತಾರೆ. ಇದರ ಪರಿಣಾಮವಾಗಿ, ವೈಕಲ್ಯಗಳಿರದ ಮಕ್ಕಳೂ ಕೂಡ ಚೆನ್ನಾಗಿ ಕಲಿಯುತ್ತಾರೆ.

ಎರಡೂ ತರಹದ ವಿದ್ಯಾರ್ಥಿಗಳಿಗೆ ಶಾಲೆಯು ನೀಡುವ ಒಳಗೊಳ್ಳುವಿಕೆಯು ಯಾವುದೇ ಅಳತೆಗೆ ಸಿಗುವಂತಹುದಲ್ಲ. ವಿದ್ಯಾರ್ಥಿಗಳು ಪರಸ್ಪರ ಸಹವಿದ್ಯಾರ್ಥಿಗಳೊಡಗೂಡಿ ಕಲಿಯುತ್ತ ಬೆಳೆಯುತ್ತಾರೆ. ಶಾಲಾ ಅವಧಿಯಲ್ಲಿ ಇಲ್ಲಿರುವ ಪಾಲಕರು ವಿದ್ಯಾರ್ಥಿಗಳ ಕಲಿಕೆಯಲ್ಲಿಯೂ ನೆರವು ನೀಡಲು ಮುಂದೆ ಬರುತ್ತಾರೆ. ಶಾಲೆಯ ಸಂಪೂರ್ಣ ವಾತಾವರಣವೇ ಪ್ರತಿಯೊಬ್ಬ ವಿದ್ಯಾರ್ಥಿಯ ಸಮಗ್ರ ಬೆಳವಣಿಗೆಗೆ ನೆರವು ನೀಡುವಂತಹ-ದಾಗಿರುತ್ತದೆ. ಇದು ಕಲಿಯಲು ಇರುವ ಅದ್ಭುತವಾದ ಸ್ಥಳಾವಕಾಶ!

ವಿಜಯಶ್ರೀ : ಸರ್, ನೀವು ಬೇರೆ ಬೇರೆ ಇಲಾಖೆಗಳ ಜೊತೆ ಹೇಗೆ ಕೆಲಸ ಮಾಡುತ್ತೀರಿ?

ಖಾನ್ : ಶಿಕ್ಷಣ, ಆರೋಗ್ಯ, ಮಹಿಳಾ ಮತ್ತು ಮಕ್ಕಳ ಕಲ್ಯಾಣ- ಈ ಮೂರೂ ಇಲಾಖೆಗಳು ಸಹಯೋಗದಲ್ಲಿ ಕಾರ್ಯ ನಿರ್ವಹಿಸಿದರೆ, ನಾವು ಬದಲಾವಣೆಯನ್ನು ತರಬಹುದು ಅಥವಾ ಕಾಣಬಹುದು.

ವಿಜಯಶ್ರೀ: ಸಮುದಾಯದೊಡನೆ ಸಹಯೋಗ, ಶಾಲಾ ದಿನಚರಿ, ವಿವಿಧ ಸರ್ಕಾರಿ ಇಲಾಖೆಗಳೊಂದಿಗಿನ ಕೆಲಸ ಮತ್ತು ಎಲ್ಲದಕ್ಕೂ ಮುಖ್ಯವಾಗಿ ಪ್ರತಿಯೊಂದು ಮಗುವಿನ ದೈಹಿಕ ಮತ್ತು ಮಾನಸಿಕ ಆರೋಗ್ಯವನ್ನು ಸುಧಾರಿಸುವುದರತ್ತ ಗಮನ-ಇವೆಲ್ಲ ಸಂಗತಿಗಳನ್ನೂ ಹೇಗೆ ನಿಭಾಯಿಸುತ್ತೀರಿ?

ಖಾನ್; ಶಿಕ್ಷಕರು, ಶಿಕ್ಷಕೇತರ ಸಿಬ್ಬಂದಿ ಹಾಗೂ ಪಾಲಕರನ್ನು ಒಳಗೊಂಡ ಒಂದು ಸಮರ್ಥವಾದ ತಂಡ ನಮ್ಮದು. ಇಲ್ಲಿನ ವ್ಯವಸ್ಥೆಯು ಪಾರದರ್ಶಕವಾಗಿದೆ. ಉದಾಹರಣೆಗೆ, ಯಾವುದಾದರೂ ಅನುದಾನ ಅಥವಾ ವಿದ್ಯಾರ್ಥಿವೇತನ ಬಿಡುಗಡೆಯಾಗಿದ್ದರೆ, ನಾನು ಆ ಕೂಡಲೇ ಭಾಗೀದಾರರೆಲ್ಲರನ್ನೂ ಸೇರಿಸಿ ಸಭೆ ಕರೆಯುತ್ತೇನೆ. ಹಣವನ್ನು ಹೇಗೆ ಬಳಸಬೇಕು ಎಂಬುದರ ಕುರಿತು ನಾವೆಲ್ಲರೂ ಸೇರಿ ಒಮ್ಮತದಿಂದ ತೀರ್ಮಾನಿಸುತ್ತೇವೆ. ಒಂದು ಶ್ರೇಷ್ಠ ಉದ್ದೇಶಕ್ಕಾಗಿ ಕೆಲಸ ಮಾಡುವಾಗ ಪಾರದರ್ಶಕತೆಯನ್ನು ಕಾಪಾಡಿಕೊಳ್ಳುವುದು ಮತ್ತು ಸಂಪನ್ಮೂಲಗಳನ್ನು ಸಮರ್ಪಕವಾಗಿ ಬಳಸಿಕೊಳ್ಳುವುದು ತುಂಬಾ ಮುಖ್ಯ.

ವಿಜಯಶ್ರೀ : ಇಂತಹ ಅದ್ಭುತ ಕಾರ್ಯವೊಂದನ್ನು ನೀವು ಸಾಧಿಸಿರುವ ಈ ಹೊತ್ತಿನಲ್ಲಿ, ನಿಮ್ಮ ಬದುಕಿನ ಗುರಿಯೇನು ?

ಖಾನ್ : ನಾನು ಏನನ್ನೂ ಮಾಡಿಲ್ಲ, ಈ ಕ್ಷೇತ್ರದಲ್ಲಿ ಇನ್ನೂ ಮಾಡಬೇಕಾದ ಕೆಲಸಗಳು ಬಹಳಷ್ಟಿವೆ ಎಂಬುದು ನನ್ನ ಬಲವಾದ ಅನಿಸಿಕೆ. ಎಲ್ಲ ಮಕ್ಕಳಿಗೂ ಬದುಕುವ ಹಕ್ಕಿದೆ. ಅದು ಅವರ ಮೂಲಭೂತ ಹಕ್ಕು. ವಿಶೇಷ ಸಾಮರ್ಥ್ಯದ ಮಕ್ಕಳ ವಿಶೇಷ ಅಗತ್ಯಗಳಿಗೆ ಸೂಕ್ತ ಚಿಕಿತ್ಸೆ, ಕಾಳಜಿ ನೀಡುವಂತಹ ಸುಸಜ್ಜಿತ ಆಸ್ಪತ್ರೆಯೊಂದನ್ನು ನಾವು ಆರಂಭಿಸಬೇಕು ಎನ್ನುವುದು ನನ್ನ ಆಶಯ.ಎಲ್ಲ ಮಕ್ಕಳಿಗೂ ಸಮಾನ ಅವಕಾಶಗಳು ಸಿಗಬೇಕು ಎಂದೂ ನಾನು ಭಾವಿಸುತ್ತೇನೆ. ನಮ್ಮ ಓರ್ವ ಹಳೆಯ ವಿದ್ಯಾರ್ಥಿ ಈಗ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪದವಿ ವ್ಯಾಸಂಗ ಮಾಡುತ್ತಿದ್ದಾನೆ. ಅವನು ಇನ್ನಿತರ ಯಾವುದೇ ವಿದ್ಯಾರ್ಥಿಯ ಹಾಗೆ ಜೀವನ ಸಾಗಿಸುತ್ತಿದ್ದಾನೆ ಎಂಬುದನ್ನು ತಿಳಿದಾಗ ನಮಗೆ ಹೆಮ್ಮೆಯಾಗುತ್ತದೆ. ಇಲ್ಲಿಯ ಶಾಲೆಯಲ್ಲಿ ಕಲಿಯುತ್ತಿದ್ದಾಗ ಆತ ಪಡೆದ ವಾಕ್ ಚಿಕಿತ್ಸೆಯಿಂದಾಗಿ ಅದು ಸಾಧ್ಯವಾಗಿದೆ. ನಮ್ಮ ಶಾಲೆಗೆ, 'ವಿಶೇಷ ಅಗತ್ಯ ಬೇಕಾದ ಮಕ್ಕಳಿಗೆ ಸಮಾನ ಅವಕಾಶಗಳನ್ನು ಒದಗಿಸುವ ಶಾಲೆ' ಎಂಬ ಘೋಷವಾಕ್ಯವನ್ನು ಪರಿಗಣಿಸುವಂತೆ ನಾನು ಶಿಕ್ಷಣ ಇಲಾಖೆಯನ್ನು ವಿನಂತಿಸಿ-ಕೊಳ್ಳುತ್ತೇನೆ.











**ವಿಜಯಶ್ರೀ**ಯವರು ಸಂಪನ್ಮೂಲ ವ್ಯಕ್ತಿಯಾಗಿದ್ದು ಅಜೀಂ ಪ್ರೇಮ್‌ಜಿ ಫೌಂಡೇಷನ್‌ನಲ್ಲಿ ಬೆಂಗಳೂರು ಜಿಲ್ಲೆಯ ನಗರ ಶಾಲಾ ಉಪಕ್ರಮದ (Urban School Initiative) ಭಾಗವಾಗಿದ್ದಾರೆ. ಅವರನ್ನು vijayshree.ps@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಸಹನಾ ಹೆಗಡೆ** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ಕನ್ನಡದಲ್ಲಿ ವಿಚಾರ ಸಂಕಿರಣ

**“ವಿಜ್ಞಾನ ಮತ್ತು ವಿಜ್ಞಾನ ಶಿಕ್ಷಣ ಹಾಗೂ ಗಣಿತ ಮತ್ತು ಗಣಿತ ಶಿಕ್ಷಣ: ಅಭ್ಯಾಸಗಳು, ನಿರೀಕ್ಷೆಗಳು ಮತ್ತು ಸವಾಲುಗಳು”**

ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯ ಪ್ರಸ್ತುತ ಶಾಲಾಶಿಕ್ಷಣ ಮತ್ತು ಸಂಬಂಧಿತ ಅಭಿವೃದ್ಧಿ ಕ್ಷೇತ್ರಗಳಲ್ಲಿನ ಜ್ಞಾನ ಭಂಡಾರವನ್ನು ಭಾರತೀಯ ಭಾಷೆಗಳಲ್ಲಿ ಕೂಡಾ ಲಭ್ಯವಾಗುವಂತೆ ಮಾಡುವ ಉದ್ದೇಶವನ್ನು ಹೊಂದಿದೆ. ಉತ್ತಮ ಗುಣಮಟ್ಟದ ವಾಚನ ಸಾಮಗ್ರಿಗಳನ್ನು ಇಂಗ್ಲಿಷ್‌ನಿಂದ ಕನ್ನಡ ಭಾಷೆಗೆ ಅನುವಾದಿಸುವ ಜೊತೆಗೆ ಕನ್ನಡದಲ್ಲಿ ವಾರ್ಷಿಕ ವಿಚಾರ ಸಂಕಿರಣ ಸರಣಿಗಳ ಮೂಲಕ ಶೈಕ್ಷಣಿಕ ವಿಚಾರಗಳ ಬಗ್ಗೆ ವಿದ್ವತ್‌ಪೂರ್ಣ ಸಂವಾದಗಳನ್ನು ಆಯೋಜಿಸಿ ಕನ್ನಡದಲ್ಲಿ ಬರವಣಿಗೆಯನ್ನು ಉತ್ತೇಜಿಸುವ ಗುರಿಯನ್ನು ಹೊಂದಿದೆ. ಇದರ ಭಾಗವಾಗಿ 2020–21ನೇ ಸಾಲಿನಲ್ಲಿ ವಿಜ್ಞಾನ ಮತ್ತು ವಿಜ್ಞಾನ ಶಿಕ್ಷಣ ಹಾಗೂ ಗಣಿತ ಮತ್ತು ಗಣಿತ ಶಿಕ್ಷಣ: ಅಭ್ಯಾಸಗಳು, ನಿರೀಕ್ಷೆಗಳು ಮತ್ತು ಸವಾಲುಗಳು ವಿಷಯಕ್ಕೆ ಸಂಬಂಧಿಸಿದಂತೆ ಕನ್ನಡದಲ್ಲಿ ವಿಚಾರ ಸಂಕಿರಣಗಳನ್ನು ಆಯೋಜಿಸುತ್ತಿದೆ. ಈ ಕುರಿತಂತೆ ಹೆಚ್ಚಿನ ಮಾಹಿತಿಗಾಗಿ ಪ್ರಕಟಣೆಯನ್ನು ಗಮನಿಸಿ.

## ವಿಚಾರ ಸಂಕಿರಣ 1 – ವಿಜ್ಞಾನ ಮತ್ತು ವಿಜ್ಞಾನ ಶಿಕ್ಷಣ – ಲೇಖನಗಳಿಗಾಗಿ ಆಹ್ವಾನ

ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯವು ರಾಜ್ಯದ ಇತರ ವಿಶ್ವವಿದ್ಯಾಲಯ / ಸಹಯೋಗಿ ಸಂಸ್ಥೆಗಳೊಂದಿಗೆ ವಿಜ್ಞಾನ ಮತ್ತು ವಿಜ್ಞಾನ ಶಿಕ್ಷಣದ ಕುರಿತಂತೆ ವಿಚಾರ ಸಂಕಿರಣವನ್ನು ಕನ್ನಡದಲ್ಲಿ ನಡೆಸಲು ನಿರ್ಧರಿಸಿದೆ.

**ವಿಚಾರ ಸಂಕಿರಣದಲ್ಲಿ ಮಂಡಿಸಬಹುದಾದ ಪ್ರಬಂಧದ ಉಪ–ವಿಷಯಗಳು:**

1 **ವಿಜ್ಞಾನ ಮತ್ತು ಸಮಾಜದ ನಡುವಿನ ಪರಸ್ಪರ ಸಂಬಂಧ**
- ವಿಜ್ಞಾನದ ಸ್ವರೂಪ, ವ್ಯಾಪ್ತಿ ಮತ್ತು ಅದರ ಭಾಷೆ
- ಸಮಾಜ, ಅಭಿವೃದ್ಧಿ ಮತ್ತು ತಂತ್ರಜ್ಞಾನ ಹಾಗೂ ವಿಜ್ಞಾನದೊಂದಿಗೆ ಅವುಗಳ ಪರಸ್ಪರ ಸಂಬಂಧ
- ವಿಜ್ಞಾನ, ಸಾಮಾಜೀಕರಣ ಮತ್ತು ಶಿಕ್ಷಣ

2. **ಪ್ರಾಥಮಿಕ, ಹಿರಿಯ ಪ್ರಾಥಮಿಕ ಮತ್ತು ಪ್ರೌಢಶಾಲಾ ತರಗತಿಗಳಲ್ಲಿ ವಿಜ್ಞಾನ ಮತ್ತು ವಿಜ್ಞಾನ ಶಿಕ್ಷಣ**
- ವಿಜ್ಞಾನ ಪಠ್ಯಕ್ರಮ: ಪಠ್ಯಸೂಚಿ, ಪಠ್ಯಪುಸ್ತಕ, ಬೋಧನಾ ಕಲಿಕಾ ಪ್ರಕ್ರಿಯೆ ಮತ್ತು ವಿದ್ಯಾರ್ಥಿಗಳ ಮೌಲ್ಯಮಾಪನ
- ಭಾಷೆ ಮತ್ತು ಇತರ ವಿಷಯಗಳೊಂದಿಗೆ ವಿಜ್ಞಾನ ಶಿಕ್ಷಣದ ಸಂಬಂಧ; ಸಂಸ್ಕೃತಿ ಮತ್ತು ಸಾಂದರ್ಭಿಕ ಹಿನ್ನೆಲೆ
- ವಿಜ್ಞಾನ ಶಿಕ್ಷಣವನ್ನು ಒದಗಿಸುವ ಸಂರಚನೆಗಳು, ಅವುಗಳ ಸ್ವರೂಪ ಮತ್ತು ವಿಧಾನ

3. **ಪದವಿ ಪೂರ್ವ ಮತ್ತು ಉನ್ನತ ಶಿಕ್ಷಣ ಹಂತಗಳಲ್ಲಿ ವಿಜ್ಞಾನ**
- ವಿಜ್ಞಾನ ಪಠ್ಯಕ್ರಮ: ಪಠ್ಯಸೂಚಿ, ಪಠ್ಯಪುಸ್ತಕ, ಬೋಧನಾ ಕಲಿಕಾ ಪ್ರಕ್ರಿಯೆ ಮತ್ತು ವಿದ್ಯಾರ್ಥಿಗಳ ಮೌಲ್ಯಮಾಪನ
- ಉನ್ನತ ಶಿಕ್ಷಣದಲ್ಲಿ ವಿಜ್ಞಾನದ ಪ್ರಕೃತಿ, ಸಂರಚನೆ ಮತ್ತು ಸ್ವರೂಪ
- ವಿಜ್ಞಾನದ ಶಿಕ್ಷಣದ ಗುಣಮಟ್ಟ, ಸವಾಲುಗಳು ಮತ್ತು ಉನ್ನತ ಶಿಕ್ಷಣದಲ್ಲಿ ವಿಜ್ಞಾನದ ಒಳಗೊಳ್ಳುವಿಕೆ

ವಿಜ್ಞಾನದ ಶಿಕ್ಷಣದ ಗುಣಮಟ್ಟ, ಸವಾಲುಗಳು ಮತ್ತು ಉನ್ನತ ಶಿಕ್ಷಣದಲ್ಲಿ ವಿಜ್ಞಾನದ ಒಳಗೊಳ್ಳುವಿಕೆ

## ವಿಚಾರ ಸಂಕಿರಣ 2 – ಗಣಿತ ಶಿಕ್ಷಣ: ಅಭ್ಯಾಸಗಳು, ನಿರೀಕ್ಷೆಗಳು ಮತ್ತು ಸವಾಲುಗಳು – ಲೇಖನಗಳಿಗಾಗಿ ಆಹ್ವಾನ

**ವಿಚಾರ ಸಂಕಿರಣದಲ್ಲಿ ಮಂಡಿಸಬಹುದಾದ ಪ್ರಬಂಧದ ಉಪ–ವಿಷಯಗಳು:**

1. **ಗಣಿತದ ತರಗತಿ**

- ಗಣಿತದ ಬೋಧನೆ ಹೇಗಿರಬೇಕು?
- ತರಗತಿಯಲ್ಲಿ ಗಣಿತದ ಬೋಧನಾ ಕಲಿಕಾ ಪ್ರಕ್ರಿಯೆ ಹೇಗಿರಬೇಕು?

2. **ಗಣಿತ ಕಲಿಕೆಯ ಪ್ರಕ್ರಿಯೆಗಳೇನು?**

- ಗಣಿತೀಯ ವಿನ್ಯಾಸ (ಪ್ಯಾಟರ್ನ್), ಅವುಗಳ ಗುರುತಿಸುವಿಕೆ ಮತ್ತು ಸಾಮಾನ್ಯೀಕರಣದ ಅಧ್ಯಯನ
- ಗಣಿತ ಕಲಿಕೆಯಲ್ಲಿ ಬೋಧನಾ ಕಲಿಕಾ ಸಾಮಗ್ರಿಗಳು ಮತ್ತು ತಂತ್ರಜ್ಞಾನದ ಪಾತ್ರವೇನು?
- ಗಣಿತ ತರಗತಿಗಳ ಡಿಜಿಟಲೀಕರಣ ಎಂದರೇನು? ಇ–ಕಲಿಕೆ, ಸಮ್ಮಿಳಿತ ಬೋಧನಾ ಕಲಿಕಾ ವಿಧಾನ, ಜಿಯೊಜಿಬ್ರಾದಂತಹ ತಂತ್ರಾಂಶಗಳ ಅಳವಡಿಕೆ ಗಣಿತ ಕಲಿಕೆಯನ್ನು ಹೇಗೆ ಪರಿಣಾಮಕಾರಿಯಾಗಿಸಬಲ್ಲವು?
- ದೃಶ್ಯೀಕರಣದಲ್ಲಿ ಹೇಗೆ ನೆರವಾಗುತ್ತವೆ? ಗಣಿತ ಶಿಕ್ಷಣದಲ್ಲಿ ಒಟ್ಟಾರೆ ತಂತ್ರಜ್ಞಾನದ ಪಾತ್ರ ಮತ್ತು ಇದಕ್ಕೆ ಸಂಬಂಧಿಸಿದ ಸವಾಲುಗಳನ್ನು ಹೇಗೆ ಎದುರಿಸಬೇಕು?

3. **ಗಣಿತ ಪಠ್ಯಕ್ರಮ ಮತ್ತು ಸಮಾಜ:**

- ಗಣಿತ ವಿಷಯದ ಆಯಾಮಗಳಾದ ಸಂಖ್ಯೆಗಳು ಮತ್ತು ಸಂಖ್ಯಾಪ್ರಕ್ರಿಯೆಗಳು, ಬೀಜಗಣಿತ, ದತ್ತಾಂಶದೊಡನೆ ಕಾರ್ಯ, ರೇಖಾಗಣಿತ, ಅಳತೆ, ಮುಂತಾದ ಆಯಾಮಗಳು ಸಂಯುಕ್ತವಾಗಿ ಬೆಳೆಸುವ ಗಣಿತೀಯ ಚಿಂತನೆ, ಅದನ್ನು ಬೆಳೆಸಲು ಬೇಕಾದ ಗಣಿತ ಶಿಕ್ಷಣದ ದೃಷ್ಟಿ, ಅದಕ್ಕಾಗಿ ಬೇಕಾಗಿರುವ ಪೂರಕ ವಾತಾವರಣವನ್ನು ತರಗತಿಯಲ್ಲಿ ಹೇಗೆ ಸೃಷ್ಟಿ ಮಾಡುವುದು?
- ಗಣಿತ ಶಿಕ್ಷಣಕ್ಕೆ ಇರುವ ನಿರ್ದಿಷ್ಟ ಭಾಷೆ ಹಾಗೂ ಅದರ ಸಾಂಸ್ಕೃತಿಕ, ಸಾಮಾಜಿಕ ಮತ್ತು ರಾಜನೈತಿಕ ಆಯಾಮಗಳನ್ನು ಕೂಡ ಇಲ್ಲಿ ಗಮನಿಸಬೇಕಾಗುತ್ತದೆ. ಎಲ್ಲರಿಗೂ ಗಣಿತ ಕಲಿಸಬೇಕೇ? ಎಲ್ಲರಿಗೂ ಕಲಿಸುವ ಗಣಿತದ ಸ್ವರೂಪ ಹೇಗಿರಬೇಕು?
- ಗಣಿತ ಶಿಕ್ಷಣದಲ್ಲಿ ಸಮಾನತೆ ಮತ್ತು ನ್ಯಾಯದ ಮೌಲ್ಯಗಳನ್ನು ಹೇಗೆ ನೋಡಲಾಗುತ್ತದೆ? ಇದು ಭಾಷೆ ಮತ್ತು ಸಂಸ್ಕೃತಿಯೊಂದಿಗೆ ಯಾವ ರೀತಿಯ ಸಂಬಂಧ ಹೊಂದಿದೆ?

4. **ವಿದ್ಯಾರ್ಥಿಗಳ ಹಿನ್ನೆಲೆಯ ಅರಿವು:**

- ಎಲ್ಲರಿಗಾಗಿ ಗಣಿತ ಮತ್ತು ಎಲ್ಲರೂ ಗಣಿತ ಕಲಿಯುವುದನ್ನು ಹೇಗೆ ಸಾಧ್ಯವಾಗಿಸುವುದು?
- ತರಗತಿಗಳಲ್ಲಿ ಎಲ್ಲ ವಿದ್ಯಾರ್ಥಿಗಳನ್ನು ಒಳಗೊಳ್ಳುವ ಸಮನ್ವಯ ಶಿಕ್ಷಣದ ವ್ಯವಸ್ಥೆ ಮತ್ತು ಪ್ರಕ್ರಿಯೆ ಹೇಗಿರಬೇಕು?
- ಭಾಷೆ ಮತ್ತು ಗಣಿತದ ಸಂಬಂಧವೇನು?
- ಮಕ್ಕಳ ಹಿನ್ನೆಲೆ, ಭಾಷೆ ಮತ್ತು ಸಂಸ್ಕೃತಿಯನ್ನು ಗಣಿತ ಬೋಧನೆಯಲ್ಲಿ ಯಾವ ರೀತಿಯಾಗಿ ಉಪಯೋಗಿಸಿಕೊಳ್ಳಬೇಕು?

5. **ಸೇವಾಪೂರ್ವ ಮತ್ತು ಸೇವಾನಿರತ ಹಂತಗಳಲ್ಲಿ ಗಣಿತ ಶಿಕ್ಷಕರ ವೃತ್ತಿಪರ ಬೆಳವಣಿಗೆ**

6. **ಏನು ಕಲಿಸಬೇಕು ಮತ್ತು ಹೇಗೆ ಕಲಿಸಬೇಕು ಎಂಬುದರ ಅರಿವು**

## ಯಾರು ಭಾಗವಹಿಸಬಹುದು:

- ಶಿಕ್ಷಕರು, ಶಿಕ್ಷಕ ಶಿಕ್ಷಕರು (ಶಿಕ್ಷಕ ಶಿಕ್ಷಣ ಸಂಸ್ಥೆಗಳ ಅಧ್ಯಾಪಕ ವೃಂದ), ಸಂಶೋಧಕರು ಮತ್ತು ಸಂಶೋಧನಾ ವಿದ್ಯಾರ್ಥಿಗಳು, ವಿಶ್ವವಿದ್ಯಾನಿಲಯಗಳ ಅಧ್ಯಾಪಕ ವೃಂದ, ಸರ್ಕಾರೇತರ ಸಂಘಟನೆಗಳ ಸದಸ್ಯರು.

**ಲೇಖನಗಳ ಸಾರಾಂಶ (Abstract) ಸಲ್ಲಿಕೆ:**

- ಲಘು ಲೇಖನಗಳಿಗೆ ೫೦೦ ಪದಗಳು ಮತ್ತು ದೀರ್ಘ ಲೇಖನಗಳಿಗೆ ೮೦೦ ಪದಗಳ ಮಿತಿಯಲ್ಲಿ ಲೇಖನದ ಸಾರಾಂಶವನ್ನು (Abstract) ಕಳುಹಿಸುವುದು. ಸಾರ ಲೇಖನ ಆಯ್ಕೆಯಾದ ನಂತರದಲ್ಲಿ ಪೂರ್ಣಲೇಖನಕ್ಕೆ ಆಹ್ವಾನ ನೀಡಲಾಗುವುದು.

ಸಾರಲೇಖನ ಕಳುಹಿಸಬೇಕಾದ ವಿಧಾನ: ನುಡಿ ೦೧ಇ ಅಕ್ಷರ ವಿನ್ಯಾಸದಲ್ಲಿ ವರ್ಡ್‌ಫೈಲ್ ಫಾರ್ಮ್ಯಾಟ್‌ನಲ್ಲಿ ಕಳುಹಿಸಬೇಕು ಸಾರಾಂಶ ಕಳುಹಿಸಬೇಕಾದ ಇ–ಮೇಲ್ ವಿಳಾಸ:

**ಗಣಿತ ವಿಚಾರ ಸಂಕಿರಣಕ್ಕೆ:** kan.mathsseminar@apu.edu.in

**ವಿಜ್ಞಾನ ವಿಚಾರ ಸಂಕಿರಣಕ್ಕೆ:** kan.scienceseminar@apu.edu.in

**ಸಾರಲೇಖನ ಸ್ವೀಕೃತಿಗೆ ಕೊನೆಯ ದಿನಾಂಕ: 15-01-2021**

**ವಿಚಾರ ಸಂಕಿರಣದ ದಿನಾಂಕ ಮತ್ತು ಸ್ಥಳ:** ವಿಚಾರ ಸಂಕಿರಣವನ್ನು ೨೦೨೧ರ ಮಾರ್ಚ್ ೨೫ರಿಂದ ೨೭ರವರೆಗೆ ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ, ಕಲಬುರಗಿಯಲ್ಲಿ ಮತ್ತು ೨೦೨೧ರ ಏಪ್ರಿಲ್ ೨೧ರಿಂದ ೨೩ರವರೆಗೆ ದಾವಣಗೆರೆ ವಿಶ್ವವಿದ್ಯಾಲಯದ ಸಹಯೋಗದಲ್ಲಿ ಆಯೋಜಿಸಲಾಗುವುದು.

**ಹೆಚ್ಚಿನ ವಿವರಗಳಿಗಾಗಿ ಮೇಲಿನ ಇ-ಮೇಲ್ ವಿಳಾಸಗಳಿಗೆ ಬರೆಯಿರಿ ಅಥವಾ ಇವರಿಗೆ ಕರೆ ಮಾಡಿ:**
**ದಿನೇಶ್ ಮಡಗಾಂವ್‌ಕರ್ 98440 49489 / ಮಧುಕರ ಎಸ್ ಪುಟ್ಟಿ 77604 46604**

Azim Premji University

# ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿಯ ಪ್ರಕಟಣೆಗಳು


















